

ಕರ್ನಾಟಕ ಸರ್ಕಾರ

# ಬಿಳಿ ಕೊಕ್ಕರೆ ಹಾಗೂ ವಿಶ್ವದ ಆಖ್ಯಾಯಿಕೆಗಳು

ಗೌರೀಶ ಕಾಯ್ಕಿಣಿ



ಕುವೆಂಪು ಭಾಷಾ ಭಾರತಿ ಪ್ರಾಧಿಕಾರ
ಬೆಂಗಳೂರು ೫೬೦೦೫೬

# ಬಿಳಿ ಕೊಕ್ಕರೆ

# ಹಾಗೂ

# ವಿಶ್ವದ ಆಖ್ಯಾಯಿಕೆಗಳು

**ಗೌರೀಶ ಕಾಯ್ಕಿಣಿ**

ಕುವೆಂಪು ಭಾಷಾ ಭಾರತಿ ಪ್ರಾಧಿಕಾರ

ಕಲಾಗ್ರಾಮ, ಜ್ಞಾನಭಾರತಿ

ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ, ಮಲ್ಲತ್ತಹಳ್ಳಿ

ಬೆಂಗಳೂರು - ೫೬೦ ೦೫೬

ಮೂಲ ಮುದ್ರಣ: ೧೯೫೭

ಸುಲಭ ಸಾಹಿತ್ಯ ಪ್ರಕಾಶನ: ಕುಮಟಾ

ಸಮೂಹ ಪುಸ್ತಕಾಲಯ, ಧಾರವಾಡ

BILI KOKKARE HAAGU VISWADA AKHYAYIKEGALU: Selected Short Stories and world famous legends; Translated by Gowreesha Kaikini into Kannada; Published by Sri Ishwar K. Mirji, Registrar, Kuvempu Bhasha Bharathi Pradhikara, Kalagrama, Jnana Bharathi, Mallattahalli, Bengaluru – 560056;

First Edition : 2019; p.p: viii + 262; Price: Rs. 150/-



ಮೊದಲ ಮುದ್ರಣ : ೨೦೧೯

ಪುಟಗಳು : viii + ೨೬೨

ಬೆಲೆ : ರೂ.೧೫೦/-

ಪ್ರತಿಗಳು : ೫೦೦

ಪ್ರಕಾಶಕರು

**ಶ್ರೀ ಈಶ್ವರ್ ಕು. ಮಿರ್ಜಿ**

ರಿಜಿಸ್ಟ್ರಾರ್

ಕುವೆಂಪು ಭಾಷಾ ಭಾರತಿ ಪ್ರಾಧಿಕಾರ

ಕಲಾಗ್ರಾಮ, ಜ್ಞಾನಭಾರತಿ

ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ

ಮಲ್ಲತ್ತಹಳ್ಳಿ, ಬೆಂಗಳೂರು-೫೬೦ ೦೫೬

ಮುಖಪುಟ ವಿನ್ಯಾಸ : **ಯು.ಟಿ. ಸುರೇಶ್**

ISBN No. : 978-93-8759-284-1

**ಡಾ. ಮೋಹನ ಕುಂಟಾರ್**

**ಡಾ. ರಾಮಕೃಷ್ಣ ಮರಾಠೆ**

**ಶ್ರೀ. ಬಿ. ಪೀರ್ ಬಾಷಾ**

**ರಿಜಿಸ್ಟ್ರಾರ್**

**ಶ್ರೀ ಈಶ್ವರ್ ಕು. ಮಿರ್ಜಿ**


ಮುದ್ರಕರು

**ರಾಜಾ ಪ್ರಿಂಟರ್**

ನಂ. ೨೦/೧, ೧ನೇ ಅಡ್ಡರಸ್ತೆ, ೩ನೇ ಮುಖ್ಯ ರಸ್ತೆ

ಪುಖ್‌ರಾಜ್ ಲೇಔಟ್, ಬನ್ನೇರುಘಟ್ಟ ರಸ್ತೆ

ಬೆಂಗಳೂರು-೫೬೦ ೦೩೦. ದೂ: ೦೮೦-೨೨೨೩೪೦೬೬

# ಅಧ್ಯಕ್ಷರ ಮಾತು

ಕುವೆಂಪು ಭಾಷಾ ಭಾರತಿ ಪ್ರಾಧಿಕಾರವನ್ನು ಕರ್ನಾಟಕ ಸರಕಾರವು ಕನ್ನಡ ಮತ್ತು ಇತರ ಭಾಷೆಗಳೊಡನೆ ತಿಳಿವಿನ ನಂಟನ್ನು ಬೆಳೆಸುವ ಗುರಿಯಿಂದ ರೂಪಿಸಿದೆ. ಬೇರೆ ಭಾಷಗಳ ತಿಳಿವನ್ನು ಕನ್ನಡಕ್ಕೆ ದೊರಕಿಸಲು ಅನುವಾಗುವಂತೆ ಸಿದ್ಧ ಕೃತಿಗಳ ಅನುವಾದ ಮತ್ತು ಪ್ರಕಟಣೆಯ ಕೆಲಸದಲ್ಲಿ ಪ್ರಾಧಿಕಾರವು ತೊಡಗಿಕೊಂಡಿದೆ. ಅಲ್ಲದೆ ಕನ್ನಡದ. ತಿಳಿವು ಇತರ ನುಡಿಗಳಿಗೂ ಸಿಗುವಂತಾಗಲು ಬೇಕಾದ ಯೋಜನೆಗಳನ್ನು ಹಮ್ಮಿಕೊಂಡಿದೆ. ಈವರೆಗೆ ಸುಮಾರು ಮುನ್ನೂರ ಎಪ್ಪತ್ತೈದು ಪುಸ್ತಕಗಳನ್ನು ಕನ್ನಡಿಗರ ಓದಿನ ಲೋಕಕ್ಕೆ ಪ್ರಾಧಿಕಾರವು ಸೇರಿಸಿದೆ. ಅಲ್ಲದೆ ಸರಕಾರವು ಬೇರೆ ಯೋಜನೆಗಳ ಮೂಲಕ ಪ್ರಾಧಿಕಾರಕ್ಕೆ ಕನ್ನಡ ಜಗತ್ತನ್ನು ವಿಸ್ತರಿಸುವ ಹೊಣೆಯನ್ನೂ ನೀಡಿದೆ. ಅದಕ್ಕೆ ಬೇಕಾದ ಅನುದಾನವನ್ನೂ ಒದಗಿಸಿದೆ. ಕನ್ನಡ ನಾಡಿನ ಪ್ರಾಜ್ಞರ ನೆರವಿನಿಂದ ಈವರೆಗೆ ಪ್ರಾಧಿಕಾರವು ತನಗೆ ವಹಿಸಲಾದ ಹೊಣೆಯನ್ನು ಯಶಸ್ವಿಯಾಗಿ ನಿರ್ವಹಿಸುತ್ತಾ ಬಂದಿದೆ.

ನಮ್ಮ ಕಾಲದ ಅಗತ್ಯಕ್ಕೆ ಬೇಕಾದ ಜ್ಞಾನ-ವಿಜ್ಞಾನಗಳನ್ನು ಭಾರತೀಯ ಮತ್ತು ಜಾಗತಿಕ ಮಟ್ಟದಲ್ಲಿನ ಲೇಖನ ಮತ್ತು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸುವ ದಿಕ್ಕಿನಲ್ಲಿ ಕಾರ್ಯಪ್ರವೃತ್ತವಾಗಿದೆ. ಇದರ ಜೊತೆಗೆ ಕನ್ನಡದ ಉತ್ತಮ ಜ್ಞಾನ ವಿಜ್ಞಾನಗಳ ಕೃತಿಗಳನ್ನು ಭಾರತೀಯ ಮತ್ತು ಇಂಗ್ಲಿಷ್ ಭಾಷಗೆ ಅನುವಾದಿಸುವ ಕೆಲಸವೂ ಮುಂದುವರಿಸಲಾಗುತ್ತಿದೆ.

ಬಿಳಿಕೊಕ್ಕರೆ ಮತ್ತು ವಿಶ್ವದ ಆಖ್ಯಾಯಿಕೆಗಳು ಕ್ರಮವಾಗಿ ಜಗತ್ತಿನ ಅತ್ಯುತ್ತಮ ಕತೆಗಳು ಮತ್ತು ಜಗತ್ತಿನ ಕ್ಲಾಸಿಕ್ ಎನ್ನಬಹುದಾದ ಆಖ್ಯಾಯಿಕೆಗಳನ್ನು ಒಳಗೊಂಡಿರುವ ಕೃತಿಯಾಗಿದೆ. ಅಮೇರಿಕಾ ಮತ್ತು ಇಂಗ್ಲೆಂಡಿನ ಪ್ರಸಿದ್ಧ ಕತೆಗಾರರು ಮತ್ತು ಗ್ರೀಕ್ ಮತ್ತು ಚೀನಾ, ಅಮೆರಿಕಾದ ಶ್ರೇಷ್ಠ ಲೇಖಕರ ಕೃತಿಗಳಿಂದಾಯ್ದ ಇಪ್ಪತ್ತು ಆಖ್ಯಾಯಿಕೆಗಳು

ಮತ್ತು ಆರು ಕಥೆಗಳು ಇಲ್ಲಿವೆ. ಈ ಕತೆಗಳು ಮತ್ತು ಆಖ್ಯಾಯಿಕೆಗಳಲ್ಲಿ ಆತ್ಮಚರಿತ್ರಾತ್ಮಕ ಸ್ವರೂಪದ ಕತೆಗಳಿವೆ. ಆಯಾ ದೇಶಗಳ ಜನಜೀವನದ ಬದುಕಿನ ಸ್ವರೂಪದ ಚಿತ್ರಣವಿದೆ. ಮನುಷ್ಯ-ಮನುಷ್ಯರೊಳಗಿನ ಸಂಘರ್ಷಕ್ಕಿಂತ ನಿಸರ್ಗದಲ್ಲಿರುವ ಹಿಂಸಾತ್ಮಕ ಹೋರಾಟಗಳು ಕಡಿಮೆ ಮಟ್ಟದವು. ಮನುಷ್ಯ ಪ್ರಾಣಿಗಳಿಗಿಂತ ಹೆಚ್ಚು ಹಿಂಸಾಮಯಿ ಎಂಬುದರ ಚಿತ್ರಣವಿದೆ. ಮಾನವ ಮತ್ತು ಪ್ರಕೃತಿ ವಲಯದ ಮನೋಹರವಾದ ಹೋರಾಟವಿದೆ. ದೈವವು ಮಾನವನನ್ನು ಆಡಿಸಿ ಕೊಲ್ಲುವ ವಿಧಿವಿಲಾಸದ ಸ್ವರೂಪದ ವಿವರಗಳಿವೆ. ಒಂದು ಇಕ್ಕಟ್ಟಿನ ಸಂದರ್ಭಕ್ಕೆ ಎಲ್ಲಾ ಆಗುಹೋಗುಗಳನ್ನು ಹಿಗ್ಗಾಮುಗ್ಗಾ ಹೊಂದಿಸಿಕೊಳ್ಳುವ ಹಠ ಮತ್ತು ಅದರಿಂದಾಗುವ ಹಿಂಸೆಯ ಸ್ವರೂಪದ ಧ್ವನಿಪೂರ್ಣವಾದ ವಿವರಗಳಿವೆ. ಪ್ರೀತಿಯು ಸಾವನ್ನು ಗೆಲ್ಲಬಲ್ಲದು, ಕರೆಯೂ ಸಾವನ್ನು ಗೆಲ್ಲಬಹುದು. ಪ್ರೀತಿ ಮತ್ತು ಕಲೆ ಈ ಎರಡೂ ಶಕ್ತಿಗಳು ಕೂಡಿದಾಗ 'ಸಾವು' ಸೋಲುತ್ತದೆ ಎಂಬ ಧ್ವನಿಯು ಈ ಎಲ್ಲಾ ಕಥೆಗಳ ಮತ್ತು ಆಖ್ಯಾಯಿಕೆಗಳ ಕಲಾತ್ಮಕವಾದ ವಿನ್ಯಾಸದಲ್ಲಿದೆ, ಹರಿಯುತ್ತಿದೆ ಎಂಬುದು ಓದುಗನಿಗೆ ಅನುಭವಕ್ಕೆ ಬರುತ್ತದೆ. ಇಂತಹ ಮಹತ್ವದ ಕಥೆ, ಆಖ್ಯಾಯಿಕೆಗಳನ್ನು ವಿದ್ವಾಂಸರಾದ ದಿವಂಗತ ಶ್ರೀ ಗೌರೀಶ ಕಾಯ್ಕಿಣಿ ಅವರು ಆಯ್ಕೆ ಮಾಡಿ ಸೊಗಸಾಗಿ ಅನುವಾದಿಸಿ ಪ್ರಕಟಿಸಿದ್ದರು. ಇಂತಹ ಅಮೂಲ್ಯ ಕೃತಿಯನ್ನು ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ವತಿಯಿಂದ ಮರುಮುದ್ರಿಸಲು ಶ್ರೀ ಗೌರೀಶ ಕಾಯ್ಕಿಣಿಯವರ ಪುತ್ರ ಕನ್ನಡದ ಪ್ರಸಿದ್ಧ ಬರಹಗಾರರಾದ ಶ್ರೀ ಜಯಂತ್ ಕಾಯ್ಕಿಣಿ ಅವರು ಒಪ್ಪಿದ್ದಕ್ಕಾಗಿ ಪ್ರಾಧಿಕಾರದ ಪತಿಯಿಂದ ಅವರಿಗೆ ಹೃತ್ಪೂರ್ವಕ ಅಭಿನಂದನೆಗಳು.

ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ವತಿಯಿಂದ ಈ ಕೃತಿಯನ್ನು ಸಿದ್ಧಪಡಿಸಲು ಆಸಕ್ತಿ ವಹಿಸಿದ ಪ್ರಾಧಿಕಾರದ ಸದಸ್ಯರಿಗೆ, ಪ್ರಾಧಿಕಾರದ ಕೆಲಸ ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಪ್ರಾಧಿಕಾರದ ರಿಜಿಸ್ಟ್ರಾರ್ ಶ್ರೀ ಈಶ್ವರ್ ಕು. ಮಿರ್ಜಿ ಅವರಿಗೆ, ಶ್ರೀ ಎಚ್. ದಂಡಪ್ಪನವರಿಗೆ, ಶ್ರೀ ಜೆ. ಎನ್. ಶಾಮರಾವ್ ಅವರಿಗೆ ಹಾಗೂ ಪ್ರಾಧಿಕಾರದ

ಇತರ ಸಿಬ್ಬಂದಿ ವರ್ಗದವರಿಗೂ, ಅಂದವಾಗಿ ಮುದ್ರಿಸುವಲ್ಲಿ ಸಹಕರಿಸಿರುವ ಮೆ॥ ರಾಜಾಪ್ರಿಂಟರ್ಸ್, ಬೆಂಗಳೂರು ಅವರಿಗೂ ನಮ್ಮ ವಂದನೆಗಳು.

**ಡಾ. ಕೆ. ಮರುಳಸಿದ್ದಪ್ಪ**

ಅಧ್ಯಕ್ಷರು

## ಪರಿವಿಡಿ

ಜೋನ ಆಫ್ ಆರ್ಕ

ಪ್ರೊಕ್ರುಸ್ಟಿಸ್‌ನ ಮಂಚ

ಇಣಕಿ ನೋಡಿದ ಟಾಂ

ರಾಜಾ ಆರ್ಥರನ ದುಂಡು ಮೇಜು

ಹಿಯವಥಾ

ಅನುಪ ಮತ್ತು ಬಾತಾ

ಅಂದಗೇಡಿ ಬಾತುಮರಿ

ಆಕಾಶ ಬುಟ್ಟಿಯ ಪುರಾಣ

ಬರ್ಮಿಸೈದ ಮೇಜವಾನಿ

ಪೆಂಡೊರಾಳ ಪಟ್ಟಿಗೆ

ಓರ್ಫಿಯಸ್ ಮತ್ತು ಯುರಿಡೈಕ್

ಟ್ರೋಜನ್ ಕುದುರೆ

ವಿಲಿಯಂ ಟೆಲ್

## ಸರ್ವಾ ಓರ್ನ ಜುವೆತ್ (೧೮೪೯-೧೯೦೯)

ವಿಲ್ಲಾ ಕೆಥರ ಎಂಬ ಲೇಖಿಕೆಗೆ ಸರ್ವಾ ಓರ್ನ ಜುವೆತ್ ಒಂದು ಉಪದೇಶದ ಮಾತು ಹೇಳಿದ್ದಳು. 'ನಿನಗೆ ಗೊತ್ತಿದ್ದ ಸಂಗತಿಗಳನ್ನು ಸತ್ಯವಾಗಿಯೇ ಬರೆಯಬೇಕು.' ಈ ಮಾತು ಕುಮಾರಿ ಜುವೆತ್‌ಳು ಎಂಥವಳೆಂಬುದನ್ನೂ ನ್ಯೂ ಇಂಗ್ಲಂಡದ ಜನತೆಯ ಸಲುವಾಗಿ ಆಕೆ ಏನು ಮಾಡಿದಳೆಂಬುದನ್ನೂ ಚೆನ್ನಾಗಿ ಬಣ್ಣಿಸಬಲ್ಲುದು. ಅವಳ ಕಥೆಗಳು ಈಗಿತ್ತಲಾಗಿ ವಿಶೇಷ ಓದಲಾಗುತ್ತಿಲ್ಲವಾದರೂ ಅವಳನ್ನು ಅನುಸರಿಸಿದ ಲೇಖಕರ ಮೇಲೆ ಅವಳ ಪ್ರಭಾವ ಎಷ್ಟು ಮಹತ್ವದ್ದಾಗಿದೆಯೆಂಬುದು ನಮ್ಮಲ್ಲಿ ಕೆಲವರಿಗೆ ಗೊತ್ತು.

ಮ್ಯೇನ್ ಜಿಲ್ಹೆಯ ಸೌಥ್ ಬರ್ನಿಕ್ ಎಂಬಲ್ಲಿ ಇವಳು ಹುಟ್ಟಿದಳು. ತಲೆತಲಾಂತರಗಳಿಂದಲೂ ಸಂಸ್ಕೃತಿಯ ಸತ್ಪರಿಣಾಮಗಳನ್ನು ಕಂಡುಕೊಂಡ ಕುಟುಂಬವು ಅವಳದಾಗಿತ್ತು. ಅವಳ ಮೊದಲನೆಯ ಕೃತಿ 'ಡೀಪ ಹೆವನ್' ೧೮೭೭ರಲ್ಲಿ ಪ್ರಕಟವಾಯಿತು. ಅದು ಅವಳ ನ್ಯೂ ಇಂಗ್ಲಂಡ ಜನತೆಯ ಸೂಕ್ಷ್ಮ ಅಭ್ಯಾಸದ ಆತ್ಮಚರಿತ್ರೆಯ ರೂಪಿಯಾದ ಗ್ರಂಥ. ಅಂದಿನಿಂದ ಅವಳು ಕಾದಂಬರಿಗಳನ್ನೂ ಕತೆಗಳನ್ನೂ ಪ್ರಕಟಿಸುತ್ತಲೇ ನಡೆದಳು. ತನ್ನ ಎಲ್ಲ ಕೃತಿಗಳಲ್ಲಿಯೂ ತಾನು ಅತ್ಯಂತ ಆತ್ಮೀಯತೆಯಿಂದ ಅರಿತುಕೊಂಡ ನ್ಯೂ ಇಂಗ್ಲಂಡ ಜನಜೀವನವನ್ನು ಯಥಾವತ್ತಾಗಿ ಒಡಮೂಡಿಸಿರುವಳು.

# ಬಿಳಿ ಕೊಕ್ಕರೆ

ಜೂನ್ ತಿಂಗಳಲ್ಲಿ ಒಂದು ಸಂಜೆ. ಎಂಟು ಗಂಟೆಗೆ ಮೊದಲೇ ಬೆಟ್ಟಗಳಲ್ಲಿ ಮಬ್ಬು ಕವಿಯುತ್ತಿತ್ತು. ಆದರೂ ಮರಗಳ ನಡುವಿನಿಂದ ಸೂರ್ಯಾಸ್ತದ ಬೆಡಗಿನ ಬೆಳಕು ಮಂದವಾಗಿ ಬೆಳಗುತ್ತಿತು. ಒಬ್ಬ ಎಳೆಯ ಹುಡುಗಿ ತನ್ನ ಆಕಳನ್ನು ಅಟ್ಟಿಕೊಂಡು ಮನೆಗೆ ಹೋಗುತ್ತಿದ್ದಳು. ಮದಡು ಹೆಜ್ಜೆಯ ಮಂದಗತಿಯ ರೇಗಿಸುವ ಪ್ರಾಣಿ ಆಕಳು; ಆದರೂ ಒಂದು ಉಪಯುಕ್ತ ಸಂಗಾತಿ, ಇದ್ದ ಬಿದ್ದ ಬೆಳಕಿನಿಂದ ಅವರಿಬ್ಬರೂ ದೂರ ಹೋಗುತ್ತಿದ್ದರು. ಕಾಡಿನೊಳಗೆ ಹೋಗುತ್ತಿದ್ದ ಅವರ ಕಾಲುಗಳಿಗೆ ದಾರಿ ನಿತ್ಯಪರಿಚಯದ್ದಾದ್ದರಿಂದ ಕಣ್ಣಿಗೆ ಕಾಣಿಸಲಿ ಬಿಡಲಿ ಅದರ ಪರಿವೆಯಿಲ್ಲದೆ ಮುನ್ನಡೆಯುತ್ತಿದ್ದರು.

ಆ ಮುದಿ ಆಕಳು ತಾನಾಗಿ ಬಂದು ಹುಲ್ಲುಗಾವಲು ದಣಕಲಿನಾಚೆ ಕಾಯುತ್ತ ನಿಂತ ಒಂದು ರಾತ್ರೆಯೂ ಇದ್ದಿಲ್ಲ. ಅಲ್ಲದೆ ಎಲ್ಲಾದರೂ ಕಾಡು ಪೊದೆಗಳಲ್ಲಿ ಅವಿತುಕೊಂಡು ಕಣ್ಮರೆಯಾಗುವುದೆಂದರೆ ಅದಕ್ಕೆ ಹಿರಿ ಹಿರಿ ಹಿಗ್ಗು. ತನ್ನ ಕೊರಳಿಗೊಂದು ದೊಡ್ಡ ಗಂಟೆ ಕಟ್ಟಿದ್ದರೆಂಬುದನ್ನು ಆ ದನ ತಿಳಿದುಕೊಂಡಿತ್ತು. ಅಲ್ಲದೆ ಪೂರ್ತಿ ತಣ್ಣಗೆ ನಿಂತುಬಿಟ್ಟರೆ ಆ ಗಂಟೆ ಯಾವ ಸದ್ದೂ ಮಾಡುವದಿಲ್ಲ ಎಂಬುದೂ ಅದಕ್ಕೆ ತಿಳಿದಿತ್ತು. ಇದರಿಂದಾಗಿ ಸಿಲ್ವಿಯಾ ಆಕಳಿಗಾಗಿ ಹುಡುಕಾಡಬೇಕಾಗುತ್ತಿತ್ತು. ಕಾಡು ತುಂಬ, ಅದು ಕಾಣುವ ತನಕವೂ "ಕೋsssಕೋsss" ಎಂದು ಆಕೆ ಕೂಗೇ ಕೂಗುತ್ತಿದ್ದಳು. ಆದರೆ ಒಮ್ಮೆಯಾದರೂ "ಮೂsss" ಎಂದು ಪ್ರತ್ಯುತ್ತರ ಬರುತ್ತಿರಲಿಲ್ಲ. ಕೊನೆಗೂ ಚಿಕ್ಕ ಸಿಲ್ವಿಯಾಳ ತಾಳ್ಮೆ ತೀರ ಕೆಟ್ಟುಹೋಗುತ್ತಿತ್ತು. ಆ ದನ ಒಳ್ಳೇ ಹಾಲು ಹಿಂಡದಿರುತ್ತಿದ್ದರೆ, ಅದೂ ಅಷ್ಟೊಂದು ವಿಪುಲ, ಅದನ್ನು ಸಾಕಿದವರಿಗೆ ಈ ಪ್ರಕರಣ ಬೇರೆಯೇ ಬಣ್ಣದಲ್ಲಿ ಕಾಣಬಹುದಿತ್ತು. ಅಲ್ಲದೆ ಸಿಲ್ವಿಯಾಳಿಗಿದ್ದ ಸಮಯವೆಲ್ಲ ಅವಳದೇ. ಅದರ ವಿನಿಯೋಗಕ್ಕೆ ಅನುವುಗಳೇ ಕಡಿಮ. ಹಲವೊಮ್ಮೆ ಹವಾಮಾನ

ಸುಖವಾಗಿದ್ದಾಗ ಈ ಆಕಳ ತುಂಟಾಟವನ್ನು ಕಣ್ಣು ಮುಚ್ಚಾಟವೆಂದು ಭಾವಿಸುವದೂ ಸಿಲ್ವಿಯಾಳಿಗೆ ಒಂದು ಸಮಾಧಾನ. ಆ ಬಾಲಿಕೆಗೆ ಓರಿಗೆಯ ಆಟಗಾರ್ತಿಯರಾರೂ ಇದ್ದಿಲ್ಲ ಮತ್ತೆ. ಆಕೆ ಈ ಬಗೆಯ ವಿನೋದಕ್ಕೆ ಒಳ್ಳೇ ಉತ್ಸಾಹದಿಂದ ಅಣಿಯಾಗುತ್ತಿದ್ದಳು.

ಈ ಸಲದ ಪ್ರಕರಣ 'ಭಾರಿ' ಆಗಿತ್ತು. ಆಕಳ ಶೋಧ ಬಹಳ ವೇಳೆಯವರೆಗೆ ನಡೆಯಿತು. ಆ ಜೋಕೆಯ ಗೋವೇ ತಾನು ಎಲ್ಲಿ ನಿಂತಿರುವನೆಂಬದನ್ನು ಸೂಚಿಸಬೇಕಾಗಿ ಬಂತು. ಇಂಥ ಸೂಚನೆ ಅದರಿಂದ ಅಪೂರ್ವವೇ. ಆದರೂ ಕೊನೆಗೊಮ್ಮೆ ದನದಿಂದಲೇ ಅದರ ಗೊತ್ತು ಪತ್ತೆಹಚ್ಚಿದಾಗ ಸಿಲ್ವಿಯಾ ನಕ್ಕಳು. ಜವಳು ನೆಲದ ಮಗ್ಗಲಿಗೆ ಆ ಮುತ್ತೈದೆ ಗೋಮಾತೆ ನಿಂತುದನ್ನು ನೋಡಿದಳು. ಮತ್ತು 'ಬರ್ಚ' ತೊಪ್ಪಲಿನ ಒಂದು ಟೊಂಗೆ ಮುರಿದು ಆ ದನವನ್ನು ಮಮತೆಯಿಂದಲೇ ಒತ್ತಾಯಿಸುತ್ತಾ ಮನೆಯ ಹಾದಿ ಹಿಡಿದಳು. ಮುದಿ ಆಕಳಿಗೂ ದೂರ ಅಲೆದಾಡುವ ಮನಸ್ಸು ಇದ್ದಿಲ್ಲ. ಹುಲ್ಲುಗಾವಲು ಬಿಟ್ಟೊಡನೆ ಅದು ನೇರವಾಗಿ ಸರಿಯಾದ ದಾರಿ ಹಿಡಿದು ಒಳ್ಳೇ ನಡಿಗೆಯಿಂದ ಮುಂದೆ ಸಾಗಿತು. ಹಾಲು ಹಿಂಡಿಕೊಳ್ಳಲು ಅದು ಈಗ ಸಿದ್ಧವಾಗಿತ್ತು. ಅತ್ತಿತ್ತ ಮೇಯಲು ನಿಲ್ಲಲಿಲ್ಲ. ಬರಲು ಅಷ್ಟು ವಿಲಂಬವಾದದ್ದಕ್ಕೆ ಅಜ್ಜಿ ಏನೆಂದಾಳು-ಎಂದು ಸಿಲ್ವಿಯಾ ಚಿಂತಿಸಹತ್ತಿದಳು. ಐದೂವರೆ ಗಂಟೆಗೇ ಆಕೆ ಮನೆ ಬಿಟ್ಟಿದ್ದಳು. ಈಗ ಬಹಳ ವೇಳೆ ಕಳೆದಿತ್ತು. ಆದರೆ ಈ ಕೆಲಸವನ್ನು ಬೇಗನೆ ಮುಗಿಸುವುದು ಎಷ್ಟು ಕಷ್ಟಸಾಧ್ಯವೆಂದು ಪ್ರತಿಯೊಬ್ಬರಿಗೂ ಗೊತ್ತು. ಅಜ್ಜಿ ತಿಲ್ಲೆಯೂ ಕೂಡ ಹಲವು ಬೇಸಿಗೆಯ ಸಂಜೆ ಈ 'ಕೋಡಿನ ಕೋಟಲೆ'ಯನ್ನು ಬೆನ್ನಟ್ಟಿಕೊಂಡು ಬಂದು ಬೆಟ್ಟ ಸುತ್ತಿದ್ದು ಉಂಟು. ಅಂದಾಗ ಇನ್ನಾರೂ ಹೀಗೆ ವೇಳೆ ಕಳೆದರೆ ಆಕೆ ತಕರಾರು ಮಾಡುವಂತೆ ಇದ್ದಿಲ್ಲ; ಅಲ್ಲದೆ ಇತ್ತೀಚಿಗೆ ತನಗೆ ಈ ಕೆಲಸದಲ್ಲಿ ಅಮೂಲ್ಯ ಸಹಾಯ ನೀಡಲು ಸಿಲ್ವಿಯಾ ಸಿಕ್ಕಾಳೆ ಎಂದು ಅಜ್ಜಿ ಕೃತಜ್ಞತೆಯಿಂದಲೇ ಕಾಯುತ್ತ ಕೂಡುವಳು. ಇನ್ನು ಸಿಲ್ವಿಯಾ ತಾನೇತಾನಾಗಿ ಅಲೆಬಾಡಲು ಹೋಗುವದುಂಟೆಂದೂ ಆ ಸಾಧ್ವಿ ಸಂಶಯ ಪಡುತ್ತಿದ್ದಳು. ಜಗತ್ತು ಆರಂಭವಾದಾಗಿನಿಂದ, ಹೀಗೆ ಮನೆಯ ಹೊರಗೆ ಅಲೆದಾಡುವವರಲ್ಲಿ ಈ ಬಾಲೆಯ ಬೆನ್ನು ಹಿಡಿಯುವವರು ಬೇರೊಬ್ಬರಿದ್ದಿಲ್ಲ! ಒಂದು

ಜನದಟ್ಟಣೆಯ ಕಾರಖಾನೆಗಳ ಪಟ್ಟಣದಲ್ಲಿ ಎಂಟು ವರ್ಷ ಕಾಲ ಆಕೆ ಬೆಳೆಯಲು ಹೋಗಿದ್ದಳು. ಅಂಥವಳಿಗೆ ಈ ಬೆಟ್ಟ-ಬಯಲು ಅಲೆದಾಟ ಒಂದು ಒಳ್ಳೇ ಬದಲಾವಣೆಯ ಸರಿ-ಎಂದು ಎಲ್ಲರೂ ಹೇಳುತ್ತಿದ್ದರು. ಸಿಲ್ವಿಯಾಳನ್ನು ಕೇಳಿದರೆ, ಆಕೆ ಈ ಹೊಲಮನೆಗೆ ಬರುವ ಮುಂಚೆ ತಾನು ಬದುಕಿಯೇ ಇದ್ದಿಲ್ಲವೆಂಬಂತೆ ಅವಳಿಗೆ ಅನಿಸುತ್ತಿತ್ತು. ಪಟ್ಟಣದಲ್ಲಿ ನೆರೆಹೊರೆಯ ಒಬ್ಬರಲ್ಲಿ ಮುದುಡಿ ಮುರುಟಾಗಿ ಬೆಳೆಯುತ್ತಿದ್ದ ಒಂದು 'ಜೆರೇನಿಯಂ' ಗಿಡದ ನೆನಪು ಬಂದಾಗಲಲ್ಲ ಆಕೆಗೆ ಅದರ ಬಗ್ಗೆ ಕಕುಲಾತಿಯ ಕಳವಳವಾಗುತ್ತಿತ್ತು.

ಅಜ್ಜಿ ತನ್ನಷ್ಟಕ್ಕೆ ಮುಗುಳ್ನಗುತ್ತಾ "ಮುಂದಿಗೆ ಹೆದರುವಳೇ!" ಎಂಬುದಾಗಿ ಹೇಳಿಕೊಂಡಿದ್ದಳು-ತನ್ನ ಮಗಳ ಮನೆತುಂಬ ಹರಿದಾಡುವ ಮಕ್ಕಳಲ್ಲಿ ಅಕಲ್ಪಿತವಾಗಿ ಸಿಲ್ವಿಯಾಳನ್ನು ಆಯ್ದುಕೊಂಡು ಅವಳೊಂದಿಗೆ ತನ್ನ ಹೊಲಮನೆಗೆ ಹಿಂದಿರುಗುವಾಗ, "ಮಂದಿಗೆ ಹೆದರುವಳೇ? ಜನ ಆಡಿಕೊಳ್ಳಲಿ. ನಮ್ಮ ಹಳೆಮನೆಗೆ ಬಂದರೆ ಯಾವ ಜನವೂ ಅವಳಿಗೆ ಕಾಡಲಾರರು." ಮನೆಗೆ ಬಂದು, ಆ ಒಂಟಿಯಾಗಿ ನಿಂತ ಮನೆಯ ಬಾಗಿಲ ಬೀಗ ತೆಗೆಯಲು ತಡೆದಾಗ ಬೆಕ್ಕೊಂದು "ಮ್ಯಾಂ" ಅನ್ನುತ್ತ ಬಂದು ಅವರ ಮೈಗೆ ಮೈ ತಿಕ್ಕಹತ್ತಿತು. ತಬ್ಬಲಿ ಬಿಟ್ಟು ಹೋದ ಬೆಕ್ಕು ನಿಜ. ಆದರೆ ರೋಬಿನ್ ಹಕ್ಕಿಗಳನ್ನು ಮುರಿದು ತಿಂದು ಕೊಬ್ಬಿತ್ತು. ಈ ಸ್ಥಳ ಉಳಿಯಲು ಬಲು ಸೊಗಸೆಂದೂ ಮತ್ತೆ ಪಟ್ಟಣಕ್ಕೆ ಹೋಗಲು ಎಂದೆಂದೂ ಬಯಸಲಾರೆನೆಂದೂ ಸಿಲ್ವಿಯಾ ಪಿಸುಗುಟ್ಟಿದಳು.

ಮಬ್ಬು ಕವಿದ ಆ ಕಾಡುದಾರಿಯಲ್ಲಿ ಸಂಗಾತಿಗಳಿಬ್ಬರೂ ನಡೆದಿದ್ದರು. ನಡುವೆ ಹಳ್ಳದಲ್ಲಿ ನೀರು ಕುಡಿಯುತ್ತಾ ಆಕಳು ಬಹಳ ವೇಳೆ ನಿಂತಿತು. ಹುಲ್ಲುಗಾವಲಿನ ಅರೆಜವಳು ತೇವು ಅದಕ್ಕೆ ಸಾಕೆನಿಸಲಿಲ್ಲ. ಸಿಲ್ವಿಯಾ ಸ್ತಬ್ಧಳಾಗಿ ನಿಂತು ಆ ಮಳಲ ನೀರಿನಲ್ಲಿ ತನ್ನ ಬರಿಗಾಲುಗಳನ್ನು ತಂಪಾಗಿಸುತ್ತಾ ಸುತ್ತಲೂ ನಿರೀಕ್ಷಿಸಿದಳು. ಸಂಜೆಗೆದ್ದು ಹಾರಾಡುವ ದೊಡ್ಡ ಸೊಳ್ಳೆಗಳು ಅವಳ ಸುತ್ತಲೂ ಮೃದುವಾಗಿ ಹಾರಾಡಿದವು. ಆಕಳು ಹೊರಟೊಡನೆ ಅವಳು ಹಳ್ಳದ-ನೀರಿನಲ್ಲಿಯೇ ಮುಂದೆ ನಡೆದಳು. ಥ್ರಶ್ ಹಕ್ಕಿಗಳು

ಇಂಪಾಗಿ ಹಾಡುವುದನ್ನು ಕೇಳುತ್ತಲೇ ಅವಳ ಎದೆ ಹಿಗ್ಗಿನಿಂದ ಉಬ್ಬಿ ಹಾರತೊಡಗಿತು. ಮೇಲೆ ಹೆಮ್ಮರದ ಶಾಖೆಗಳಲ್ಲಿ ಹಕ್ಕಿಗಳು ಚಿಲಿಪಿಲಿಗುಡುತ್ತಿದ್ದವು. ಅವು ಹಕ್ಕಿಗಳಿಂದಲೂ ಪ್ರಾಣಿಗಳಿಂದಲೂ ತುಂಬಿದ್ದವು. ಎಲ್ಲವೂ ಎಚ್ಚರಾಗಿದ್ದು ತಮ್ಮ ಪ್ರಾಪಂಚಿಕ ಕಾರ್ಯದಲ್ಲಿ ತೊಡಗಿದ್ದವೋ ಅಥವಾ ತೂಕಡಿಕೆಯ ತೊದಲಿನಲ್ಲಿ ಪರಸ್ಪರ ರಾತ್ರೆಯ ವಂದನೆಗಳನ್ನು ಮಾಡಿಕೊಳ್ಳುತ್ತಿದ್ದವೋ ಎಂಬುದು ತಿಳಿಯುತ್ತಿರಲಿಲ್ಲ, ಇದನ್ನಾಲಿಸುತ್ತಿದ್ದ ಸಿಲ್ವಿಯಾಳಿಗೆ ನಡೆಯುತ್ತಿದ್ದಂತೆ ನಿದ್ದೆ ಬರುವಂತಿತ್ತು. ಆದರೂ ಮನೆಗೆ ದಾರಿ ದೂರವಿದ್ದಿಲ್ಲ, ಹವೆಯು ಸ್ನಿಗ್ಧ ಮಧುರವಾಗಿತ್ತು. ಇಷ್ಟು ವಿಲಂಬವಾಗಿ ನೆಳಲುಗಳ ಹಾಗೂ ತರಗೆಲೆಗಳ ಒಂದು ಭಾಗವೆಂಬಂತೆ ಆಕೆಗೆ ಅನಿಸಿತು. ಒಂದು ವರ್ಷದ ಹಿಂದೆ ತಾನು ಈ ಹೊಸಮನೆಗೆ ಬಂದದ್ದು — ಎಷ್ಟೋ ಕಾಲ ಕಳೆದಂತೆ ಕಂಡಿತು. ಆಕೆ ಸೋಜಿಗಪಟ್ಟುಕೊಂಡಳು, “ಆ ಗೊಂದಲದ ಪಟ್ಟಣದಲ್ಲಿ ತಾನು ಇದ್ದಾಗಿನಂತೆಯೇ ಈಗಲೂ ಪ್ರತಿಯೊಂದು ಸಾಗಿರಬಹುದೇ?” ಆ ಪಟ್ಟಣದಲ್ಲಿ ಇದ್ದಾಗ ಒಬ್ಬ ಕೆಂಪು ಮೋರೆಯ ದೊಡ್ಡ ಹುಡುಗ ಅವಳನ್ನು ಬೆನ್ನಟ್ಟಿ ಹೆದರಿಸುತ್ತಿದ್ದನು. ಅದರ ವಿಚಾರ ನೆನಪಾದೊಡನೆ ಆಕೆ ಮರಗಳ ನೆರಳುಗಳಿಂದ ಪಾರಾಗಲು ಆ ದಾರಿಗುಂಟ ಲಗುಬಗೆಯಿಂದ ಹೋಗತೊಡಗಿದಳು.

ಅಕಸ್ಮಾತ್ ಈ ವನಬಾಲಿಕೆ ಸಿಡಿಲು ಬಡಿದವರಂತೆ ತಬ್ಬಿಬ್ಬಾದಳು ಅನತಿದೂರದಲ್ಲಿ ಒಂದು ನಿಚ್ಚಳವಾದ ಕರ್ಕಶ ಸಿಳ್ಳು ಕೇಳಿಸಿತು. ಹಕ್ಕಿಯ ಸಿಳ್ಳಿನಂತೆ ಮಧುರವಾಗಿದ್ದಿಲ್ಲ, ಬದಲಾಗಿ ಆ ಹುಡುಗನ ಸಿಳ್ಳಿನಂತೆ ಹಟವುಳ್ಳದ್ದೂ ಉದ್ಧಟವೂ ಆಗಿತ್ತು. ಸಿಲ್ವಿಯಾ ಆಕಳನ್ನು ಅದರ ದುರ್ದೈವಕ್ಕೆ ಬಿಟ್ಟಳು. ಹಾಗಯ ದಾರಿ ಬಿಟ್ಟು ಜಾಗ್ರತೆಯಾಗಿ ಪೊದೆಗಳಲ್ಲಿ ಸರಿದು ನಿಂತಳು. ಆದರೇನು ’ಶತ್ರು’ವು ಅವಳನ್ನು ಕಂಡುಹಿಡಿದಿದ್ದನು. ಒಳ್ಳೇ ಗೆಲುವಿನ ಮತ್ತು ಮನವೊಲಿಸುವ ದನಿಯಲ್ಲಿ ಅವಳನ್ನು ಕೂಗಿದನು. “ಎಲಾ ಹುಡುಗಿ, ಇಲ್ಲಿಂದ ರಸ್ತೆಗೆ ಎಷ್ಟು ದೂರ?” ಆಗ ಸಿಲ್ವಿಯಾ ಗಾಬರಿಗೊಂಡು ನಡುಗುವ ದನಿಯಿಂದ ಕೇಳದಷ್ಟು ಕುಗ್ಗಿದ ಸ್ವರದಲ್ಲಿ “ಒಳ್ಳೇ ದೂರ” ಎಂದಳು.

ಆ ಎತ್ತರದ ತರುಣನತ್ತ ಕಣ್ಣೆತ್ತಿ ನೋಡಲು ಆಕೆಗೆ ಧೈರ್ಯ ಸಾಲದೆ ಹೋಯಿತು. ಆತ ಹೆಗಲ ಮೇಲೆ ಒಂದು ಬಂದೂಕು ಏರಿಸಿದ್ದನು. ಸಿಲ್ವಿಯಾ ಪೊದೆಗಳೊಳಗಿಂದ ಹೊರಗೆ ಕಾಲಿಟ್ಟಳು. ತನ್ನ ಆಕಳನ್ನು ಹಿಂಬಾಲಿಸಿದಳು. ಆ ತರುಣನೂ ಆಕೆಯ ಪಕ್ಕದಲ್ಲೇ ನಡೆದನು.

"ನಾನು ಕೆಲವು ಹಕ್ಕಿಗಳಿಗಾಗಿ ಬೇಟೆಯಾಡುತ್ತಿದ್ದೇನೆ," ಆಗಂತುಕನು ಮೃದುವಾಗಿ ಹೇಳಿದನು, "ನಾನು ದಾರಿತಪ್ಪಿ ತೊಳಲಾಡುತ್ತಿದ್ದೆ. ಸಂಗಾತಿಗಾಗಿ ಹಾತೊರೆಯುತ್ತಿದ್ದೆ. ನೀನು ಹೆದರಬೇಡ" ಆತ ಉತ್ತೇಜಕ ದನಿಯಲ್ಲಿ ಅಂದ. "ನಿನ್ನ ಹೆಸರೇನು? ಹೇಳು. ನಿಮ್ಮ ಮನೆಯಲ್ಲಿ ರಾತ್ರಿ ಕಳೆದು ನಾಳೆ ನಸುಕಿಗೆ ಬೇಟೆಗೆ ಹೊರಟುಹೋಗುತ್ತೇನೆ. ಅಡ್ಡಿಯಿಲ್ಲವಷ್ಟೇ?"

ಸಿಲ್ವಿಯಾ ಮೊದಲಿಗಿಂತಲೂ ಹೆಚ್ಚು ಭಯಚಕಿತಳಾದಳು. ಅಜ್ಜಿ ಏನೆಂದಾಳು? ನಾನೇ ಹೆಚ್ಚಿನ ಅಪರಾಧಿಯೆನ್ನಲಿಕ್ಕಿಲ್ಲವೇ? ಆದರೆ ಅಂಥ ಯೋಗಾಯೋಗವನ್ನು ಯಾರು ಊಹಿಸಿದ್ದರು? ಇದೇನೂ ನನ್ನ ತಪ್ಪಲ್ಲ. ಕುತ್ತಿಗೆಯ ಎಲುವೇ ಮುರಿದಂತೆ ಆಕೆ ತಲೆತಗ್ಗಿಸಿದಳು. ಆದರೂ ಹೇಗೋ ಮಾತು ಸರಿಪಡಿಸಿ ಉತ್ತರವಿತ್ತಳು. "ಸಿಲ್ವೀ"–ಅದೂ ಬಹಳ ಪರಿಶ್ರಮದಿಂದ, ಜತೆಗಾರ ಇನ್ನೊಮ್ಮೆ ಹೆಸರು ಕೇಳಿದ ನಂತರ.

ಅಜ್ಜಿ ತಿಲ್ಲೆ ಬಾಗಿಲಲ್ಲಿ ನಿಂತಿದ್ದಳು, ಈ ತ್ರಿಮೂರ್ತಿಗಳು ಕಣ್ಣಿಗೆ ಬೀಳುವಾಗ. ಆಕಳು ದೊಡ್ಡ ದನಿ ತೆಗೆದು "ಅಂಬಾsss" ಎಂದಿತು, ತಡವಾಗಿ ಬಂದುದಕ್ಕೆ ಕಾರಣವನ್ನು ಕೊಡುವ ರೀತಿಯಲ್ಲಿ.

"ಸರಿ. ಆದರೂ ನಿನ್ನ ವರದಿ ಸಾದ್ಯಂತ ಒಪ್ಪಿಸಬೇಕು, ಏ ಹಳೆಯ ಪೀಡೆ! ಈ ಸಲ ಇದು ಅಲ್ಲ ಅಡಗಿಕೊಂಡಿತ್ತು. ಸಿಲ್ವೀ?" ಆದರೂ ಸಿಲ್ವಿಯಾ ಸ್ವಲ್ಪ ಹೆದರಿದ್ದಂತೆ ಮೌನವಾಗಿದ್ದಳು. ಅಜ್ಜಿಗೆ ಪರಿಸ್ಥಿತಿಯ ಪರಿಜ್ಞಾನ ಸರಿಯಾಗಿ ಆಗಿಲ್ಲವೆಂದು ಆಕೆ ತನ್ನಾರೆ

ಅರಿತಳು. ಆ ನೆರೆಯ ಹೊಲದಲ್ಲಿ ದುಡಿಯುವ ಒಬ್ಬ ರೈತ ಹುಡುಗನೆಂದು ಅಜ್ಜಿ ಆಗಂತುಕನನ್ನು ಭಾವಿಸಿರಬೇಕೆಂದಳು ಸಿಲ್ವಿ ತನ್ನಲ್ಲೇ.

ತರುಣನು ಬಂದೂಕನ್ನು ಬಾಗಿಲ ಬದಿಗೆ ಆನಿಸಿಟ್ಟನು; ಒಂದು ಗುಂಡುಗುಂಡಾಗಿ ಉಬ್ಬಿ ಕಾಣುವ ಬೇಟೆಯ ಚೀಲವನ್ನು ನೆಲಕ್ಕೆ ಒಗೆದನು. ಮತ್ತು ಅಜ್ಜಿ ತಿಲ್ಲೆಗೆ ನಮಸ್ಕಾರ ಮಾಡಿದನು. ಅಲ್ಲದೆ ತನ್ನ ಹಾದಿಹೋಕನ ಕತೆಯನ್ನು ಅವಳೆದುರಿಗೂ ಬಿಚ್ಚಿದನು. ಆ ರಾತ್ರಿ ತಾನು ಅಲ್ಲಿ ತಂಗಬಹುದೇ?– ಎಂದೂ ಕೇಳಿದನು.

“ಈ ರಾತ್ರಿ ಇಲ್ಲೇ ಎಲ್ಲಾದರೂ ಬಿದ್ದಿರುತ್ತೇನೆ. ನಾಳೆ ಮುಂಜಾನೆ ಎದ್ದು ಹೊರಡುವೆನು. ಆದರೆ ಸದ್ಯ ನಾನು ಬಹಳ ಹಸಿದಿದ್ದೇನೆ. ಏನಿಲ್ಲವೆಂದರೂ ಒಂದಿಷ್ಟು ಹಾಲನ್ನಾದರೂ ನೀವು ಕೊಡಲೇಬೇಕು. ಇದು ಯಥಾರ್ಥ.”

“ಅಯ್ಯೋಽ ಉಂಟೇ, ಕೊಡದೇ ಏನು?” ಆ ಮುದಿ ಯಜಮಾನಿ ಉತ್ತರಿಸಿದಳು. ಅವಳಲ್ಲಿದ್ದ ಆತಿಥ್ಯಧರ್ಮ ಸುಲಭವಾಗಿ ಜಾಗೃತವಾದಂತೆ ತೋರಿತು. “ಇನ್ನು ಒಂದು ಮೈಲೋ ಕೊಂಚ ಹೆಚ್ಚೋ, ಮುಂದೆ ರಾಜ ರಸ್ತೆಯಲ್ಲಿ ಸಾಗಿದ್ದರೆ ನಿಮಗೆ ಒಳ್ಳೇ ವ್ಯವಸ್ಥೆನೇ ಆಗುತ್ತಿತ್ತು. ಆದರೆ ನಮ್ಮಲ್ಲಿ ಇದ್ದಷ್ಟು ಉಪಚಾರ ನಿಮಗಾಗಿ ಸಿದ್ಧ. ಈಗಲೇ ಹೋಗಿ ಹಾಲು ಹಿಂಡಿ ತರುತ್ತೇನೆ. ನೀವು ಆರಾಮವಾಗಿ ಕೂತಿರಿ. ನಿಮ್ಮದೇ ಮನೆಯೆಂದು ಭಾವಿಸಿ. ನೀವು ಧಾನ್ಯದ ಹೊಟ್ಟಿನ ಮೇಲೆ ಅಥವಾ ಗರಿಗಳ ರಾಶಿಯ ಮೇಲೆ ಮಲಗಬಹುದು.” ಆಕೆ ಅನುಗ್ರಹಪೂರ್ಣವಾಗಿ ನುಡಿದಳು. “ಅವನ್ನೆಲ್ಲ ನಾನೇ ಒಟ್ಟು ಹಾಕಿದೆನು. ಇಲ್ಲಿಂದ ಕೆಳಗೆ ಆ ಜವಳು ಭೂಮಿಯ ಕಡಗೆ ಬಾತುಗೋಳಿಗಾಗಿ ಒಳ್ಳೇ ಮೇವು ಇದೆ. ಗರಿ ಒಟ್ಟು ಹಾಕಿದ್ದು ಅವುಗಳಿಂದಲೇ. ಸಿಲ್ವೀ, ನೋಡುತ್ತಾ ನಿಂತೆಯೇನು? ಈ ಅತಿಥಿಯ ಸಲುವಾಗಿ ಒಂದು ಬಟ್ಟಲು ಸಿದ್ಧಮಾಡು. ನಡೆ.” ಸಿಲ್ವಿಯಾ ಕೂಡಲೆ ನಡೆದಳು. ಏನಾದರೊಂದು ಕೆಲಸಮಾಡಲು ಸಿಕ್ಕರೆ ಅವಳಿಗೆ ಆಗ ಸುಖವೇ ಅನಿಸಿತ್ತು. ಅಲ್ಲದೆ ಅವಳು ಹಸಿದಿದ್ದಳು.

ನ್ಯೂ ಇಂಗ್ಲಂಡದ ಕಾಡುಗಳಲ್ಲಿ ಇಷ್ಟು ಅಚ್ಚುಕಟ್ಟಾದ ಮತ್ತು ಸುಖಸೌಕರ್ಯದ ಪುಟ್ಟ ವಸತಿಯನ್ನು ಕಂಡದ್ದು ಒಂದು ಸೋಜಿಗವೇ. ಈ ಸೀಮೆಯ ಆದಿನಿವಾಸಿಗಳ ಭೀಭತ್ಸಗಳನ್ನೂ ಹೇಂಟೆಗಳ ಒಡನಾಟಕ್ಕೆ ಹೇಸದ ಆ ಸಮಾಜದ ಕೀಳುಮಟ್ಟದ ಭೀಕರ ಹೊಲಸನ್ನೂ ಆತ ನೋಡಿದ್ದನು. ಆದರೆ ಇದು ಹಳೆಯ ಮಾದರಿಯ ಹೊಲಮನೆಯ ಮಿತವ್ಯಯದ ಉತ್ಕೃಷ್ಟ ಉದಾಹರಣೆಯಾಗಿತ್ತು. ಆದರೆ ಅದೆಷ್ಟು ಪುಟ್ಟ ಮಾದರಿ? ಚಿಕ್ಕ ಆಶ್ರಮದಂತೆ ಪರ್ಣಶಾಲೆಯಂತೆ ಕಾಣುತ್ತಿತ್ತು ಆ ಮುದುಕಿಯ ವಿಚಿತ್ರ ಹರಟೆಗೆ ಆತ ಕುತೂಹಲದಿಂದ ಕಿವಿಗೊಡುತ್ತಿದ್ದ. ಅದರೆ ಅವನ ಕಣ್ಣು ಸಿಲ್ವಿಯಾಳ ಕ್ಷೀಣಕಾಂತಿಯ, ಮಂದವಾಗಿ ಬೆಳಗುವ ಮುಖಮಂಡಲವನ್ನೂ ಉಕ್ಕುವ ಉತ್ಸಾಹದಿಂದ ಉಜ್ವಲವಾದ ಅವಳ ನರೆಗಪ್ಪು ಕಣ್ಣುಗಳನ್ನೂ ನಿರೀಕ್ಷಿಸತ್ತಿದ್ದವು. ಹೋದ ಒಂದು ತಿಂಗಳಿನಿಂದ ಇಂಥ ಉತ್ತಮ ಊಟವನ್ನು ತಾನು ಉಂಡಿಲ್ಲವೆಂದು ಸಂತೋಷದಿಂದ ಹೇಳತೊಡಗಿದ. ಅನಂತರ ಈ ಹೊಸ ಗೆಳೆಯರು ಬಾಗಿಲಲ್ಲಿ ಒಟ್ಟಿಗೆ ಕೂತು ಚಂದ್ರೋದಯವಾಗುವದನ್ನೇ ನಿರೀಕ್ಷಿಸತೊಡಗಿದರು.

ಶೀಘ್ರದಲ್ಲಿಯೇ ಚೆರಿಹಣ್ಣು ಹೆಕ್ಕುವ ಕೆಲಸ ಆರಂಭವಾಗುವದು. ಸಿಲ್ವಿಯಾ ಹಣ್ಣು ಹೆಕ್ಕುವದರಲ್ಲಿ ಬಹಳ ಸಹಾಯವಾಗುತ್ತಿದ್ದಳು. ಆಕಳು ಒಳ್ಳೇ ಹಾಲು ಹಿಂಡುತ್ತಿತು. ಆದರೇನು ಹಿಡಿದು ತರಲು ಹೋದರೆ ಬಹಳೇ ಉಡಾಳ ಪ್ರಾಣಿ. ಹೀಗಲ್ಲ ಯಜಮಾನಿ ಮನಬಿಚ್ಚಿ ಹರಟುತ್ತಿದ್ದಳು. ಹರಟುತ್ತಾ ಅವಳು ಇನ್ನೂ ಹೇಳಿದಳು....... ಅವಳು ನಾಲ್ಕು ಮಕ್ಕಳನ್ನು ಮಣ್ಣುಗೂಡಿಸಿದ್ದಾಯಿತು. ಈಗ ಉಳಿದವಳು ಸಿಲ್ವಿಯಾಳ ತಾಯಿ ಮತ್ತು ಕ್ಯಾಲಿಫೋರ್ನಿಯಾಕ್ಕೆ ಹೋಗಿದ್ದ ಒಬ್ಬ ಮಗ. (ಅವನೂ ಸತ್ತಿರಲೂಬಹುದು). ಈಗ ಉಳಿದವರು ಇವರಿಬ್ಬರೇ. “ಡ್ಯಾನ, ನನ್ನ ಮಗ ಬಂದೂಕು ಹಿಡಿಯೋದರಲ್ಲಿ ಮೇಲುಗೈ. ಹಿರಿ ಗುರಿಕಾರ.” ಆಕೆ ಖಿನ್ನಳಾಗಿ ವಿವರಿಸಹತ್ತಿದಳು. “ಅವನು ಮನೆಯಲ್ಲಿದ್ದಾಗೆಲ್ಲ ನನಗೆ ಕವಡೆ ಮತ್ತು ಕಾಡು ಇಣಚಿಗಳ ಕೊರತೆಯೇ ಇದ್ದಿಲ್ಲ, ನೋಡು. ಅವನೂ ಮಹಾ ಊರೂರು ಸುತ್ತೋ ಆಸಾಮಿ. ಪತ್ರಗಿತ್ರ ಬರೆಯೋ

ಕೈಯಲ್ಲ ಅವನದು. ಮತ್ತೆ! ಅಲ್ಲ ಮತ್ತೆ ಅದಕ್ಕಾಗಿ ನಾನು ಅವನನ್ನು ಬಯ್ಯುವದಿಲ್ಲ. ನನಗೂ ಸಾಧ್ಯವಾದರೆ ನಾನೂ ಜಗತ್ತು ನೋಡುತ್ತ ಸುತಾಡುತ್ತಿದ್ದೆ…..”

“ಈ ಸಿಲ್ವೀಗೆ ಅವನದೇ ಚಾಳಿ ಬಂದಿದೆ, ನೋಡಿ.” ಒಂದು ಮಿನಿಟು ಮೌನವಾಗಿ ಮುದುಕಿ ಮತ್ತೆ ಮಾತನ್ನೆತ್ತಿದಳು. “ಇಲ್ಲಿಯ ಸುತ್ತಿಗೆ ಇವಳಿಗೆ ಗೊತ್ತಿಲ್ಲದ ಒಂದು ಅಡಿ ನೆಲವಿಲ್ಲ. ಇಲ್ಲಿಯ ಕಾಡು ಪ್ರಾಣಿಗಳಂತೂ ಇವಳನ್ನು ತಮ್ಮೊಳಗಿನ ಒಬ್ಬಾಕಿಯೆಂದೇ ಎಣಿಸುತ್ತವೆ. ಇಣಚಿಗಳು ತಮ್ಮ ಕೈಯಿಂದ ಕಾಳುಗಳನ್ನು ಹೆಕ್ಕಿ ತಿನ್ನುವಂತೆ ಈಕೆ ಪಳಗಿದ್ದಾಳೆ, ನೋಡಿ. ಹಾಗೇ ಎಲ್ಲಾ ತರದ ಹಕ್ಕಿಗಳೂ ಇವಳಿಗೆ ವಶವಾಗುತ್ತವೆ. ಕಳೆದ ಚಳಿಗಾಲ “ಜೇ” ಹಕ್ಕಿಗಳನ್ನು ಇವಳು ಸಾಕಿದಳು. ಮತ್ತೆ ನಾನು ಕಣ್ಣಿಡದಿದ್ದರೆ ಈ ಹುಡುಗಿ ಇವುಗಳ ಹೊಟ್ಟೆಗೆ ಹಾಕಲಿಕ್ಕೆ ತಾನು ಉಪವಾಸ ಬೀಳುತ್ತಿದ್ದಳು, ನೋಡಿ. ನಾನು ಖಂಡಿತ ಹೇಳಿಬಿಟ್ಟೆ, ಈ ಕಾಗೆಗಳನ್ನು ಬಿಟ್ಟು ಬೇರೆ ಯಾವ ಹಕ್ಕಿಗಳನ್ನು ಸಾಕಲಿಕ್ಕೆ ನನ್ನ ಒಪ್ಪಿಗೆ, ಬೆಂಬಲ. ಹಾಗೇ ನೋಡಿದರ ಡ್ಯಾನ ಒಂದು ’ಜೇ’ ಕಾಗೆ ಹಿಡಿದು ಸಾಕಿದ್ದನಪ್ಪ, ಅದಕ್ಕೆ ಮನುಷ್ಯರ ಹಾಗೆ ಬುದ್ಧಿ ಇತ್ತು ನೋಡಿ. ಡ್ಯಾನ ಹೋದ ಮೇಲೂ ಅದು ಇಲ್ಲಿ ಬಹಳ ಕಾಲ ಸುಳಿದಾಡುತ್ತಿತ್ತು. ಡ್ಯಾನ ಮತ್ತು ಅವನ ತಂದೆ ಇಬ್ಬರದೂ ಪಟ್ಟಾಗಿ ಕೂಡುತ್ತಿದ್ದಿಲ್ಲ-ಆದರೆ ಡ್ಯಾನ ಅಡ್ಡ ಮುಠ್ಠಾಳತನ ತೋರಿಸಿ ಮನೆ ಬಿಟ್ಟು ಸೆಟಗೊಂಡು ಹೊರಟುಹೋದದ್ದೇ ಅವನ ತಂದೆ ಮತ್ತೆ ತಲೆಯೆತ್ತಲೇ ಇಲ್ಲ-ನೋಡಿ.”

ಅತಿಥಿ ಅನ್ಯಾಸಕ್ತಚಿತ್ತನಾಗಿದ್ದುದರಿಂದ ಈ ಕುಟುಂಬದ ಕರುಣ ಕಥೆಯನ್ನು ಗಮನಿಸಲಿಲ್ಲ.

“ಹೀಗೋ, ಸಿಲ್ವಿಯಾಳಿಗೆ ಹಕ್ಕಿಗಳ ಬಗೆಗೆ ಎಲ್ಲ ಗೊತ್ತೇ? ಹೌದೆ?” ಆತ ಕೇಳಿದ, ಹತ್ತಿರ ಕುಳಿತ ಆ ಬಾಲಿಕೆಯ ಕಡೆಗೆ ಹೊರಳಿ ನೋಡಿ. ಬಾಲಿಕೆ ನಮ್ರಳೂ ಮೌನಳೂ ಆಗಿ ಕೂತಿದ್ದಳು. ಆ ಬೆಳದಿಂಗಳಲ್ಲಿ ಹೆಚ್ಚು ಹೆಚ್ಚು ನಿದ್ದೆಯ ಅಮಲೇರಿ ತೂಕಡಿಸುತ್ತಿದ್ದಳು. “ನಾನು ಸ್ವತಃ ಹಕ್ಕಿಗಳ ಒಂದು ಸಂಗ್ರಹವನ್ನು ಕೂಡಿಸುತ್ತಿದ್ದೇನೆ.

ಚಿಕ್ಕ ಹುಡುಗನಿದ್ದಾಗಿನಿಂದಲೇ ನಾನು ಈ ಸಂಗ್ರಹವನ್ನು ಆರಂಭಿಸಿದ್ದೆ. (ಅಜ್ಜಿ ತಿಲ್ಲೆ ನಗೆಬೀರಿದಳು.) ಒಂದೆರಡು ಅಪರೂಪದ ಹಕ್ಕಿಗಳಿದ್ದಾವೆ. ಈಗ ಐದು ವರ್ಷಗಳಿಂದ ನಾನು ಅವಕ್ಕಾಗಿ ಹುಡುಕಾಡುತ್ತಿದ್ದೇನೆ. ಸಿಕ್ಕರೆ ನಾನೇ ಅವುಗಳನ್ನು ಹಿಡಿಯಬೇಕೆಂದಿದ್ದೇನೆ."

"ಅವನ್ನು ನೀವು ಪಂಜರದಲ್ಲಿ ಹಿಡಿದಿಡುತ್ತೀರಾ?" ಅಜ್ಜಿ ಅವನ ಉತ್ಸಾಹದ ಘೋಷಣೆಗೆ ಉತ್ತರಿಸುತ್ತ. ಸಂದೇಹಪಟ್ಟು ಕೇಳಿದಳು.

"ಛೇ, ಅಲ್ಲ. ಅವನ್ನು ಕೊಂದು ಒಳಗೆ ಹುಡಿತುಂಬಿ ಡಜನುಗಟ್ಲೆ ಕಾಪಾಡಿ ಇಡುತ್ತಾರೆ" ಎಂದ ಆ ಪಕ್ಷಿವಿಜ್ಞಾನಿ. "ನನ್ನ ಸಂಗ್ರಹದ. ಪ್ರತಿಯೊಂದನ್ನು ನಾನೇ ಗುಂಡಿಕ್ಕಿದ್ದೇನೆ, ಇಲ್ಲವೆ ಬಲೆಯಲ್ಲಿ ಹಿಡಿದಿದ್ದೇನೆ. ಇದೇ ಶನಿವಾರ ಒಂದು ಬಿಳಿ ಕೊಕ್ಕರೆಯನ್ನು ನಾನು ಇಲ್ಲಿಂದ ಕೆಲವು ಮೈಲಿ ದೂರದಲ್ಲಿ ಕಂಡೆ. ಅದನ್ನು ನಾನು ಈ ನಿಟ್ಟಿನಲ್ಲಿ ಬೆನ್ನಟ್ಟಿ ಬಂದೆ. ಈ ಸೀಮೆಯಲ್ಲಿ ಅಂಥ ಹಕ್ಕಿಗಳನ್ನು ಕಂಡದ್ದೇ ವಿರಳ. ಅಹುದು ಅದೇ ಪುಟ್ಟ ಬಿಳಿಯ ಕೊಕ್ಕರೆ….." ಆತ ಮತ್ತೆ ಸಿಲ್ವಿಯಾಳ ಕಡೆಗೆ ನೋಡಲು ತಿರುಗಿದ. -ಆ ಹಕ್ಕಿ ಹುಡುಗಿಯ ಪರಿಚಯದ್ದೋ ಎಂದು ಕಂಡುಹಿಡಿಯುವಾಸೆಯಿಂದ.

ಆದರೆ ಸಿಲ್ವಿಯಾ ಆ ಕಿರಿಯಗಲದ ಕಾಲುದಾರಿಯಲ್ಲಿ ಕುಪ್ಪಳಿಸುತ್ತಿದ್ದ ದೊಡ್ಡ ಕಪ್ಪೆಯೊಂದನ್ನು ದಿಟ್ಟಿಸುತ್ತಿದ್ದಳು.

"ಒಮ್ಮೆ ನೋಡಿದರ ನೀನು ಆ ಕೊಕ್ಕರೆಯನ್ನು ಗುರುತಿಸಬಲ್ಲೆ"- ಆಗಂತುಕ ಆತುರದಿಂದ ಮುಂದುವರಿದ. "ಅದೊಂದು ವಿಚಿತ್ರ ಎತ್ತರದ ಬಿಳಿ ಹಕ್ಕಿ. ಮೃದುವಾದ ಗರಿಗಳು. ಉದ್ದ ಬಡಕಲು ಕಾಲುಗಳು. ಇಲ್ಲೇ ಹತ್ತಿರದಲ್ಲಿ ಒಂದು ಎತ್ತರದ ಮರದಲ್ಲಿ ಅದರ ಗೂಡು ಇರಬೇಕು. ಒಣ ಕಡ್ಡಿಗಳಿಂದ ಮಾಡಿದ್ದು ಸಾಧಾರಣ ಗಿಡಗದ ಗೂಡಿನಂತಹದು."

ಸಿಲ್ವಿಯಾಳ ಎದೆಯು ಒಮ್ಮೆಲೇ ಗಟ್ಟಿಯಾಗಿ ಬಡಿಯತೊಡಗಿತು. ಆ ಬಿಳಿ ಹಕ್ಕಿ ಆಕೆಗೆ ಗೊತ್ತಿತ್ತು. ಒಂದು ಹಸಿರು ಜವಳುಗಾಡಿನಲ್ಲಿ ಅದು ನಿಂತಾಗ ಆಕೆ ಮೆಲ್ಲನೆ ಅದರ ಹತ್ತರವೇ ಹಾಯ್ಬು ನೋಡಿದ್ದಳು.- ಅದು ದೂರ ಈ ಕಾಡುಗಳ ಆಚೆಯ ಬದಿಗೆ. ಅಲ್ಲಿ ಒಂದು ಬಯಲು ಜಾಗವಿತ್ತು. ಅಲ್ಲ ಬಿಸಲು ಯಾವಾಗಲೂ ಹೆಚ್ಚಾಗಿ ಬೆಚ್ಚಗೆ ಬಿದ್ದಿರುತ್ತದೆ. ಅಲ್ಲಿ ಉದ್ದನ್ನ ತೊನೆದಾಡುವ ದರ್ಭೆಗಳು ಬೆಳೆಯುತ್ತವೆ. “ಅಲ್ಲಿಯ ಮಿದುವಾದ ಕಪ್ಪು ಕೆಸರಿನಲ್ಲಿ ನೀನು ಪೂರಾ ಹುಗಿದು ಹೋಗುವಿ. ಹೇಳ ಹೆಸರು ಕೂಡ ಉಳಿಯಲಿಕ್ಕಿಲ್ಲ” ಎಂದು ಅಜ್ಜಿ ತಿಲ್ಲೆ ಆಕೆಗೆ ಎಚ್ಚರಿಕೆ ಕೊಟ್ಟದ್ದುಂಟು. ಆ ಮಿದು ಜವಳುಗಾಡಿನಿಂದ ಆಚೆಗೆ, ಅಷ್ಟೇನೂ ದೂರವಲ್ಲ, ಸಿಲ್ವಿಯಾ ಯಾವಾಗಲೂ ಸೋಜಿಗಪಡುತ್ತಿರುವ ಸ್ವಪ್ನವಾಗಿಯೇ ಕಾಣುತ್ತಿರುವ, ಆದರೆ ಎಂದೂ ಕಣ್ಮುಟ್ಟಿ ನೋಡದ ಸಮುದ್ರವಿತ್ತು, ಬಿರುಗಾಳಿಯ ರಾತ್ರೆಯಲ್ಲ ಕಾಡಿನ ಸದ್ದುಗಳನ್ನು ಮೀರಿ ಅದರ ದೊಡ್ಡ ಮೊರೆತ ಕೆಲವು ಸಲ ಆಕೆ ಕೇಳಿದ್ದುಂಟು.

“ನನಗೆ ಇನ್ನೇನೂ ಬಯಕೆಯೆಂಬುವದಿಲ್ಲ, ಆ ಕೊಕ್ಕರೆಯ ಗೂಡು ಕಂಡುಕೊಳ್ಳಬೇಕು.” ಆ ಸುಂದರ ಕಾಯದ ಆಗಂತುಕನು ಹೇಳುತ್ತಿದ್ದ. “ಅದನ್ನು ನನಗೆ ತೋರಿಸಿ ಕೊಟ್ಟವರಿಗೆ ನಾನು ಹತ್ತು ಡಾಲರು ಕೊಡುತ್ತೇನೆ. ಅವಶ್ಯವಿದ್ದರೆ ನನ್ನ ಎಲ್ಲಾ ರಜಾದಿನಗಳನ್ನು ಇದರ ಬೇಟೆಯಲ್ಲಿ ಕಳೆಯಲು ನಾನು ಸಿದ್ಧ.” ನಿಕರಕ್ಕೆ ಬಂದಂತೆ ಆತ ನುಡಿಯುತ್ತಿದ್ದ. “ಆ ಹಕ್ಕಿ ಇಲ್ಲಿಂದ ಹಾಯ್ದು ಹೋಗಿರಬಹುದು. ಪಯಣವೆದ್ದಿರಬಹುದು. ಇಲ್ಲವೆ ಅದರ ಬಳಕೆಯ ಸೀಮೆಯಿಂದ ಬೇರೊಂದು ಬೇಟೆಯ ಪಕ್ಷಿ ಅದನ್ನು ಓಡಿಸಿಬಿಟ್ಟಿರಲೂ ಬಹುದು.”

ಅಜ್ಜಿ ತಿಲ್ಲೆ ಇದನ್ನೆಲ್ಲ ಕೇಳಲು ಬೆರಗಿನ ಕಿವಿ ಕೊಟ್ಟಿದ್ದ ಳು. ಆದರೆ ಸಿಲ್ವಿಯಾ ಇನ್ನೂ ಆ ಪುಟ್ಟಗಪ್ಪೆಯನ್ನು ದಿಟ್ಟಿಸುತ್ತಿದ್ದಳು. ಅವರು ಕೂತ ಹೊಸ್ತಿಲಿನ ಕೆಳಗಡೆ ಆ ಕಪ್ಪೆಯ ಬಿಲವಿತ್ತು. ಅದು ಅಲ್ಲಿಗೆ ಮುಟ್ಟಲು ಹಾತೊರೆಯುತ್ತಿತ್ತು. ಆದರೆ ಇಂದು ಈ ಸಂಜೆಗೆ ಹೊತ್ತಲ್ಲದ ಹೊತ್ತಿನಲ್ಲಿ ಈ ಪ್ರೇಕ್ಷಕ ವೃಂದವು ಅಲ್ಲಿ ನೆರೆದದ್ದು ಅದಕ್ಕೆ ಒಂದು

ಅಪೂರ್ವದ ಆತಂಕವಾಗಿತ್ತು. ಈ ಸಂಗತಿ ಸಿಲ್ವಿಯಾಳಿಗೆ ಮನಸ್ಸು ಶಾಂತವಾಗಿದ್ದರೆ ಹೊಳೆಯುತ್ತಿತ್ತು. ಆದರೆ ಈಗ ಹೊಳೆಯಲೇ ಇಲ್ಲ. ಎಷ್ಟು ವಿಚಾರ ಮಾಡಿದರೂ ಆ ರಾತ್ರೆ ಒಂದು ವಿಷಯ ಕೊನೆಗೂ ನಿರ್ಣಯವಾಗದೆ ಹೋಯಿತು-ಅಷ್ಟು ಹಗುರಾಗಿ ಆಡಿಹೋದ ಹತ್ತು ಡಾಲರುಗಳು ಅವಳ ಅಚ್ಚುಮೆಚ್ಚಿನ ಎಷ್ಟು ಬಯಕೆಗಳನ್ನು ಕೊಂಡುಕೊಳ್ಳಬಲ್ಲವು?

ಮರುದಿನ ಆ ತರುಣ ಬೇಟೆಗಾರ ಅಡವಿಗಳಲ್ಲಿ ಸುಳಿದಾಡಿದನು. ಸಿಲ್ವಿಯಾ ಅವನ ಜತೆಗಿದ್ದಳು. ಆ ಸಲಿಗೆಯ ಹುಡುಗನ ಪ್ರಥಮ ಪರಿಚಯದ ಭೀತಿ ಮಾಯವಾಗಿತ್ತು. ಆತ ಅತಿಯಾಗಿ ದಯಾಳು, ಸಹಾನುಭೂತಿಯುಳ್ಳವನಿದ್ದ. ಹಕ್ಕಿಗಳ ವಿಷಯ ಆತ ಅವಳಿಗೆ ಬಹಳ ಸಂಗ್ತಿಗಳನ್ನು ಹೇಳಿದ-ಅವಕ್ಕೆ ಏನು ಗೊತ್ತು? ಅವು ಇರುವುದೆಲ್ಲಿ? ಅವು ತಮ್ಮಷ್ಟಕ್ಕೆ ಮಾಡುವದೇನು? ಇತ್ಯಾದಿ ಇತ್ಯಾದಿ. ಅವನು ಅವಳಿಗೊಂದು ದೊಡ್ಡ ಚಾಕು ಕೊಟ್ಟ, ನಿರ್ಜನ ನಡುಗಡ್ಡೆಯ ಮೇಲೆ ಬಳಿದು ಬಂದು ಬಿದ್ದಾಗ ದೊಡ್ಡ ಭಾಗ್ಯದ ನಿಧಿಯೊಂದು ಸಿಕ್ಕಿದಷ್ಟು ಆನಂದವಾಯಿತವಳಿಗೆ. ಹಗಲೆಲ್ಲ ಅವಳು ಹೆದರುವಂತೆ, ಇಲ್ಲವೆ ಕಷ್ಟಪಟ್ಟುಕೊಳ್ಳುವಂತೆ ಆತ ನಡೆಯಲಿಲ್ಲ. ಇಲ್ಲವೆನ್ನದಂತೆ, ಒಂದು ಟೊಂಗೆಯ ಮೇಲಿಂದ ಇನ್ನೊಂದರ ಮೇಲೆ ಸ್ವಚ್ಛಂದವಾಗಿ ಹಾಡುತ್ತ ಹಾರುತ್ತಿದ್ದ ಹಕ್ಕಿಯೊಂದನ್ನು ಆತ ಉರುಳಿಸಿದ. ಅದೊಂದು ಘಟನೆ ಬಿಟ್ಟರೆ ಸರಿ. ಅವನ ಕೈಯಲ್ಲಿ ಆ ಬಂದೂಕು ಇಲ್ಲದಿದ್ದರೆ ಸಿಲ್ವಿಯಾಳಿಗೆ ಅವನು ಎಷ್ಟೋ ಪಟ್ಟು ಹೆಚ್ಚು ಸೇರುತ್ತಿದ್ದನು. ಆತ ಇಷ್ಟು ಮೆಚ್ಚುವ ವಸ್ತುಗಳಾದ ಹಕ್ಕಿಗಳನ್ನೇ ಏಕೆ ಹೀಗೆ ಕೊಲ್ಲುತ್ತಾನೆಂಬುವದು ಆಕೆಗೆ ತಿಳಿಯದೇ ಹೋಯಿತು.

ಆದರೆ ಹೊತ್ತು ಇಳಿದಂತೆ ಸಿಲ್ವಿಯಾ ಆ ತರುಣನನ್ನು ಪ್ರೇಮಾಶ್ಚರ್ಯದೊಡನೆ ನೋಡುತ್ತಲೇ ಇದ್ದಳು. ಅಷ್ಟು ಮೋಹಕ ಮತ್ತು ಸುಖಕರವಾದ ವ್ಯಕ್ತಿಯನ್ನೆಂದೂ ಆಕೆ ನೋಡಿದ್ದಿಲ್ಲ. ಆ ಬಾಲೆಯಲ್ಲಿ ಒರಗಿದ್ದ ಹೆಣ್ಣಿನ ಹೃದಯ ಪ್ರೇಮದ ಕನಸಿನಿಂದ ಅಸ್ಪಷ್ಟವಾಗಿ ಪುಲಕಿತವಾಯಿತು. ಮಹಾಶಕ್ತಿಯ ಯಾವದೋ ಮನ್ಸೂಚನೆಯು ಆ

ಎರಡು ಹರೆಯದ ಜೀವಗಳನ್ನು ಅವರು ಆ ಕಾಡಿನಲ್ಲಿ ಹಗುರು ಹೆಜ್ಜೆಯ ಮೌನಚಿಂತೆಯಲ್ಲಿ ಸಂಚರಿಸುತ್ತಿರುವಾಗ ಪ್ರೇರಿಸಿ ಚಲಿಸುವಂತೆ ಮಾಡಿತು. ಒಂದು ಹಕ್ಕಿಯ ಇಂಚರ ಕೇಳಲು ಅವರು ತಡೆದರು. ಟೊಂಗೆಗಳನ್ನು ದೂರಮಾಡುತ್ತ ಅವರು ಆತುರದಿಂದ ಮುನ್ನುಗ್ಗಿದರು, ಪರಸ್ಪರ ಮಾತನಾಡದೆ, ಮಾತನಾಡಿದರೂ ಪಿಸುದನಿಯಲ್ಲಿ. ಆ ತರುಣ ಮೊದಲು ಮುಂದಾಗುತ್ತ. ಸಿಲ್ವಿಯಾ ಮೋಹಮುಗ್ಧೆಯಾಗಿ ನಸುಗಪ್ಪು ಕಣ್ಣುಗಳಲ್ಲಿ ಔತ್ಸುಕ್ಯ ತುಂಬಿ ಕೆಲವೇ ಹೆಜ್ಜೆ ಹಿಂದೆ ಹಿಂಬಾಲಿಸುತ್ತಿದ್ದಳು.

ಆಶೆಪಟ್ಟು ಆಯಾಸಪಟ್ಟು ಹುಡುಕಾಡುತ್ತಿದ್ದ ಬಿಳಿ ಕೊಕ್ಕರೆ ಕಾಣಸಿಗದುದ್ದರಿಂದ ಆಕೆಗೆ ಬಹಳ ವ್ಯಸನವಾಯಿತು. ಆದರೆ ಆಗಂತುಕನಿಗೆ ಅವಳು ಮಾರ್ಗದರ್ಶಕಳಲ್ಲದೇ ಅನುಯಾಯಿಯೂ ಆಗಿದ್ದಳು. ಮತ್ತು ಮೊದಲು ಯಾರು ಮಾತನಾಡುವದೆಂಬುದೇನೂ ಪ್ರಶ್ನೆ ಇದ್ದಿಲ್ಲ. ಪ್ರಶ್ನೆ ಕೇಳದೆ ತಾನೇ ಎತ್ತಿದ ದನಿಯ ಸದ್ದು ಆಕೆಗೆ ಗಾಬರಿಗೊಳಿಸಬಹುದಿತ್ತು. ಅಗತ್ಯಬಿದ್ದಾಗ “ಹೌದು” ಇಲ್ಲವೆ “ಇಲ್ಲ” ಎನ್ನುವದೇ ಸಾಕಷ್ಟು ಸಂಕಟವಾಗಿತ್ತು. ಕೊನೆಗೂ ಸಂಜೆ ಕವಿಯತೊಡಗಿತು. ಅವರಿಬ್ಬರೂ ಆಕಳನ್ನು ಒಟ್ಟಿಗೆ ಮನೆಗೆ ಅಟ್ಟಿ ತಂದರು. ಅದೇ ಒಂದು ರಾತ್ರೆ ಹಿಂದೆ ತಾನು ಸಿಳ್ಳು ಕೇಳಿ ದಿಗಿಲು ಬಿದ್ದ ಸ್ಥಳಕ್ಕೆ ಅವರು ಬಂದಾಗ ಸಿಲ್ವಿಯಾ ಹರ್ಷದಿಂದ ನಕ್ಕಳು.

೨

ಮನೆಯಿಂದ ಅರ್ಧಮೈಲಿಗೆ ಕಾಡುಗಳ ಆಚೆಯ ಅಂಚಿಗೆ ನೆಲದ ಎತ್ತರವಾದ ಸ್ಥಳದಲ್ಲಿ ಒಂದು ಪ್ರಚಂಡ 'ಪೈನ' ವೃಕ್ಷವು ನಿಂತಿತ್ತು-ಅದು ತನ್ನ ವಂಶದ ಕೊನೆಯ ಅಂಕುರ. ಅದನ್ನು ಒಂದು ಸೀಮಾಲಕ್ಷಣವಾಗಿಯೋ ಅಥವಾ ಬೇರೆ ಯಾತಕ್ಕಾಗಿಯೋ ಹಾಗೆ ಒಂಟಿ ಬಿಡಲಾಗಿತ್ತೆಂಬುವದು ಯಾರೂ ಅರಿಯರು. ಅದರ ಬಳಗದ ಮರಗಳನ್ನು ಕಡಿದೊಗೆದ ಮರ' ಕಟುಕರೆಲ್ಲ ಸತ್ತು ಎಷ್ಟೋ ಕಾಲ ಕಳೆದುಹೋಗಿತ್ತು. 'ಪ್ಯಾನ', 'ಓಕ' ಮತ್ತು 'ಮ್ಯಾಪಲ್' ಮೊದಲಾದ ಜಾತಿಯ ದೊಡ್ಡ ದೊಡ್ಡ ಮರಗಳ ಹೊಸತೊಂದು ಅರಣ್ಯವೇ ಆ ಸುತ್ತಿನಲ್ಲಿ ಬೆಳೆದು ನಿಂತಿತ್ತು. ಆದರೂ

ಪುರಾಣ ಪುರುಷನಂತಿದ್ದ ಆ 'ಪೈನ' ವೃಕ್ಷವು ಆ ಕಾಡಿನ ಮರಗಳನ್ನೆಲ್ಲ ಮೀರಿ ಶಿಖರದಂತೆ ನಿಂತಿತ್ತು. ಮತ್ತು ಮೈಲು ಮೈಲುಗಟ್ಲೆ ದೂರದವರೆಗೆ ಕಡಲಿಗೂ ಕರಾವಳಿಗೂ ಒಂದು ಸೀಮಾಸ್ತಂಭವಾಗಿಬಿಟ್ಟಿತ್ತು. ಸಿಲ್ವಿಯಾ ಈ ಮರವನ್ನು ಚೆನ್ನಾಗಿ ಬಲ್ಲಳು. ಅದರ ತುದಿಗೆ ಏರಿದವನು ದೂರದ ಸಾಗರವನ್ನು ಕಾಣಬಲ್ಲನೆಂಬುದನ್ನು ಆಕೆ ದೃಢವಾಗಿ ನಂಬಿದ್ದಳು. ಮತ್ತು ಆ ಪುಟ್ಟಬಾಲಿಕೆ ಆ ಮರದ ಅತ್ಯಂತ ಒರಟಾದ ಕಾಂಡದ ಮೇಲೆ ಕೈಯಿಟ್ಟು ಎತ್ತರದ ಕಪ್ಪು ಶಾಖಾವಳಿಯ ಕಡೆಗೆ ಆಸೆ ಇಂಗದ ಕಣ್ಣಿನಿಂದ ನೋಡಿದ್ದಳು. ಆ ಶಾಖೋಪಶಾಖೆಗಳು ಎಂತಹ ಕಡು ಬೇಸಿಗೆಯಲ್ಲೂ ಎತ್ತರದ ಗಾಳಿಗೆ ಸದಾ ಕಾಲವೂ ಅಲುಗಾಡುತ್ತಿದ್ದವು. ಇಂದು ಆಕೆ ಆ ಮರವನ್ನು ಹೊಸ ಹುರುಪಿನಿಂದ ನಿಟ್ಟಿಸಿದಳು. ಏಕೆ? ನಸುಕು ಹರಿಯುವಾಗ ಆ ಹೆಮ್ಮರವನ್ನು ಏರಿ ನಿಂತರೆ ಸುತ್ತಲಿನ ಜಗತ್ತನ್ನೆಲ್ಲ ನೋಡಬಹುದಲ್ಲವೇ? ಆ ಬಿಳಿಕೊಕ್ಕರೆ ಎಲ್ಲಿಂದ ಹಾರಿ ಬರುವದೆಂಬುದನ್ನು ಕಂಡುಕೊಳ್ಳಬಹುದಲ್ಲವೇ? ಆ ತಾಣವನ್ನು ಗೊತ್ತುಹಚ್ಚಿಕೊಂಡರೆ ಮುಂದೆ ಅದರ ಗೂಡನ್ನು ಹುಡುಕಿಕೊಳ್ಳಬಹುದಲ್ಲವೇ?

ಎಂಥ ಸಾಹಸಪ್ರವೃತ್ತಿ! ಏನು ಮಹತ್ವಾಕಾಂಕ್ಷೆ! ಮರುದಿನ ಮುಂಜಾನೆ ತಾನು ಕಂಡುಹಿಡಿದ ರಹಸ್ಯವನ್ನು ಪ್ರಕಟಿಸುವದರಲ್ಲಿ ಎಂಥ ಕಾಲ್ಪನಿಕ ವಿಜಯ, ಆನಂದ ಮತ್ತು ವೈಭವ! ಆ ಬಾಲಿಕೆಯ ಹೃದಯವು ತಾಳಲಾರದಷ್ಟು ಈ ಕಲ್ಪನೆ ದಿಟವೆನಿಸಿತು, ಹಿಂದೆನಿಸಿತು!

ಇಡೀ ರಾತ್ರಿ ಆ ಚಿಕ್ಕಮನೆಯ ಬಾಗಿಲು ತೆರೆದೇ ಉಳಿಯಿತು. ಚೀರುಂಡೆಗಳು ಹೊಸ್ತಿಲನ್ನು ಏರಿ ತಮ್ಮ ಸೋಬಾನೆ ಹಾಡಿ ಹೋದವು. ತರುಣ ಬೇಟೆಗಾರನೂ ಅವನ ಮುದಿ ಯಜಮಾನಿಯೂ ಗಾಢವಾಗಿ ನಿದ್ದೆ ಹೋಗಿದ್ದರು. ಆದರೆ ಸಿಲ್ವಿಯಾಳ ಮಹಾಯೋಜನೆಯು ಅವಳನ್ನು ಪೂರ್ತಿ ಎಚ್ಚರವಾಗಿ ಉಳಿಯುವಂತೆ ಮಾಡಿತು. ಆಕೆ ನಿದ್ದೆಯ ವಿಚಾರವನ್ನೇ ಮರೆತಳು. ಬೇಸಿಗೆಯ ಚಿಕ್ಕರಾತ್ರಿಯು ಚಳಿಗಾಲದ ರಾತ್ರಿಯಷ್ಟೇ ದೀರ್ಘವೆನಿಸಿತು. ಕೊನೆಗೂ ಚೀರುಂಡೆಗಳ ಸಂಗೀತ ಸಮಾಪ್ತವಾಯಿತು. ಇನ್ನು

ನಸುಕು ತೀರ ಲಗು ಬರಬಹುದೆಂದು ಆಕೆಗೆ ಗಾಬರಿ. ಅವಳು ಕಳ್ಳಹೆಜ್ಜೆಯಲ್ಲಿ ಮನೆಯ ಹೊರಗೆ ಹೊರಟಳು. ಕಾಡುಗಳೊಳಗಿಂದ ಹುಲ್ಲುಗಾವಲಿನ ದಾರಿ ಹಿಡಿದು ಹೊರಟಳು. ಆಚೆಯ ಬಯಲು ಭಾಗದ ಕಡೆಗೆ ತ್ವರೆಯಿಂದ ನಡೆದಳು. ದಾರಿಯಲ್ಲಿ ಹಾಯುವಾಗ ಒಂದು ಅರೆ ಎಚ್ಚೆತ್ತ ಹಕ್ಕಿಯ ಆನಿಕೆಯ ಟೊಂಗೆಯನ್ನು ಆಕೆ ಜಜ್ಜಿದ್ದರಿಂದ ಆ ಹಕ್ಕಿ ತೂಕಡಿಕೆಯಲ್ಲಿಯೇ ಚಿವ್ ಚಿವ್ ಎಂದು ಕೆರಳಿಕೊಂಡಿತು. ಅದನ್ನು ಸಹಬಾಂಧವ್ಯದ ಒಂದು ಸುಖಭಾವನೆಯಲ್ಲಿಯೇ ಕಿವಿಗೊಡುತ್ತ ಆಕೆ ಮುಂದರಿದಳು.

ಅಯ್ಯೋ-ಈ ಪುಟ್ಟ ಬಾಳಿನಲ್ಲಿ ಪ್ರಥಮ ಬಾರಿ ಮಾನವ್ಯದ ಆಸಕ್ತಿ ಪ್ರಚಂಡ ತೆರೆಯಾಗಿ ನೆರೆಯನ್ನುಂಟುಮಾಡಿತ್ತು. ಆ ನೆರೆಯು, ಪ್ರಕೃತಿಯೊಂದಿಗೆ, ಬೆಟ್ಟದ ಮೂಕ ಜೀವನದೊಂದಿಗೆ ಸಮರಸವಾದ ಈ ಬದುಕಿನ ಸಮಾಧಾನ ಸಂತೃಪ್ತಗಳನ್ನು ಕೊಚ್ಚಿ ತೇಲಿಸಿ ಒಯ್ಯಬೇಕೇ?

ಕಳೆಗುಂದುತ್ತಿರುವ ಬೆಳದಿಂಗಳಲ್ಲಿ ಆ ಮಹಾವ್ಯಕ್ತ ಇನ್ನೂ ನಿದ್ದೆ ಮಾಡುತ್ತಿತ್ತು. ಮತ್ತು ಈ ಪುಟ್ಟ ಮಂಕು ಸಿಲ್ವಿಯಾ ಅತ್ಯಂತ ಪರಾಕ್ರಮದಿಂದ ಅದರ ತುದಿಗೆ ಏರಲು ಆರಂಭಿಸಿದಳು. ಅವಳ ಶರೀರದ ನರನಾಡಿಗಳೊಳಗಿಂದ ಚಂಚಲ ಕಾತರ ರಕ್ತವು ಹರಿದಾಡುತ್ತಿತ್ತು. ಆಕೆಯ ಪುಟ್ಟ ಬರಿಗಾಲುಗಳೂ ಬೆರಳುಗಳೂ ಹಕ್ಕಿಯ ನಖಗಳಂತೆ ಅಲ್ಲಿ ಇಲ್ಲಿ ಚಿವುಟಿ ಅವಚಿ ಹಿಡಿದು ಮೇಲೆ ಮೇಲೆ ಮುಗಿಲನ್ನೇ ಮುಟ್ಟುವ ಆ ರಾಕ್ಷಸ ನಿಚ್ಚಣಿಕೆಯನ್ನು ಹತ್ತತೊಡಗಿದವು. ಹೇಗೆ? ಮೊದಲು ಆಕೆ ಪಕ್ಕದಲ್ಲಿಯೇ ಬೆಳೆದ ಬಿಳಿಯ ಓಕ ಮರವನ್ನೇರಬೇಕು. ಅದರ ಕಪ್ಪು ಶಾಖೆಗಳಲ್ಲಿ ಇಬ್ಬನಿಯಿಂದ ಒದ್ದೆಯೂ ಭಾರವೂ ಆದ ಹಸಿರು ಎಲೆಗಳ ಮರೆಯಲ್ಲಿ ಚಕ್ಕೆ ಮರೆಯಾದಂತೆ ತೋರಿತು. ಒಂದು ಹಕ್ಕಿ ತನ್ನ ಗೂಡಿನಿಂದ ರೆಕ್ಕೆ ಫಡಫಡಿಸುತ್ತ ಹೊರಹೊರಟಿತು. ಒಂದು ಕೆಂಪು ಇಣಚಿ ಅತ್ತಿತ ಓಡಾಡಿ ಈ ನಿರುಪದ್ರವ ಕನ್ನಗಾರ್ತಿಯನ್ನು ಛೀಹಾಕಿತು. ಸಿಲ್ವಿಯಾಳಿಗೆ ತನ್ನ ದಾರಿ ಸುಗಮವೆನಿಸಿತು. ಅವಳು ಹಲವೊಮ್ಮೆ ಅಲ್ಲಿ ಏರಿದ್ದಳು. ಇನ್ನೂ ಎತ್ತರಕ್ಕೆ ಓಕ ಮರದ ಒಂದು ಮೇಲಿನ ಟೊಂಗೆ ಪೈನ ವೃಕ್ಷದ ಕಾಂಡಕ್ಕೆ ಹೊಸೆಯುತ್ತಿತು. ಅಲ್ಲಿಯೇ

ಪೈನ ವೃಕ್ಷದ ಕೆಳ ಟೊಂಗೆಗಳು ಹತ್ತಿರ ಹತ್ತಿರ ಚಾಚಿದ್ದವು. ಅಲ್ಲಿ ಒಂದು ಮರದಿಂದ ಇನ್ನೊಂದಕ್ಕೆ ದಾಟುವ ಅಪಾಯವನ್ನು ಪಾರಾದೊಡನೆ ಮಹಾಸಾಹಸವು ನಿಜವಾಗಿಯೂ ಆರಂಭವಾಗುವದು.

ಕೊನೆಗೊಮ್ಮೆ ಆಕೆ ತೂಗಾಡುವ ಆ ಓಕ ಟೊಂಗೆಯಗುಂಟ ಜಾಗರೂಕತೆಯಿಂದ ಹರಿದಾಡಿದಳು. ಮತ್ತು ಪುರಾತನ ಪೈನಮರಕ್ಕೆ ಸಾಹಸದ ಹೆಜ್ಜೆ ಇಕ್ಕಲು ಉಪಕ್ರಮಿಸಿದಳು. ದಾರಿ ಆಕೆ ಊಹಿಸಿದುದಕ್ಕಿಂತ ಕಠಿಣವಾಗಿತ್ತು. ಆಕೆ ದೂರ ನಿಲುಕಬೇಕು; ಗಟ್ಟಿ ಹಿಡಿಯಬೇಕು. ಹರಿತವಾದ ಒಣ ಟಿಸಿಲುಗಳು ಅವಳನ್ನು ಹಿಡಿದವು, ತಡೆಹಿಡಿದವು. ತರಿದಾಡಿದವು-ಕೆರಳಿದ ಪಕ್ಷಿನಖಗಳಂತೆ ಮರದ ಸೊನೆಯು ಅವಳ ಚಿಕ್ಕ ಬೆರಳುಗಳನ್ನು ಹೂಲಸಾಗಿ ಕೊರಡಾಗಿ ಮಾಡಿತು. ಅವಳು ಮರವನ್ನು ಸುತ್ತುಸುತ್ತಾಗಿ ಎತ್ತರಕ್ಕೆ ಎತ್ತರಕ್ಕೆ ಏರತೊಡಗಿದಳು. ಕೆಳಗೆ ಕಾಡುಗಳಲ್ಲಿ ಗುಬ್ಬಿಗಳೂ, 'ರೊಬಿನ್'ಗಳೂ ಎಚ್ಚತ್ತು ಉಷಃಕಾಲಕ್ಕೆ ಚಿಲಿಪಿಲಿಯ ಸ್ವಸ್ತಿಪಾಠ ಹೇಳತೊಡಗಿದ್ದವು. ಆದರೆ ಅಲ್ಲಿ 'ಪೈನ' ವೃಕ್ಷದ ಮೇಲ್ಭಾಗ ಇನ್ನೂ ಹೆಚ್ಚು ಬೆಳಕಾಗಿ ತೋರಿತು. ತನ್ನ ಯೋಜನೆಯು ಫಲಕಾರಿಯಾಗಬೇಕಿದ್ದರೆ ತಾನು ಇನ್ನೂ ತ್ವರೆಮಾಡಬೇಕೆಂದು ಆ ಬಾಲೆಗೆ ಅನಿಸಿತು.

ಅವಳು ಮೇಲೆ ಹೋದಂತೆ ಆ ಮರವು ಇನ್ನೂ ಉದ್ದವಾಗುವಂತೆ ತೋರಿತು. -ಇನ್ನೂ ಮೇಲಕ್ಕೆ ಇನ್ನೂ ಎತ್ತರಕ್ಕೆ ನಿಲುಕುವಂತೆ ತೋರಿತು. ಕಡಲಪಯಣ ಮಾಡುತ್ತಿರುವ ಭೂಮಿಗೆ ಅದೊಂದು ಮುಖ್ಯ ಪಟಸ್ತಂಭದಂತೆ ಇತ್ತು. ಈ ದೃಢನಿಶ್ಚಯದ ಮಾನವಚೇತನದ ಕಿಡಿಯು ಬಗೆ ಎತ್ತರದ ಕೊಂಬೆಯಿಂದ ಇನ್ನೂ ಎತ್ತರದ ಕೊಂಬೆಗೆ ಹಾಯುತ್ತ ಹೋಗುವದನ್ನು ಗಮನಿಸಿದ ಆ ಹೆಮ್ಮರಕ್ಕೆ ಅಂದು ಮುಂಜಾನೆ ಆಶ್ಚರ್ಯವೆನಿಸಿರಬೇಕು. ಈ ಅಬಲಾಮಣಿಯ ಆರೋಹಣಕ್ರಿಯೆಯಲ್ಲಿ ಆ ಕೊಂಬೆಗಳ ಸಹಕರಿಸಿದವೋ ಯಾರಿಗೆ ಗೊತ್ತು! ಆ ಹಳೆಯ ಪೈನವೃಕ್ಷವು ತನ್ನನ್ನು ಅವಲಂಬಿಸಿದ್ದ ಈ ಹೊಸಜೀವನವನ್ನು ಪ್ರೀತಿಸಿರಬೇಕು. ಅಲ್ಲಿಯ ಗಿಡುಗ,

ತೊಗಲುಬಾವಲಿ, ಹಾತೆ ಹಾಗೂ ಥ್ರಶ್ ಪಕ್ಷಿಗಳ ಇಂಪಾದ ಕೊರಳಿಗಿಂತಲೂ ಆ ಏಕಾಕಿಯಾದ ಬೆಕ್ಕುಗಣ್ಣಿನ ಬಾಲಿಕೆಯ ಹೃದಯದ ಬಡಿತವು ಹಚ್ಚಿನದಿತ್ತು! ಆ ಹೆಮ್ಮರವು ಸ್ತಬ್ಧವಾಗಿ ನಿಂತು, ಆ ಜ್ಯೂನ್ ತಿಂಗಳ ಮುಂಜಾವಿನಲ್ಲಿ ಆರುಣೋದಯವು ಪೂರ್ವ ದಿಗಂತದಲ್ಲಿ ಕಂಗೊಳಿಸುತ್ತಿರುವಾಗ, ಗಾಳಿಯ ಬೀಸುವಿಕೆಯನ್ನು ತಡೆಗಟ್ಟಿತು.

ನೆಲದಿಂದ ಅವಳ ಕಡೆ ನೋಡಿದಾಗ, ಕಟ್ಟಕಡೆಯ ಮುಳ್ಳುಮುಳ್ಳಾದ ಟೊಂಗೆಯನ್ನು ಹಾಯ್ದು ಏರಿ ನಿಂತ ಸಿಲ್ವಿಯಾಳ ಬಸವಳಿದ, ಆದರೆ ಪೂರ್ಣ ವಿಜಯಿಯಾದ ಮುಖವು ಕಳೆಗುಂದಿದ ತಾರೆಯಂತೆ ಇತ್ತು. ಉದಯ ಭಾಸ್ಕರನು ತನ್ನ ಸಮುಜ್ವಲ ಸ್ವರ್ಣಪ್ರಭೆಯ ಜಾಲವನ್ನು ಕಡಲಲ್ಲಿ ಹಬ್ಬಿಸಿದ್ದನು ಮತ್ತು ವರ್ಣವೈಭವದ ಆ ಪೂರ್ವದಿಙ್ಮಂಡಲದತ್ತ ಎರಡು ಗಿಡುಗಗಳು ನಿಧಾನವಾಗಿ ರೆಕ್ಕೆಗಳನ್ನು ಬೀಸುತ್ತ ಹಾರಿದವು. ಆ ಎತ್ತರದಿಂದ ಅವು ಆಕಾಶದಿಂದ ಎಷ್ಟೋ ಕೆಳಗೆ ತಗ್ಗಾಗಿ ಹಾರುವಂತೆ ಕಂಡವು! ಸ್ವಲ್ಪ ಮುಂಚೆ ಅವೇ ನೀಲ ಆಕಾಶದ ಹಿನ್ನೆಲೆಗೆ ಎತ್ತರಕ್ಕೆ ಕಪ್ಪಾಗಿ ಕಂಡಿದ್ದವು. ಅವುಗಳ ನರೆಗರಿಗಳು ಪಾತರಗಿತ್ತಿಗಳಂತೆ ಮಿದುವಾಗಿದ್ದವು. ಅವು ಮರದಿಂದ ಸ್ವಲ್ಪವೇ ದೂರವಿದ್ದಂತೆ ತೋರಿದವು. ಸಿಲ್ವಿಯಾಳಿಗೆ ತಾನೂ ಹಾರುತ್ತ ಮೋಡಗಳೊಳಗಿಂದ ಹೊರಟುಹೋಗಬೇಕೆನಿಸಿತು. ಪಡುವಣ ದಿಕ್ಕಿನಲ್ಲಿ ಕಾಡುಗಳೂ ಹೊಲಮನೆಗಳೂ ಮೈಲುಗಟ್ಲೆ ದೂರದ ತನಕ ಪಸರಿಸಿದ್ದವು. ಅಲ್ಲಿ ಇಲ್ಲಿ ಚರ್ಚುಗಳ ಉತ್ತುಂಗ ಶಿಖರಗಳೆದ್ದಿದ್ದವು ಬಿಳಿಯ ಹಳ್ಳಿಗಳು ನೆಲೆಸಿದ್ದವು. ನಿಜವಾಗಿಯೂ ಅದೊಂದು ವಿಶಾಲವಾದ ವಿಸ್ಮಯಕರವಾದ ಜಗತ್ತು!

ಹಕ್ಕಿಗಳು ಹೆಚ್ಚು ಹೆಚ್ಚು ಬಿಡುದನಿಯಲ್ಲಿ ಗಳಹತೊಡಗಿದವು. ಕೊನೆಗೆ ಸೂರ್ಯ ದಿಗ್ಭ್ರಮೆಗೊಳಿಸುವಷ್ಟು ಪ್ರಖರವಾಗಿ ಮೂಡಿಬಂದ. ದೂರ ಕಡಲಲ್ಲಿ ತೇಲುವ ಹಡಗಗಳ ಬಿಳಿಯ ಹಾಯಿಗಳನ್ನು ಸಿಲ್ವಿಯಾ ನೋಡುತ್ತಿದ್ದಳು. ಮತ್ತು ಮೊದಲು ನೇರಲವಾಗಿ ಗುಲಾಬಿಗೆಂಪಾಗಿ ಹಳದಿ ಬಣ್ಣವಾಗಿದ್ದ ಮುಗಿಲುಗಳು ಮಾಯವಾಗಹತ್ತಿದವು. ಈ ಹಸಿರು ಟೊಂಗೆಗಳ ಸಮುದ್ರದಲ್ಲಿ ಆ ಬಿಳಿ ಕೊಕ್ಕರೆಯ

ಗೂಡು ಇದ್ದುದಾದರೂ ಎಲ್ಲಿ? ಇಂಥ ತಲೆತಿರುಗಿಸುವ ಎತ್ತರಕ್ಕೆ ಹತ್ತಿದ್ದಕ್ಕೆ ಈ ಅದ್ಭುತ ದೃಶ್ಯವೂ ಚಿತ್ರಾವಳಿಯೂ ನೋಡಲು ದೊರೆತದ್ದೊಂದೇ ಪ್ರತಿಫಲಪೇನು?

ಇದೀಗ ಕೆಳಗೆ ನೋಡು, ಸಿಲ್ವಿಯಾ, ಅಲ್ಲಿ ಹೊಳೆಯುವ ಬರ್ಚ ಗಿಡಗಳ ನಡುವೆ ಚಾಚಿದ್ದ ಹಸಿರು ಜವಳುಗಾಡಿನತ್ತ, ಕಪ್ಪು ಹೆಮ್‌ಲಾಕ್ ಪೊದೆಗಳತ್ತ ಅಲ್ಲಿ ಹಿಂದೊಮ್ಮೆ ಬಿಳಿ ಕೊಕ್ಕರೆಯನ್ನು ಕಂಡಲ್ಲಿಯೇ ನೀನು ಇನ್ನೊಮ್ಮೆ ಅದನ್ನು ಕಾಣುವಿ. ನೋಡು, ನೋಡು! ಆ ಸತ್ತ ಹೆಮ್‌ಲಾಕ್ ಗಿಡವಿದೆಯಲ್ಲ, ಆ ನಿಟ್ಟಿನಿಂದ ಅದು ಬರುತ್ತಲಿದೆ. ಬಿಳಿಯ ಬಿಂದುವಿನಂತೆ ಕಾಣುವ ಆ ಹಕ್ಕಿ ಒಂದು ಬಿಡಿ ಗರಿಯು ತೇಲಿ ಬರುವಂತೆ ಬರುತ್ತಲಿದೆ. ಹತ್ತಿರ ಬರುತ್ತಿದ್ದಂತೆ ಎತ್ತರಕ್ಕೇರುತ್ತಿದೆ. ದೊಡ್ಡದಾಗಹತ್ತಿದೆ, ಕೂನೆಗೂ ತೀರ ಸಮೀಪ ಬಂದಿತು. ಮತ್ತು ಆ ಸೀಮೆಯ ಹೆಗ್ಗುರುತಾದ ಹೆಮ್ಮರವನ್ನು ಹಾದುಹೋಯಿತು, ರೆಕ್ಕೆ ದೃಢವಾಗಿ ಬೀಸುತ್ತ, ನೀಳವಾದ ಕೊಕ್ಕು ಮತ್ತು ತುರಾಯಿಯ ತಲೆಯನ್ನು ನಿಡಿದಾಗಿ ಚಾಚಿ ಮತ್ತೆ ನಿಲ್ಲು ನಿಲ್ಲು, ಒಂದೇ ಹೆಜ್ಜೆ ಒಂದು ಬೆರಳು ಅಲುಗಿಸಬೇಡ, ಪುಟ್ಟ ಹುಡುಗಿ. ನಿನ್ನ ಕಣ್ಣುಗಳ ಎರಡು ಕಿರಣಗಳನ್ನೂ ಚೇತನೆಯನ್ನೂ ಅದರತ್ತ ಕಳುಹಿಸಬೇಡ. ನೀನು ನಿಂತಲ್ಲಿಂದ ಬಹಳ ದೂರವಲ್ಲದ ಒಂದು ಟೊಂಗೆಯ ಮೇಲೆ ಆ ಕೊಕ್ಕರೆ ತಂಗಿದೆ. ಅಲ್ಲಿಂದ ತನ್ನ ಗೂಡಿನಲ್ಲಿದ್ದ ಕಳದಿಗೆ ಕೂಗಿ ಮರುದನಿ ಕೊಡುತ್ತಿದೆ. ಹೊಸ ಹಗಲಿಗಾಗಿ ತನ್ನ ಗರಿ, ಪುಚ್ಛಗಳನ್ನು ಸರಿಪಡಿಸಿಕೊಳ್ಳುತ್ತಿದೆ.

ಒಂದು ನಿಮಿಷಾನಂತರ ಬಾವಲಿ ಹಕ್ಕಿಗಳ ಒಂದು ಪಡೆಯು ಆ ಮರಕ್ಕೆ ಬಂದಾಗ ಆ ಹುಡುಗಿ ಹಾಯಾಗಿ ನಿಟ್ಟುಸಿರು ಬಿಡುತ್ತಾಳೆ. ಆ ಹಕ್ಕಿಗಳ ಪಡಪಡಿಸುವ ಕರ್ಕಶಕ್ಕೆ ನಿಯಮಭ್ರಷ್ಟ ನಡತೆಗೆ ಹೇಸಿ ಗಂಭೀರ ಕೊಕ್ಕರೆ ಅಲ್ಲಿಂದ ಹಾರಿಹೋಗುತ್ತದೆ. ಅದರ ಗುಟ್ಟು ಈಗ ಸಿಲ್ವಿಯಾಳಿಗೆ ಗೊತ್ತಾಗಿದೆ-ಆ ಹಕ್ಕಿಯು ಕೆಳಗಿನ ಹಸಿರು ಲೋಕದಲ್ಲಿನ ತನ್ನ ಮನೆಗೆ ಬಾಣದಂತೆ ಗುರಿಯಿಟ್ಟು ಹಾರಿಹೋಗುತ್ತದೆ. ಅನಂತರ ಸಿಲ್ವಿಯಾ ಒಳ್ಳೇ ಸಂತೃಪ್ತಿಯಿಂದ ಆ ಗಂಡಾಂತರದ ದಾರಿಯಲ್ಲಿ ಕೆಳಗಿಳಿಯುತ್ತ ತಾನು ನಿಂತ ಟೊಂಗೆಗೂ ಬಹಳ ಕೆಳಗೆ ನೋಡಲು ಧೈರ್ಯಪಡದೆ, ಬೆರಳು

ನೋಯುತ್ತಿದ್ದುದರಿಂದ ಕುಂಟಲು ಬಂದ ಕಾಲುಗಳು ಜಾರುತ್ತಿದ್ದರಿಂದ ಕೆಲವು ಸಲ ಅಳುವಂತೆ ಆಗಿ ಆಕ ಮರದಡಿಯನ್ನು ಸೇರಿದಳು. ಅವಳಿಗೆ ಮತ್ತ ಮತ್ತೆ ಒಂದೇ ಆಲೋಚನೆ-ಆಗಂತುಕ ತನಗೆ ಏನನ್ನಬಹುದು? ಮತ್ತು ಕೊಕ್ಕರೆಯ ಗೂಡಿಗೆ ನೇರವಾಗಿ ಹೋಗುವದು ಹೇಗೆಂದು ತಾನು ಹೇಳಿದಾಗ ಆತನಿಗೆ ಏನೆನಿಸಬಹುದು?

"ಸಿಲ್ವೀ, ಸಿಲ್ವೀ!" ಹೊರಗಲಸದಲ್ಲಿದ್ದ ಅಜ್ಜಿ ಮತ್ತೆ ಮತ್ತೆ ಕೂಗಿದಳು. ಆದರೆ ಯಾರೂ ಉತ್ತರ. ಕೂಡಲಿಲ್ಲ. ಚಿಕ್ಕ ತವಡಿನ ಹಸೆ ಬರಿದಾಗಿತ್ತು. ಸಿಲ್ವಿಯಾ ಮಾಯವಾಗಿದ್ದಳು.

ಅತಿಥಿಯು ಕನಸಿನಿಂದ ಎಚ್ಚೆತ್ತು ದಿನದ ಸುಖಸಂಭವವನ್ನು ನೆನೆದು ಉಟ್ಟು ತೊಟ್ಟು ಸಜ್ಜಾಗಲಿಕ್ಕೆ ಗಡಿಬಿಡಿಯಿಂದ ತೊಡಗಿದನು. ಅದನ್ನು ಆದಷ್ಟು ಲಗು ಆರಂಭಿಸಲಿಕ್ಕೆ ಆ ಚಿಕ್ಕ ಠಕ್ಕ ಹುಡುಗಿ ನಿನ್ನೆ ಒಂದೆರಡು ಸಲ ತನ್ನನ್ನು ನೋಡಿದ ರೀತಿಯಲ್ಲಿಯೇ ಆತನಿಗೆ ಮನದಟ್ಟಾಗಿತ್ತು. ಆ ಬಿಳಿ ಕೊಕ್ಕರೆಯನ್ನು ನೋಡಿಯಂತೂ ಇರಲೇಬೇಕು. ಈಗ ಗೊತ್ತಿದ್ದನ್ನೆಲ್ಲ ಹೇಳಲು ಅವಳನ್ನು ಬಲವಂತಪಡಿಸಬೇಕು. ಇಗೋ ಇಲ್ಲಿಯೇ ಬರುತ್ತಿದ್ದಾಳೆ ಆಕೆ. ಎಂದಿಗಿಂತಲೂ ಹೆಚ್ಚು ಕಳೆಗುಂದಿದ್ದಾಳ; ಅವಳ ಹಳೆಯ 'ಫ್ರಾಕು' ಹರಿದು ಚಿಂದಿಯಾಗಿದೆ, ಪೈನಿನ ಸೊನೆ ತುಂಬಿ ಹೊಲಸಾಗಿದೆ. ಅಜ್ಜಿ ಮತ್ತು ಬೇಟೆಗಾರ ಇಬ್ಬರೂ ಬಾಗಿಲಲ್ಲಿ ನಿಂತು ಒಟ್ಟಾಗಿ ಅವಳನ್ನು ವಿಚಾರಿಸುತ್ತಾರೆ. ಮತ್ತು ಆ ಹಸಿರು ಜವಳುಗಾಡಿನ ಹತ್ತಿರದ ಸತ್ತ ಹೆಮ್‌ಲಾಕ್ ಗಿಡದ ವಿಚಾರ ಹೇಳಿಬಿಡುವ ಧನ್ಯ ಗಳಿಗೆ ಇದೇ ಬಂದಿದೆ.

ಆದರೆ ಸಿಲ್ವಿಯಾ ಮಾತನಾಡುವದೇ ಇಲ್ಲ. ಮುದಿಯಜ್ಜಿ ಸಿಡುಕಿನಿಂದ ಛೀಮಾರಿ ಹಾಕುತ್ತಾಳೆ. ತರುಣನ ಕನಿಕರದ ಅಂಗಲಾಚುವ ಕಣ್ಣುಗಳು ನೇರವಾಗಿ ಅವಳ ಕಣ್ಣುಗಳಲ್ಲಿ ನಟ್ಟಿವೆ. ಆದರೂ ಆಕೆ ಮಾತನಾಡುವದೇ ಇಲ್ಲ. ಆತ ಅವರನ್ನು ಹಣದಿಂದ ಸಿರಿವಂತರಾಗಿಸಬಲ್ಲ. ಅಂತೆಯೇ ಮಾತನ್ನೂ ಕೊಟ್ಟಿದ್ದಾನೆ. ಅವರು ಈಗ

ಕಡುಬಡವರು. ಸುಖಿಯಾಗಿಸಲಿಕ್ಕೆ ಆತ ತುಂಬ ಅರ್ಹನು ಮತ್ತು ಅವಳು ಹೇಳಬಲ್ಲ ಆದರೆ ಹೇಳಲೊಲ್ಲದ ಕತೆಯನ್ನು ಕೇಳಲು ಆತ ಕಾಯುತ್ತಿದ್ದಾನೆ.

ಇಲ್ಲ, ಆಕೆ ಮೌನವನ್ನು ಕಾಪಾಡಲೇಬೇಕು. ಅವಳನ್ನು ಹೀಗೆ ಫಕ್ಕನೆ ಪ್ರತಿಬಂಧಿಸಿ ಮೂಕಿಯಾಗಿ ಮಾಡುವ ಶಕ್ತಿ ಯಾವದು? ಒಂಭತ್ತು ವರ್ಷ ಬೆಳೆದುಬಂದು, ಈಗ ದೊಡ್ಡದಾದ ಜಗತ್ತು ಅವಳ ಕಡೆ ಕೈಚಾಚಿದಾಗ ಅದನ್ನು ಒಂದು ಹಕ್ಕಿಗೋಸ್ಕರ ಆಕೆ ಧಿಕ್ಕರಿಸಿ ನೂಕಬೇಕೇ? ಪೈನ ಮರದ ಪಚ್ಚೆಟೊಂಗೆಗಳ ಮರ್ಮರವು ಈಗ ಅವಳ ಕಿವಿಯಲ್ಲಿದೆ. ಹೊಂಬಿಸಿಲ ವಾತಾವರಣದೊಳಗಿಂದ ಆ ಬಿಳಿಕೊಕ್ಕರೆ ಹಾರುತ್ತ ಹೇಗೆ ಬಂತೆಂಬುದನ್ನೂ, ತಾನು ಕಡಲನ್ನೂ ಮುಂಜಾವನ್ನೂ ಒಟ್ಟಾಗಿ ಹೇಗೆ ಅವಲೋಕಿಸಿದೆನೆಂಬುದನ್ನೂ ಅವಳು ನೆನೆಯುತ್ತಾಳೆ. ಆದರೆ ಸಿಲ್ವಿಯಾ ಮಾತನಾಡಲಾರಳು. ಕೊಕ್ಕರೆಯ ಗುಟ್ಟನ್ನು ಹೇಳಿ ಅದರ ಬದುಕನ್ನು ಮಣ್ಣುಗೂಡಿಸಲಾರಳು.

ಅಯ್ಯೋ ಪ್ರಿಯ ನಿಷ್ಠೆಯೇ, ಆ ಅತಿಥಿಯನ್ನು ವಿಶ್ವಾಸದಿಂದ ಸೇವಿಸಿ ಹಿಂಬಾಲಿಸಿ ಪ್ರೀತಿಸಿ ಸುಖಿಯಾಗಬಹುದಿತ್ತು. ಆದರೆ ನಿರಾಶೆಪಟ್ಟು ಆ ಅತಿಥಿ ಹೊತ್ತೇರಿದ ಮೇಲೆ ಎದ್ದು ಹೊರಟುಹೋದಾಗ ಆ ನಿಷ್ಠೆಗೆ ನಿಷ್ಠುರವಾದ ನೋವಿನ ತಿವಿತದ ಅನುಭವವಾಯಿತು. ಮುಂದೆ ಅನೇಕ ರಾತ್ರೆ ದಾರಿತಪ್ಪಿ ಅಲೆದಾಡಿದ ಆಕಳನ್ನು ಹಿಡಿದು ಮನೆಗೆ ಬರುತ್ತಿದ್ದಂತೆ ಹುಲ್ಲುಗಾವಲು. ದಾರಿಯಲ್ಲಿ ಅವನ ಸಿಳ್ಳು ಮೊಳಗುತ್ತಿರುವದನ್ನು ಸಿಲ್ವಿಯಾ ಕೇಳಿದಳು. ಅವನ ಬಂದೂಕಿನ ತೀವ್ರ ಗರ್ಜನೆಗೆ ಗುಬ್ಬಿಗಳೂ ಥ್ರಶ್ಯುಗಳೂ ತಮ್ಮ ಇಂಚರ ಅಡಗಿಹೋಗಿ ಚೆಂದದ ಗರಿಗಳೆಲ್ಲ ನೆತ್ತರದಲ್ಲಿ ತೊಯ್ದು ದೊಪ್ಪನೆ ನೆಲಕ್ಕೆ ಬೀಳುವುದನ್ನು ಕಂಡಾಗ ಆಕೆ ತನ್ನ ದುಃಖವನ್ನು ಮರೆತಳು. ಹಕ್ಕಿಗಳನ್ನು ಬೇಟೆಯಾಡುವವರಿನಿಂತ ಹಕ್ಕಿಗಳೇ ಹೆಚ್ಚಿನ ಗೆಳೆಯರಾಗುವರೇ?– ಯಾರು ಹೇಳಬಲ್ಲರು? ಅವಳಿಗೆ ಮಿಕ್ಕ ಯಾವ ಸಂಪತ್ತುಗಳು ಕಳೆದುಹೋದರೂ- ವನಸ್ಥಳಿಗಳೇ, ವಸಂತಕಾಲವೇ, ನೆನಪಿಡಿರಿ. ನಿಮ್ಮ ಪ್ರಸಾದಾನುಗ್ರಹಗಳ

ಕೃಪಾನಿಧಿಗಳನ್ನು ಈ ಹಳ್ಳಿಯ ಹುಡುಗಿಗಾಗಿ ತನ್ನಿರಿ. ನಿಮ್ಮ ರಮ್ಯ ರಹಸ್ಯಗಳನ್ನು ಒಬ್ಬಂಟಿಗಳಾದ ಈಕೆಗೆ ಅರುಹಿರಿ.

## ಜಾಕ್ ಲಂಡನ್ (೧೮೭೬-೧೯೧೬)

ಈತನು ಕೆಲಿಫೋರ್ನಿಯಾದ ಓಕ್‌ಲ್ಯಾಂಡದಲ್ಲಿ ಜನಿಸಿದನು. ಇವನ ಜೀವನ ಇವನ ಪುಸ್ತಕಗಳಿಗಿಂತ ಹೆಚ್ಚು ಅದ್ಭುತ, ಅಲೌಕಿಕ... ಇದು ಅವನಿಗೂ ಅನಿಸಿರಬೇಕು; ಏಕೆಂದರೆ ಆತ್ಮಚರಿತ್ರಾತ್ಮಕ ಸ್ವರೂಪದ ಲೇಖನಗಳನ್ನು ಅವನು ರಚಿಸಿದ್ದಾನೆ. ಚಿಕ್ಕಂದಿನ ಬಡತನದ ಬವಣೆಯಿಂದಲೂ ಮನುಷ್ಯಾವಸ್ಥೆಯ ಆರಂಭಕಾಲದ ಭೀಕರ ಹೆಣಗಾಟಗಳ ಮೂಲಕವೂ ಅವನ ಒಲವು, ವೇದನೆಗಳೆಲ್ಲ ಯಾವಾಗಲೂ ದಲಿತ-ಜೀವಿಗಳ ಪರವಾಗಿಯೇ ಇದ್ದವು. ಪುಸ್ತಕದ ಹಿಂದೆ ಪುಸ್ತಕ ಬರೆದು ಅವನು ದೀನ ದಲಿತರ ಪಕ್ಷವನ್ನು ಕಟ್ಟಿ ಜಯಶಾಲಿಯಾಗಿ ಹೋರಾಡಿದನು.

ನಿಸರ್ಗದಲ್ಲಿಯ ಹಿಂಸ್ರ ಹೋರಾಟಗಳು ಮನುಷ್ಯ ಮನುಷ್ಯರೊಳಗಿನ ಸಂಘರ್ಷಕ್ಕಿಂತ ಎಷ್ಟೋ ಪಾಲು ಕಡಿಮೆಯೆಂದು ಅವನು ನಂಬಿದನು. ಅವನ ಅತ್ಯಂತ ಯಶಸ್ವಿಯಾದ ಪುಸ್ತಕ “ಕಾಡಿನ ಕರೆ” (A Call of the Wild) ಒಂದು ಮಾನವೀ ಸಾಮ್ಯದ ರೂಪಕ ಕಥೆಯಾಗಿದೆ. ಅಲ್ಲಿ ಪಶುಗಳು ವರ್ತಿಸುವಂತೆ ಮನುಷ್ಯರು ನಿಜವಾಗಿಯೂ ವರ್ತಿಸುತ್ತಾರೆ.

ಅವನ ಕೆಲವು ಅತ್ಯುತ್ಕೃಷ್ಟ ಕಿರುಗತೆಗಳಲ್ಲಿ ಮಾನವ ಮತ್ತು ಪ್ರಕೃತಿವಲಯದ ಹೋರಾಟವು ಮನೋಹರವಾಗಿ ಚಿತ್ರಿತವಾಗಿದೆ.

# ವಿಧರ್ಮಿ

ಅವನನ್ನು ನಾನು ಮೊದಲಿಗೆ ಭೆಟ್ಟಿಯಾದದ್ದು ಕಡಲ ನಡುವೆ ಎದ್ದ ಸುಳಿಗಾಳಿಯಲ್ಲಿ. ನಾವಿಬ್ಬರೂ ಒಂದೇ 'ಸ್ಕೂನರ' ಹಡಗದಲ್ಲಿ ಆ ಸುಳಿಗಾಳಿಯೊಳಗಿಂದ ಪಾರಾಗಿ ಬಂದಿದ್ದರೂ ಆ ಹಡಗ ಒಡೆದು ಚೂರುಚೂರಾದ ಮೇಲೆಯೇ ಆತ ನನ್ನ ಕಣ್ಣಿಗೆ ಬಿದ್ದದ್ದು. ಹಡಗಿನಲ್ಲಿದ್ದ ಕನಕಾ ನಾವಿಕರ ಗುಂಪಿನಲ್ಲಿ ಆತನನ್ನೊಮ್ಮೆ ನೋಡಿದ್ದೆ. ಆದರೆ ಆತನನ್ನು ಲಕ್ಷ್ಯವಿಟ್ಟು ನೋಡಿರಲಿಲ್ಲ. ಏಕೆಂದರೆ "ಪೇತಿತ್ ಜೀನ್" ಪ್ರಯಾಣಿಕರಿಂದ ಕಿಕ್ಕಿರಿದಿತ್ತು. ಅದರ ಎಂಟೋ ಹತ್ತೋ ಕನಕಾ ನಾವಿಕರ ಹೊರತಾಗಿ ಬಿಳಿಯ ಕಪ್ತಾನ, ಅವನ ಜತೆಗಾರ, ವಿಪರೀತ ಹೇರಿದ ಸರಕು, ಆರು ಕ್ಯಾಬಿನ್ ಪ್ರಯಾಣಿಕರು, ಇವರಲ್ಲದೆ, ಆ ಹಡಗ ರಂಗಿರೋದಿಂದ ಸುಮಾರು ಎಂಭತ್ತೈದು ಪ್ರಯಾಣಿಕರನ್ನು ತುಂಬಿಕೊಂಡು ಪ್ರಯಾಣ ಹೊರಟಿತ್ತು. ಈ ದೊಡ್ಡ ಜಾತ್ರೆ–ಜಂಗುಳಿಯಲ್ಲಿ ಪೊಮೋಟನ್ನರು, ತಾಹಿತ್ತಿಯವರು, ಗಂಡಸರು, ಹೆಂಗಸರು, ಮಕ್ಕಳು, ಒಬ್ಬೊಬ್ಬರಿಗೆ ಒಂದೊಂದು ಪೆಟ್ಟಿಗೆ, ಅಲ್ಲದೆ ಮಲಗಲು ಚಾಪೆ-ಕಂಬಳಿಗಳು ಮತ್ತು ಅರಿವೆ-ಅಂಚಡಿಗಳ ಗಂಟುಗಳು ಇದ್ದವು.

ಪೊಮೊಟಸ್‌ದಲ್ಲಿ ಆಗಲೇ ಮುತ್ತನ್ನಾಯುವ ಕಾಲ ಮುಗಿದಿತ್ತು. ಎಲ್ಲ ಕೂಲಿಯಾಳುಗಳು ತಾಹಿತ್ತಿಗೆ ಹಿಂದಿರುಗುತ್ತಿದ್ದರು. ಕ್ಯಾಬಿನ್ ಪ್ರಯಾಣಿಕರಾಗಿದ್ದ ನಾವು ಆರು ಮಂದಿ ಮುತ್ತಿನ ಖರೀದಿಗಾರರು. ಇಬ್ಬರು ಅಮೇರಿಕನ್ನರು, ಒಬ್ಬ ಆಚೂನ (ನಾನು ಈವರೆಗೆ ಇಷ್ಟು ಬಿಳಿ ಚೀನಿಯನನ್ನು ಕಂಡದ್ದಿಲ್ಲ!). ಇನ್ನೊಬ್ಬನು ಜರ್ಮನ್ ಮತ್ತೊಬ್ಬ ಪೋಲಿಷ್ ಯಹೂದಿ ಮತ್ತು ಕೊನೆಯವನಾದ ನಾನೂ ಸೇರಿ ಅರ್ಧ ಡಝುನ್ ಕ್ಯಾಬಿನ್ ಪ್ಯಾಸೆಂಜರರು.

ಇದು ಒಳ್ಳೇ ಆದಾಯದ ಸಮಯವಾಗಿತ್ತು. ನಮ್ಮಲ್ಲಿ ಯಾರೂ ದೂರಿಕೊಳ್ಳುವ ಕಾರಣವಿದ್ದಿಲ್ಲ. ಆ ಎಂಭತ್ತೈದು ಪ್ರಯಾಣಿಕರಿಗೂ ಪ್ರಾಪ್ತಿ ಚೆನ್ನಾಗಿಯೇ ಆಗಿತ್ತು. ಎಲ್ಲರೂ

ಪಾಪಿತಿಯಲ್ಲಿ ವಿಹರಿಸುವ ಮತ್ತು ಆರಾಮು ಪಡೆಯುವ ದಿನಗಳನ್ನೇ ಇದಿರುನೋಡುತ್ತಿದ್ದರು.

"ಪೆತಿತ್ ಜೀನೆ" ಮಿತಿಮೀರಿ ಮ್ಹಾಲು ಹೇರಿಕೊಂಡಿತ್ತೆಂಬುದು ನಿಜ. ಅದು ಬರೇ ಎಪ್ಪತ್ತು ಟನ್ನು ಭಾರವಿತ್ತು. ಮತ್ತು ಈಗ ಅದರಲ್ಲಿದ್ದ ಜನಸಂದಣಿಯ ಹತ್ತರ ಒಂದು ಪಾಲು ಹೊರುವ ಚೈತನ್ಯವೂ ಆ ಹಡಗಕ್ಕೆ ಇದ್ದಿಲ್ಲ. ಒಳ ಕೋಷ್ಠವೆಲ್ಲ ಮುತ್ತಿನ ಸಿಂಪು ಮತ್ತು ಕೊಬ್ಬರಿಯಿಂದ ಜಡಿದು ಬಡಿದು ತುಂಬಿತ್ತು. ವ್ಯಾಪಾರದ ಕೊಠಡಿಯು ಕೂಡ ಸಿಂಪುಗಳಿಂದ ತುಂಬಿಹೋಗಿತ್ತು. ನಾವಿಕರು ಹಡಗನ್ನು ಹೇಗೆ ನಡೆಯಿಸಿಕೊಂಡು ಸಾಗಿದ್ದರೆಂಬುದೇ ಒಂದು ಚಮತ್ಕಾರದ ಸಂಗತಿಯಾಗಿತ್ತು. ಡೆಕ್ಕುಗಳ ಮೇಲೆ ನಡೆದಾಡಲು ಅವಕಾಶವೇ ಇದ್ದಿಲ್ಲ. ಅವರು ಸುತ್ತಲಿನ ಕಟಾಂಜನದ ಮೇಲಿಂದ ಆಚೆ ಈಚೆ ಏರಿ ಇಳಿದೇ ಕೆಲಸ ಮಾಡುತ್ತಿದ್ದರು.

ರಾತ್ರಿಯ ಹೊತ್ತು ಡೆಕ್ಕುಗಳ ಮೇಲೆ ಜಮಖಾನೆ ಹಾಸಿ ಮಲಗಿದವರ ಮೇಲಿಂದಲೇ ನಾವಿಕರು ನಡೆದಾಡುತ್ತಿದ್ದರು. ನಾನು ಆಣೆಯಿಟ್ಟು ಹೇಳಬಲ್ಲೆ. ಮತ್ತೆ ಜತೆಗೆ ಹಂದಿಗಳೂ, ಕೋಳಿಗಳೂ, ಗಡ್ಡೆಗೆಣಸುಗಳ ಚೀಲಗಳೂ ಡೆಕ್ಕಿನ ಮೇಲೆಲ್ಲ ಬಿದ್ದಿದ್ದವು. ಇವೂ ಅಲ್ಲದೆ ಶಕ್ಯವಿದ್ದಲ್ಲೆಲ್ಲ ಬಾಳೆಯ ಕೊನೆಗಳೂ, ಸೀಯಾಳದ ಹಿಂಡಿಗೆಗಳೂ ತೋರಣದಂತೆ ತೂಗಿ ಬಿಟ್ಟಿದ್ದುವು. ಎರಡೂ ಬಡಿಗೆ ಹಿಂದು ಮುಂದಿನ ಹಾಯಿಗಳ ನಡುವೆ ಹಗ್ಗಗಳನ್ನು ಎಳೆದು ಬಿಗಿದಿದ್ದು ಒಂದೊಂದು ಹಗ್ಗದಲ್ಲಿಯೂ ಕಡಿಮೆಯೆಂದರೆ ಐವತ್ತು ಗೊನೆಗಳನ್ನು ತೂಗಬಿಟ್ಟಿದ್ದರು.

ಪಯಣ ತುಂಬ ತೊಡಕಿನದಾಗಲಿತ್ತು. ಆಗ್ನೇಯ ಗಾಳಿಯು ಹೊಸತಾಗಿ ಬೀಸಹತ್ತಿದ್ದಾದರೆ, ಎರಡು-ಮೂರು ದಿನಗಳು ಹಿಡಿಯುತ್ತಿದ್ದವು ಈ ಕಡಲು ಪಯಣ ಮುಗಿಯಲಿಕ್ಕೆ ಹಾಗೆ ಮುಗಿಯುವವರೆಗೂ ತೊಡಕು ತಪ್ಪಿದ್ದಲ್ಲ. ಆದರೆ ಗಾಳಿ ಹೊಸತಾಗಿ ಬೀಸುತ್ತಿದ್ದಿಲ್ಲ. ಮೊದಲು ಐದು ಘಂಟೆಗಳ ಕಾಲ ಹಲವು ಬಾರಿ ಚೆನ್ನಾಗಿ

ಬೀಸಿ ತಣ್ಣಗಾಯಿತು. ರಾತ್ರಿಯೂ ಮರುದಿನ ಹಗಲೆಲ್ಲವೂ ಹಾಗೆಯೇ ನಡೆಯಿತು. ಪ್ರಖರವಾದ ಸ್ತಬ್ಧತೆಯುಳ್ಳ ಅಂಥ ಹಗಲ ಕಡೆಗೆ ನೋಡಲು ತಲೆಶೂಲಿ ಬರುತ್ತಿತ್ತು.

ಎರಡನೆಯ ದಿನ ಈಸ್ಟರ್ ದ್ವೀಪದವನೊಬ್ಬ ಮೈಲಿರೋಗದಿಂದ ಸತ್ತ. ಅವನು ಕಡಲ ತಳಕ್ಕೆ ಇಳಿಯುವ ನಿಪುಣರಲ್ಲಿ ಒಬ್ಬನಾಗಿದ್ದನು. ಆದರೆ ಈ ಮೈಲಿ ಬೇನೆ ಹಡಗದಲ್ಲಿ ಬಂದದ್ದು ಹೇಗೆ? ರಂಗಿರೋ ಬಿಟ್ಟಾಗ ಅಲ್ಲಿ ಆ ಬೇನೆ ಇದ್ದಿಲ್ಲ. ಅದು ಹಡಗಿನಲ್ಲಿ ಹೇಗೆ ಬಂತೋ ಊಹಿಸಲಸಾಧ್ಯ ಈ ಬೇನೆಯಿಂದ ಮಡಿದವನೊಬ್ಬ, ಹಾಸಿಗೆ ಹಿಡಿದವರು ಮೂವರು!

ಈ ಪರಿಸ್ಥಿತಿಯಲ್ಲಿ ಏನೂ ಮಾಡುವಂತೆ ಇದ್ದಿಲ್ಲ. ರೋಗಿಗಳನ್ನು ಪ್ರತ್ಯೇಕಿಸಡುವಂತೆಯೂ ಇದ್ದಿಲ್ಲ. ಅವರ ಆರೈಕೆ ಮಾಡುವಂತೆಯೂ ಇದ್ದಿಲ್ಲ. ಡಬ್ಬಿಯಲ್ಲಿ ತುಂಬಿದ ಮೀನುಗಳಂತೆ ನಾವು ತುಂಬಿದ್ದವು ಕೊಳೆತು ಸಾಯುವುದೇ ಹೊರತು ಬೇರೆ ಏನೂ ಮಾಡುವಂತಿದ್ದಿಲ್ಲ. ಆ ರಾತ್ರೆ ಕಪ್ತಾನನ ಅನುಯಾಯಿ, ಮಾಲಿನ ಮೇಲಾಧಿಕಾರಿ, ಪೋಲಂಡದ ಯಹೂದಿ ಮತ್ತು ನಾಲ್ಕು ಮಂದಿ ಸ್ಥಳೀಯ ಜಲಾಂತರ್ಗಾಮಿಗಳು ಒಂದು ದೊಡ್ಡ ದೋಣಿಯಲ್ಲಿ ಕುಳಿತು ಯಾರಿಗೂ ಹೇಳದೆ ಪಲಾಯನ ಮಾಡಿದರು. ಅವರ ಕತೆ ಮತ್ತೆ ಕೇಳಿಬರಲೇ ಇಲ್ಲ. ಮರುದಿನ ಮುಂಜಾನೆ ಕ್ಯಾಪ್ಟನ್ನರು ಹಡಗದಲ್ಲಿ ಉಳಿದ ಇನ್ನೆರಡು ದೋಣಿಗಳನ್ನು ತಾನೇ ನೀರಿಗೆ ಒಗೆದು ಮುಳುಗಿಸಿದನು ಮತ್ತೆ ನಾವು ಇದ್ದಲ್ಲಿಯೇ ಉಳಿದೆವು.

ಆ ದಿನ ಇಬ್ಬರು ತೀರಿಕೊಂಡರು. ಮರುದಿನ ಮೂರು, ಅನಂತರದ ದಿನ ಮೃತ್ಯು ಸಂಖ್ಯೆ ಎಂಟಕ್ಕೆ ಪುಟಿಯಿತು. ಇದನ್ನು ನಾವು ಹೇಗೆ ಸಹಿಸಿಕೊಂಡಿದ್ದೆವೆಂಬುದೇ ಕೌತುಕವಾಗಿತ್ತು. ಸ್ಥಳೀಯ ನಿವಾಸಿಗಳು ಮೂಢವೂ ಗಾಢವೂ ಆದ ಮೂಕ ಭೀತಿಯಿಂದ ಗ್ರಸ್ತರಾಗಿ ಬಿದ್ದಿದ್ದರು. ಕ್ಯಾಪ್ಟನ್ ಔಡಾಸ್‌ನು ಫ್ರಾನ್ಸಿನವನಾಗಿದ್ದನು. ಅವನು ಶಕ್ತಿಗುಂದಿ ಕಂಗಾಲಾಗಿದ್ದನು. ಅವನಿಗೆ ಕೈಕಾಲು ಸೆಟೆದಂತೆ ಆಗುತ್ತಿತ್ತು. ಅವನದು

ಸ್ಥೂಲ ಮಾಂಸಲ ದೇಹ. ಕನಿಷ್ಠ ಇನ್ನೂರು ಪೌಂಡು ತೂಕದ್ದು. ಈಗ ಭಯದಿಂದ ನಡುಗುತ್ತಿರುವ ನೆಣಕೊಬ್ಬಿನ ಗುಡ್ಡವಾಗಿಬಿಟ್ಟಿದ್ದ.

ಜರ್ಮನ್ನನೂ, ಇಬ್ಬರು ಅಮೇರಿಕನ್ನರೂ, ನಾನೂ ಹಡಗದಲ್ಲಿ ಇದ್ದ ಬಿದ್ದ ಎಲ್ಲ ಸ್ಕೊಚ್‌ವ್ಹಿಸ್ಕಿಯನ್ನು ಕೊಂಡುಕೊಂಡವು. ಮತ್ತು ಕುಡಿದು ಮತ್ತರಾಗಿಯೇ ಉಳಿದೆವು, ಈ ಸಿದ್ಧಾಂತ ಮನೋಹರವಾಗಿತ್ತು. ಏನೆಂದರೆ, ನಾವು ಮದ್ಯಾರ್ಕದಲ್ಲಿ ಅದ್ದಿದಂತೆ ಇದ್ದುಬಿಟ್ಟರೆ ನಮ್ಮ ಸಂಪರ್ಕದಲ್ಲಿ ಬಂದ ಪ್ರತಿಯೊಂದು ಮೈಲಿಯ ಕ್ರಿಮಿಯೂ ಸುಟ್ಟು ಬೂದಿಯಾಗಬೇಕು. ಈ ಸಿದ್ಧಾಂತ ಯಶಸ್ವಿಯಾಗಿಯೂ ಆಯಿತು. ಆದರೂ ಒಂದು ಮಾತನ್ನು ನಾನು ಒಪ್ಪಲೇಬೇಕು. ಕ್ಯಾಪ್ಟನ್ ಔಡಾಸ್ ಆಗಲಿ ಆಚೂನ್ ಆಗಲಿ ಆ ಕರಾಳ ಬೇನೆಯ ಹಲ್ಲೆಗೆ ಗುರಿಯಾಗಲೇ ಇಲ್ಲ, ಆ ಫ್ರೆಂಚನು ಕುಡಿಯುತ್ತಲೇ ಇದ್ದಿಲ್ಲ. ಆ ಚೀನಿಯು ದಿನಕ್ಕೆ ಒಂದು ಕುಡಿತೆ ಮಾತ್ರ ತನ್ನ ಕುಡಿತದ ಹದವಿಟ್ಟುಕೊಂಡಿದ್ದ.

ಅಂತೂ ಅದೊಂದು ಸ್ವಾರಸ್ಯದ ಸಮಯ. ಉತ್ತರಾಯಣದಲ್ಲಿದ್ದ ಸೂರ್ಯನು ನೇರವಾಗಿ ನಮ್ಮ ನೆತ್ತಿಗೆ ಉರಿಯುತ್ತಿದ್ದ. ಆಗಾಗ ಕಡಲುಕ್ಕಿಸುವ ಚಿಕ್ಕ ಬಿರುಗಾಳಿಗಳನ್ನು ಬಿಟ್ಟರೆ ಗಾಳಿಯೇ ಇದ್ದಿಲ್ಲ. ಈ ಬಿರುಗಾಳಿಗಳು ಐದು ಮಿನಿಟಿನಿಂದ ಅರ್ಧಗಂಟೆಯವರೆಗೂ ಪ್ರಖರವಾಗಿ ಬೀಸುತ್ತಿದ್ದವು. ಮತ್ತು ಜಡಿಮಳೆಯಲ್ಲಿ ನಮ್ಮನ್ನು ಸಚೇಲವಾಗಿ ಮೀಯಿಸಿಬಿಡುತ್ತಿದ್ದವು. ಗಾಳಿಯ ನಂತರ ಚಂಡಮಾರ್ತಾಂಡನು ಹೊರಬಿದ್ದು ಉರಿಯುತ್ತ ಡೆಕ್ಕುಗಳಿಂದ ಉಗಿಮೋಡಗಳನ್ನು ಹೀರಿಕೊಳ್ಳುತ್ತಿದ್ದ.

ಆ ಉಗಿ ಚೆನ್ನಾಗಿದ್ದಿಲ್ಲ. ಅದು ಸಾವಿನ ಆವಿಯಾಗಿತ್ತು. ಕೋಟ್ಯಾನುಕೋಟಿ ಮೈಲಿಯ ಕ್ರಿಮಿಗಳ ಭಾರವನ್ನು ಹೊತ್ತುಕೊಂಡ ಉಗಿಯದು. ಸತ್ತವರ, ಸಾಯುವವರ ಸುತ್ತಲಿರುವ ಆ ಉಗಿ ಮೇಲಕ್ಕೆ ಏರುವುದನ್ನು ಕಂಡಕೂಡಲೆ ನಾವು ಇನ್ನೊಂದು ಗ್ಲಾಸು ಮದ್ಯ ಕುಡಿದುಬಿಡುತ್ತಿದ್ದೆವು. ವಾಡಿಕೆಯಾಗಿ ಇದರ ನಂತರವೂ ಎರಡು ಮೂರು ಗ್ಲಾಸು ಬಗ್ಗಿಸುತ್ತಿದ್ದೆವು. ಅದೂ ನೀರು ತುಸುವೇ ಸೇರಿಸಿ ಕಟು ಉಗ್ರವಾಗಿಯೇ ಬೆರೆಸಿ! ಇದೂ ಅಲ್ಲದೆ ಪ್ರತಿ ಸಲವೂ ಹೆಣಗಳನ್ನು ಎತ್ತಿ ಕೆಳಗೆ ಶಾರ್ಕ್ ಮೀನುಗಳಿಗೆ ಒಗೆಯುವಾಗ

ಒಂದೆರಡು ಗ್ಲಾಸು ಬೇರೆ ಗಿಟ್ಟಿಸುವ ಕ್ರಮವನ್ನೂ ಇಟ್ಟುಕೊಂಡಿದ್ದೆವು. ಶಾರ್ಕ್ ಮೀನುಗಳು ನಮ್ಮ ಹಡಗದ ಸುತ್ತಲೂ ಗುಂಪಾಗಿ ನೆರೆದಿರುತ್ತಿದ್ದವು.

ಹೀಗೆ ಒಂದು ವಾರ ಕಳೆಯಿತು. ಅನಂತರ ನಮ್ಮ ವ್ಹಿಸ್ಕಿ ಮುಗಿದುಹೋಯಿತು. ಹೋದದ್ದು ಒಳಿತೇ ಆಯಿತು. ಇಲ್ಲವಾದರೆ ನಾನು ಈಗ ಬದುಕಿರುತ್ತಿದ್ದಿಲ್ಲ. ಮುಂದೆ ಒದಗಿದ್ದನ್ನೆಲ್ಲ ನೀಗಿಸಿಕೊಂಡು ಬರಲಿಕ್ಕೆ ಪೂರ್ತಿ ಪ್ರಜ್ಞೆಯುಳ್ಳವನೇ ಬೇಕಿದ್ದ. ಏಕೆಂದರೆ ಕೊನೆಗೂ ಇಬ್ಬರೇ ಪಾರಾಗಿ ಬಂದರು. ಈ ಅಲ್ಪಘಟನೆ ಹೇಳಿದಾಗ ನೀವು ಮೇಲಿನ ಮಾತು ಒಪ್ಪಬಹುದು. ಆ ಪಾರಾದವರಲ್ಲಿ ಇನ್ನೊಬ್ಬರು ಆ ಪಾಮರನಿದ್ದನು. ಆ ಪಾಮರನ ಅಸ್ತಿತ್ವದ ಅರಿವು ನನಗೆ ಆ ಮೊದಲಿಗೆ ಆಗುವಾಗ ಕ್ಯಾಪ್ಟನ್ ಔಡಾಸ್ ಅವನನ್ನು ಹಾಗೆ ಕರೆದದ್ದನ್ನು ನಾನು ಕೇಳಿದೆನು. ಇರಲಿ. ಪ್ರಸ್ತುತಕ್ಕೆ ಮರಳೋಣ.

ಅಂದು ಈ ವಾರದ ಕೊನೆ. ಎಲ್ಲ ವ್ಹಿಸ್ಕಿ ಬರಿದಾಗಿತ್ತು. ಮುತ್ತಿನ ಖರೀದಿಗಾರರೆಲ್ಲ ಪ್ರಜ್ಞೆ ಪಡೆದಿದ್ದರು. ಆಗಿ ನಾನು ವಾಯುಭಾರಮಾಪಕದತ್ತ ನೋಡಿದೆನು. ಅದು ಕ್ಯಾಬಿನ್ನಿಗೆ ಹೋಗುವಲ್ಲಿ ತೂಗುಬಿಟ್ಟಿದ್ದರು. ಪೊಮೊಟಸ್‌ದಲ್ಲಿ ಅದರ ಸರ್ವಸಾಧಾರಣ ಅಂಶಮಾನ ೨೯.೯೦ ಮತ್ತು ೨೯.೮೫ ರಿಂದ ೩೦.೦೫ರ ಒಳಗೆ ಅದು ಸರಿದಾಡುವದೂ ವಾಡಿಕೆಯೇ ಇತ್ತು. ಆದರೆ ನಾನು ಕಂಡಂತೆ ಅದನ್ನು ನೋಡುವದು, ಕೆಳಗೆ ೨೯.೬೨ರ ಅಂಶಕ್ಕೆ ನೋಡುವದು, ಸ್ಕೊಚ್ ವ್ಹಿಸ್ಕಿಯಲ್ಲಿ ಮೈಲಿಯ ಕ್ರಿಮಿಗಳನ್ನು ಇದುವರೆಗೆ ಹೋಮಿಸಿದ ಎಂಥ ಅಮಲೇರಿ ಮೈಮರೆತ ಮುತ್ತಿನ ಸಿಂಪಿ ಖರೀದಿಗಾರನಿಗೂ ಸರ್‍ರನೆ ಮದವಿಳಿಸಿ ಎಚ್ಚರ ತರಿಸಲು ಸಾಕಿತ್ತು!

ಕ್ಯಾಪ್ಟನ್ ಔಡಾಸನ ಲಕ್ಷ್ಯ ನಾನು ಅದರತ್ತ ಸೆಳೆದೆನು. ಕೆಲವು ತಾಸುಗಳಿಂದಲೂ ಅದು ಬೀಗೆ ಇಳಿಯುತ್ತಿದಿಂಬುದನ್ನು ತಾನು ನಿರೀಕ್ಷಿಸುತ್ತಿರುವೆನಾಗಿ ಆತ ತಿಳಿಸಿದ. ಈಗ ಮಾಡುವದು ಸ್ವಲ್ಪವೇ ಉಳಿದಿತ್ತು. ಆ ಸ್ವಲ್ಪವನ್ನೂ ಆತ ಪ್ರಾಪ್ತ ಪರಿಸ್ಥಿತಿಯಲ್ಲಿ ಚೆನ್ನಾಗಿಯೇ ಮಾಡಿದನು. ಹಗುರವಾದ ಹಾಯಿಗಳನ್ನು ಆತ ಇಳಿಸಿದ್ದು ತಗ್ಗಾಗಿ ಕಟ್ಟಿದ್ದು ಪ್ರಾಣರಕ್ಷಕ ಕಣಿಗಳನ್ನು ಪಸರಿಸಿಟ್ಟು ಗಾಳಿಗಾಗಿ ಕಾಯುತ್ತ ಕುಳಿತ.

ಅವನು ತಪ್ಪು ಮಾಡಿದ್ದು ಗಾಳಿ ಬಂದ ಮೇಲೆಯೇ ಹಡಗವನ್ನು ಎಡಬದಿಗೆ ಆತ ಎಳೆಯುವಂತೆ ಕಣ್ಣಿ ಬಿಗಿದನು. ಆದರೆ ಇದು ವಿಷುವವೃತ್ತದ ದಕ್ಷಿಣಕ್ಕೆ ಯೋಗ್ಯವಾದ ಕ್ರಮವಾಗಿತ್ತು. ಅದೂ ಯಾವಾಗ?.... ಮತ್ತು ಮರ್ಮಡ ಪೆಟ್ಟೇ ಇಲ್ಲಿತು. ಹಡಗವು ಸುಳಿಗಾಳಿಯ ಏರಿ ಬರುವ ಆವರ್ತದ ವಾರಿಯಲ್ಲಿ ಇರದಿದ್ದಾಗ ಮಾತ್ರ!

ನಾವು ನೇರವಾಗಿ ಅದರ ದಾರಿಯಲ್ಲಿದ್ದೆವು. ದೃಢವಾಗಿ ಏರುತ್ತಿದ್ದ ಗಾಳಿಯ ರಭಸದಿಂದ ಅಷ್ಟೇ ದೃಢವಾಗಿ ಇಳಿಯುತ್ತಿರುವ ವಾಯುಭಾರದ ಅಂಶಮಾನದಿಂದ ನನಗೆ ಅದು ಪ್ರತ್ಯಕ್ಷವಾಗಿತ್ತು. ಕ್ಯಾಪ್ಟನ್ನನು ಹಡಗವನ್ನು ಮರಳಿಸಿ ಗಾಳಿಯೊಂದಿಗೆ ಸಾಗಬೇಕೆಂದು ನನಗೆ ಅನಿಸಿತ್ತು. ಪಲಾಯನ ದೂರವಲ್ಲ, ವಾಯುಭಾರಮಾನ ಸ್ಥಿರವಾಗುವನಕ. ಆಮೇಲೆ ಮತ್ತೆ ತಿರುಗಿ ಸಾಗಬಹುದಿತ್ತು. ನಾವಿಬ್ಬರೂ ಚರ್ಚಿಸಿದೆವು, ವಾದಿಸಿದೆವು- ವಾದ ಮಾಡಿಮಾಡಿ ಕ್ಯಾಪ್ಟನ್ನನು ಅಪಸ್ಮಾರ ಹಿಡಿದವನಂತಾದನು, ಆದರೂ ಆತ ಒಂದು ಅಂಗುಲವೂ ಕದಲಲಿಲ್ಲ. ಈ ಪ್ರಕರಣದ ತೀರ ಕೆಟ್ಟ ಪರಿಣಾಮವೆಂದರೆ ಉಳಿದ ಸಿಂಪು ಖರೀದಿ ಸಾವುಕಾರರನ್ನು ನನ್ನ ಪಕ್ಷಕ್ಕೆ ಎತ್ತಿ ಓಡಿದುಕೊಳ್ಳಲಾರದೆ ಹೋದೆ. ಯೋಗ್ಯ ಅರ್ಹತೆ ಪಡೆದ ಕ್ಯಾಪ್ಟನ್ನನಿಗಂತ ಕಡಲಿನ ಬಗೆಗೆ ಹೆಚ್ಚು ತಿಳಿಯಲು ನಾನೆಷ್ಟರವನು? ಇದೇ ಅವರ ತಲೆಯಲ್ಲಿಯ ವಿಕಲ್ಪವೆಂದು ನನಗರಿವಾಯಿತು.

ನಿಜವಾಗಿಯೂ ಕಡಲು, ಗಾಳಿಯೊಂದಿಗೆ ಭೀಕರವಾಗಿ ಎದ್ದಿತು. ಮತ್ತು “ಪೆತಿತ್‌ಜೀನೆ” ಪಾರುಮಾಡಿದ ಮೊದಲಿನ ಮೂರು ಕಡಲುಗಳನ್ನು ನಾನು ಎಂದಿಗೂ ಮರೆಯಲಾರೆ. ಹಡಗು ಹೊಡೆಮರಳಿತು. ಮೊದಲನೆಯ ಕಡಲೇ ನೇರವಾದ ಬಿರುಕು ಬಿಡಿಸಿತು. ಪ್ರಾಣರಕ್ಷಕ ಹಗ್ಗಗಳು ತ್ರಾಣವಿದ್ದವರಿಗೆ, ಸ್ವಾಸ್ಥ್ಯವಿದ್ದವರಿಗೆ ಮಾತ್ರ ಪ್ರಯೋಜನ. ಆದರೆ ಹೆಂಗಸರು, ಮಕ್ಕಳು, ಬಾಳೆಹಣ್ಣು ತೆಂಗಿನಕಾಯಿ, ಹಂದಿಗಳು, ಪೆಟ್ಟಿಗೆಗಳು, ರೋಗಿಗಳು, ಸಾಯುತ್ತಿರುವವರು, ಎಲ್ಲರೂ ಒಂದು ದೀನವಾದ ಚೀರಾಟ

ನರಳಾಟದ ಸಮುದಾಯವಾಗಿ ಉಡುಗಿದ ಕಸದಂತೆ ಒಟ್ಟಾಗಿ ಉರುಳುವಾಗ ಸಾಮರ್ಥ್ಯಶಾಲಿಗಳಿಗೂ, ಹಗ್ಗಗಳ ಉಪಯೋಗ ಅಷ್ಟಕ್ಕಷ್ಟೇ!

ಎರಡನೆಯ ಕಡಲು "ಪೆತಿತ್ ಜೀನೆ"ಯ ಮೇಲ್ಭಾಗವನ್ನು ಕಟಾಂಜನಗಳ ಮಟ್ಟಕ್ಕೂ ನೀರಿನಡಿ ಮುಳುಗಿಸಿತು. ಹಡಗದ ಹಿಂಭಾಗ ಕಳಗೆ ಕಡಲಲ್ಲಿ ಕುಸಿಯುತ್ತಿದ್ದಂತೆ ಅದರ ಮುಂಭಾಗ ಮುಗಿಲಿನತ್ತ ತೂರಿ ಹಾರಿತು. ದೈವಗೆಟ್ಟ ಎಲ್ಲ ಜೀವಿಗಳೂ, ಗಂಟುಗುದಡಿಗಳೂ ಧಾರಾಕಾರವಾಗಿ ಹಿಂದಕ್ಕೆ ಉರುಳಿದವು. ಅದೊಂದು ಮನುಷ್ಯ ಪ್ರವಾಹವೇ. ತಲೆ ಮುಂದು, ಕಾಲು ಮುಂದು, ಮಗ್ಗಲು ಮುಂದಾಗಿ ಜಡ ಜೀವಗಳ ಸುರುಳಿಗಳು ಉರುಳೇ ಉರುಳಿದವು. ತಿರುಗುತ್ತ, ಚಡಪಡಿಸುತ್ತ, ವಿಲಿವಿಲಿಗೊಳ್ಳುತ್ತ, ಮೈಮುರಿದುಕೊಳ್ಳುತ್ತ. ಮುದುಡಿ ಮುದ್ದೆಯಾಗುತ್ತ, ಆಗಾಗ ಒಬ್ಬೊಬ್ಬರು ಹಗ್ಗವನ್ನೋ, ಅದನ್ನು ಕಟ್ಟಿಡುವ ಗುಟ್ಟವನ್ನೋ ಗಟ್ಟಿ ಹಿಡಿದುಕೊಳ್ಳುತ್ತಿದ್ದರು. ಆದರೇನು? ಮೇಲಿಂದ ಬೀಳುತ್ತಿರುವ ದೇಹಗಳ ಒತ್ತಡದಿಂದ ಬಿಗಿಯಾದ ಹಿಡಿತವೂ ಸಡಿಲಾಗುತ್ತಿತ್ತು!

ಒಬ್ಬ ಮನುಷ್ಯ-ನಾನು ನೋಡಿದೆ. ತಲೆಕೆಳಕಾಗಿ ಜಾರುತ್ತ ಹೋಗಿ ಹಡಗದ ಬಲಗಡೆಯ ಮೊನೆ ಬಲವಾಗಿ ಅಪಳಿಸಿದ್ದರಿಂದ ತಲೆ ತತ್ತಿಯಂತೆ ಒಡೆಯಿತು! ಬರುವ ಅನಾಹುತವೇನೆಂದು ನನಗೆ ಗೊತ್ತಾಯಿತು. ನಾನು ಕ್ಯಾಬಿನ್ನಿನ ಅಟ್ಟಕ್ಕೆ ಹಾರಿದೆನು. ಮತ್ತು ಮುಖ್ಯ ಹಾಯಿಯೊಳಗೆ ಅಡಗಿದೆನು. ಆಚೂನ್ ಮತ್ತು ಅಮೇರಿಕನ್ ವ್ಯಾಪಾರಿ ನನ್ನ ಹಿಂದೆ ಬರಲು ನೋಡಿದರು. ಆದರೆ ನಾನು ಅವರಿಗೂ ಮುಂಚೆ ಮುಂದೆ ಹಾರಿದೆ. ಅಮೇರಿಕನ್ನನು ಹಡಗದ ಹಿಂಬದಿಯಿಂದ ಜಾರಿ, ಹಾರಿ ಉರುಳಿದ, ಜೊಳ್ಳು, ಉಡುಗಿದಂತೆ ಕಡಲಿಗೆ. ಆಚೂನ್ ಗಾಲಿಯ ಒಂದು ಕೀಲವನ್ನು ಹಿಡಿದು ಅದರ ಹಿಂದೆ ಜೋಲಿಹೊಡದು ಸೇರಿದನು. ಒಬ್ಬ ರಾರೊ ಟೊಂಗಾ ವಹಿನೆ (ಅಂದರೆ ಹೆಂಗಸು) ಹೃಷ್ಟಪುಷ್ಟ ಹರೆಯದವಳು – ಸುಮಾರು ಇನ್ನೂರೈವತ್ತು ಪೌಂಡು ತೂಕದವಳಿರಬೇಕು – ಅವನ ಇದುರಿಗೆ ಬಂದು ಅವನ ಕೊರಳ ಸುತ್ತ ಒಂದು ತೋಳನ್ನು ಚಾಚಿದಳು.

ಇನ್ನೊಂದು ಕೈಯ್ಯಿಂದ ಚುಕ್ಕಾಣಿ ಹಿಡಿದು ನಿಂತ ಕನಕಾ ನಾವಿಕನನು ಹಿಡಿದಳು. ಅದೇ ಕ್ಷಣಕ್ಕೆ ಹಡಗ ಜೋಲಿಹೊಡೆದು ಬಲಬದಿಗೆ ಹೊರಳಿ ತಗ್ಗಿತು.

ಕಳೇಬರಗಳ ನುಗ್ಗು, ತೂರಿಬರುವ ಕಡಲ ತೆರೆ, ಕ್ಯಾಬಿನ್ನು ಮತ್ತು ಕಟಾಂಜನಗಳ ನಡುವಿನಿಂದ ಫಕ್ಕನೆ ತಿರುಗಿ ಬಲಬದಿಗೆ ಹೊಮ್ಮಿಹರಿಯಿತು. ಆ ಮೂವರೂ - ಆ ಹೆಂಗಸು, ಆಚೂನ್, ಮತ್ತು ಆ ಚುಕ್ಕಾಣಿಗ ಎಲ್ಲರೂ ತೂರಿ ತೇಲಿ ತಳಕ್ಕೆ ಹೋದರು. ಆಚೂನ್ ಕಟಾಂಜನದ ಮೇಲಿಂದ ಒಗೆದು ಕಡಲಾಳಕ್ಕೆ ಇಳಿಯುವ ಮೊದಲು ಒಬ್ಬ ದಾರ್ಶನಿಕ ವೈರಾಗ್ಯ ವೃತ್ತಿಯಿಂದ ನನ್ನ ಕಡೆಗೆ ತೀಕ್ಷ್ಣ ಕಣ್ಣು ಹೊರಳಿಸಿದನೆಂದು ನಾನು ಆಣೆ ಹೊತ್ತು ಹೇಳುತ್ತೇನೆ.

ಮೂರನೆಯ ಕಡಲು-ಮೂರೂ ಕಡಲುಗಳಲ್ಲಿ ಅದು ಅತಿ ದೊಡ್ಡದಿತ್ತು. ಅಷ್ಟೊಂದು ದೊಡ್ಡ ನಷ್ಟವುಂಟುಮಾಡಲಿಲ್ಲ. ಅದು ಏರಿಬರುವಷ್ಟರಲ್ಲಿ ಬಹುಶಃ ಪ್ರತಿಯೊಬ್ಬನೂ ಹಗ್ಗಗಳ ನಡುವೆ ಸೇರಿಕೊಂಡಿದ್ದನು. ಡೆಕ್ಕಿನ ಮೇಲೆ ಹತ್ತೆಂಟು ಅರೆಮುಳುಗಿದ, ಅರೆ ಜಜ್ಜಿಬಿದ್ದ ದೈವಗೇಡಿಗಳು ಹೊರಳಾಡುತ್ತಿದ್ದರು. ಇಲ್ಲವೆ ಸುರಕ್ಷಿತ ಸ್ಥಳಕ್ಕೆ ಹೊಟ್ಟೆಹೊಸೆದು ಹಾಯಲು ಹೆಣಗುತ್ತಿದ್ದರು. ಅವರೂ ಕಡಲಿಗೆ ಉರುಳಿಹೋದರು. ಅವರಂತೆ ಹಡಗದ ಮೇಲೆ ಉಳಿದ ಮುತ್ತಿನ ಖರೀದಿಗಾರರೂ ನಾನೂ ಕೂಡಿ ಹೆಣಗಿ ಸುಮಾರು ಐವತ್ತು ಹೆಂಗಸರನ್ನು ಕ್ಯಾಬಿನ್ನಿನಲ್ಲಿ ತುಂಬಿ ಹಲಿಗೆಗಳನ್ನು ಹತ್ತಿಕ್ಕಿ ಮುಚ್ಚಿಬಿಟ್ಟೆವು. ಆದರೆ ಈ ನಮ್ಮ ಮುಂಜಾಗ್ರತೆ ಅವರಿಗೆ ಕೊನೆಗೂ ಯಾವ ಒಳಿತನ್ನೂ ಮಾಡಲಿಲ್ಲ!

ಗಾಳಿ? ನನ್ನ ಅನುಭವದಲ್ಲಿಯೇ ಅಂದು ಬೀಸಿದಂತೆ ಎಂದೂ ಬೀಸಿಲ್ಲವೆಂದು ನಾನು ಖಂಡಿತ ಹೇಳಬಲ್ಲೆ. ಅದನ್ನು ಬಣ್ಣಿಸುವದು ಶಕ್ಯವೇ ಇಲ್ಲ. ಒಂದು ನಿಕಟ ದುಃಸ್ವಪ್ನವನ್ನು ವರ್ಣಿಸುವದೆಂತು? ಆ ಗಾಳಿಯ ಗತಿಯೂ ಅದೇ ರೀತಿ ಇತ್ತು. ಅದು ನಮ್ಮ ಮೈಮೇಲಿನ ಬಟ್ಟೆಗಳನ್ನು ಹರಿದೊಗೆಯಿತು. ಹರಿದೊಗೆಯಿತೆಂದರೆ ಅಕ್ಷರಶಃ ಹರಿದು ಒಗೆಯಿತು. ಅದನ್ನು ನೀವು ನಂಬಬೇಕೆಂದು ನಾನು ಹೇಳುವದಿಲ್ಲ.

ನನಗೆ ತೋರಿದ್ದು, ಅನಿಸಿದ್ದು ಮಾತ್ರ ನಾನು ಹೇಳುತ್ತಿದ್ದೇನೆ. ಅದನ್ನು ನಾನೇ ನಂಬದಿದ್ದ ಸಮಯಗಳೂ ಮುಂದೆ ಬಂದಿವೆ. ನಾನು ಆ ಅನುಭವದೊಳಗಿಂದ ಹಾದು ಹೋದೆ. ಅಷ್ಟೇ ಸಾಕು, ಆ ಗಾಳಿಯನ್ನು ಇದುರಿಸಿ ಬದುಕಿ ಉಳಿಯುವದು ಶಕ್ಯವಿದ್ದಿಲ್ಲ. ಅದೊಂದು ರಾಕ್ಷಸ ಘಟನೆ. ಅದರ ರಕ್ಕಸತನದ ಪರಾಕಾಷ್ಠೆ ಅಂದರೆ ಅದರ ರಭಸ ಬೆಳೆಯುತ್ತ, ಇನ್ನೂ ಬೆಳೆಯುತ್ತ ಹೋಯಿತು.

ಲೆಕ್ಕವಿಲ್ಲದಷ್ಟು ಲಕ್ಷಗಟ್ಟಲೆ ಟನ್ನು ಉಸುಕನ್ನು ಕಲಿಸಿರಿ. ತಾಸಿಗೆ ತೊಂಭತ್ತು, ನೂರು, ನೂರಾಇಪತ್ತು ಎಷ್ಟೇ ಸಂಖ್ಯೆಯ ಮೈಲುಗಳ ವೇಗಕ್ಕೆ ಉಸುಕು ನುಗ್ಗಿ ಹೋಗುತ್ತದೆಂದೂ ಕಲ್ಪಿಸಿರಿ. ಇನ್ನೂ ಬಾರದ ವೇಗದ ಉಸುಕು ತನ್ನ ಎಲ್ಲ ಒಜ್ಜೆ, ಒರಟು ಇಟ್ಟುಕೊಂಡು ಕಣ್ಣಿಗೆ ಕಾಣದೆ, ಮುಟ್ಟಲು ಸಿಗದೆ, ಬೀಸುತ್ತಿದೆಯೆಂದೂ ಕಲ್ಪಿಸಿರಿ. ಇದೆಲ್ಲ ಕಲ್ಪಿಸಿಕೊಂಡರೆ ಆ ಗಾಳಿ ಹೇಗಿತ್ತೆಂದು ನಿಮಗೆ ಒಂದು ಅಸ್ಪಷ್ಟ ಊಹೆ ಆಗಬಹುದು.

ಅಥವಾ ಉಸುಕು ಉಚಿತವಾದ ಉಪಮೆ ಅಲ್ಲವೇನೋ. ಅದು ಕೆಸರೆಂದು ಭಾವಿಸಿರಿ. ಅದೃಶ್ಯ ಅಸ್ಪೃಶ್ಯ ಆದರೆ ಭಾರ ಭೀಕರ ಕೆಸರು. ಛೇ, ಅದು ಕೆಸರಿಗೂ ಮೀರಿದ ವಸ್ತು. ಹವೆಯ ಪ್ರತಿ ಕಣವೂ ಒಂದು ಕೆಸರ ರಾಶಿಯೆಂದು ಊಹಿಸಿರಿ. ಅಂಥ ಅಗಣಿತ ರಾಶಿಗಳ ಆಘಾತವನ್ನು ಊಹಿಸಿಕೊಳ್ಳಿರಿ. ಛೇ, ಅಲ್ಲ, ಅದು ನನ್ನನ್ನು ಮೀರಿದ ಶಕ್ತಿ. ಬಾಳಿನ ಸಾಮಾನ್ಯ ಅವಸ್ಥೆಗಳನ್ನು ಬಣ್ಣಿಸಲು ಭಾಷೆ ಸಾಕಷ್ಟು ಸಾಧನವಾಗಬಹುದು. ಆದರೆ ಆ ಗಾಳಿಯ ಪ್ರಚಂಡ ಬೀಸುವಿಕೆಯನ್ನು ಬಣ್ಣಿಸಲು ಭಾಷೆಗೂ ಅಸಾಧ್ಯ! ಅದನ್ನು ಬಣ್ಣಿಸಬಾರದೆಂದು ನನ್ನ ಮೂಲ ಉದ್ದೇಶಕ್ಕೆ ನಾನು ಅಂಟಿಕೊಂಡಿದ್ದರೇನೇ ಲೇಸಿತ್ತು ಎಂದೆನಿಸುತ್ತದೆ.

ಇಷ್ಟು ಮಾತ್ರ ನಾನು ಹೇಳಬಲ್ಲೆ. ಮೊದಲು ಮೇಲಕ್ಕೆ ಏರುತ್ತಿದ್ದ ಕಡಲು ಆ ಗಾಳಿಯಿಂದ ಮಟ್ಟಿ ತಳ್ಳಲ್ಪಟ್ಟಿತು. ಇನ್ನೂ ಹೆಚ್ಚೆಂದರೆ ಇಡಿಯ ಸಾಗರವು ಆ ಸುಳಿಗಾಳಿಯ ಕಣ್ಣಿನಲ್ಲಿ ಒಮ್ಮೆಲೇ ಮೇಲಕ್ಕೆ ಹೀರಿಕೊಂಡಂತೆ ಅನಿಸಿತು. ಮತ್ತು ವಾಯುವಿದ್ದ ಅವಕಾಶವೆಲ್ಲ ವೇಗದಿಂದ ವ್ಯಾಪ್ತಿಸುತ್ತಿರುವಂರೆ ಅನಿಸಿತು.

ನಮ್ಮ ಹಾಯಿಯ 'ಕ್ಯಾನ್‌ವಾಸ್' ಈ ಮೊದಲೇ ಎಂದೋ ಹರಿದು ಹಿಂಜಿ ಹೋಗಿತ್ತು. ಆದರೆ ಕ್ಯಾಪ್ಟನ್ ಔಡಾಸನು "ಪೆತಿತ್ ಜೀನೆ"ಯ ಮೇಲೆ ಒಂದು ವಸ್ತುವನ್ನು ಇಟ್ಟುಕೊಂಡಿದ್ದನು. ದಕ್ಷಿಣ ಸಮುದ್ರಗಳಲ್ಲಿ ಅಲೆದಾಡುವ ಹಡಗಗಳಲ್ಲಿ ಅದನ್ನು ನಾನು ಎಂದೂ ನೋಡಿದ್ದಿಲ್ಲ. ಆ ವಸ್ತುವೆಂದರೆ ಕಡಲ-ಲಂಗರ. ಅದೊಂದು ಶಂಖಾಕೃತಿಯ ಕ್ಯಾನ್ವಾಸ್ ಚೀಲ. ಅದರ ಬಾಯಿಯನ್ನು ಒಂದು ಕಬ್ಬಿಣದ ಬಳೆಯಿಂದ ತೆರೆದು ಇಡಲಾಗಿತ್ತು. ಅದೊಂದು ಗಾಳಿಪಟದಂತೆ ನಿಯಂತ್ರಿರಿಸಲಾಗಿತ್ತು. ಗಾಳಿಪಟ ಹವೆಯನ್ನು ಕಚ್ಚಿ-ನುಗ್ಗುವಂತೆ ಇದು ನೀರನ್ನು ಕಚ್ಚಿ ಇಳಿಯುತ್ತಿತ್ತು. ಆದರೆ ಭೇದವಿಷ್ಟೇ, ಕಡಲ- ಲಂಗರ ಕಡಲ ನಡುವೆ ಆಳಕ್ಕೆ ನೇರವಾಗಿ ಇಳಿದು ನಿಲ್ಲುತ್ತಿತ್ತು. ಒಂದು ಉದ್ದ ಹಗ್ಗ ಅದನ್ನು ಹಡಗಳಕ್ಕೆ ಕಟ್ಟಿಸುತ್ತಿತ್ತು. ಇದರ ಮೂಲಕ "ಪೆತಿತ್‌ಜೀನೆ" ಗಾಳಿಗೆ ಮತ್ತು ಕಡಲಿಗೆ ಮಗ್ಗಲು ಕೊಡುತ್ತ ತೆರೆಗಳ ಸವಾರಿ ನಡೆಯಿಸಿತ್ತು.

ಬಿರುಗಾಳಿಯ ದಾರಿಯಲ್ಲಿ ನಾವು ಇದ್ದಿಲ್ಲವಾದರೆ ಪರಿಸ್ಥಿತಿಯು ಅನುಕೂಲವಾಗಿಬಿಡುತ್ತಿತ್ತು. ಗಾಳಿ ನಮ್ಮ ಹಾಯಿಯ ಹಾಳೆಗಳನ್ನೋ ಹರಿದು ತೆಗೆಯುತ್ತಿತ್ತು, ನಮ್ಮ ಹಾಯಿಯ ಕಂಬಗಳನ್ನು ಕಿತ್ತುಹಾಕುತ್ತಿತ್ತು. ನಮ್ಮ ಮುಂದೋಟವನ್ನು ಹುಚ್ಚಾಪಟ್ಟೆ ಸೋಡತಿಯಾಗಿ ಮಾಡಿತ್ತು. ಆದರೂ ನಾವು ಹೇಗೂ ಚೆನ್ನಾಗಿ ಪಾರಾಗಿ ಬರಬಹುದಿತ್ತು-ಬಿರುಗಾಳಿಯ ನಡುಮಟ್ಟದ ನುಗ್ಗಿಬರುವ ದಾರಿಯಲ್ಲಿಯೇ ನಾವು ಇದ್ದಿಲ್ಲವಾದರೆ ನಮ್ಮ ಹಣೇಬರೆಹ ನಿರ್ಣಯಿಸಿದ್ದು ಇದೇ. ನಾನು ತಲೆ ತಿರುಗಿದ, ಜಡಕೊರಡಾದ, ನರನಾಡಿ ಸೆಟೆದುಹೋದ ಕುಗ್ಗಿದ ಅವಸ್ಥೆಯಲ್ಲಿ ಬಿದ್ದಿದ್ದೆ. ಆ ಗಾಳಿಯನ್ನು ತಾಳಲಾರದೆ ಕೈಕಾಲು ಬಿಟ್ಟು ಸಾಯುವದೊಂದೇ ಬಗೆಯೆಂದು ನಾನು ತಿಳಿದಿದ್ದೆ. ಆ ಸುಂಟರಗಾಳಿಯು ನಮಗೆ ಬಡಿದಾಗ ಆ ಬಡಿತವಾದರೂ ಏನು? ಕೇವಲ ನಿಶ್ಚಲ ಸ್ತಬ್ಧತೆ. ಎಲ್ಲವೂ ಸ್ಥಿರಶಾಂತ ಅಲ್ಲಿ ಗಾಳಿಯ ಉಸಿರು ಕೂಡ ಇದ್ದಿಲ್ಲ, ಎದ್ದಿಲ್ಲ. ಅದರ ಪರಿಣಾಮ ಓಕರಿಕೆ ತರುವಂತಹದಿತ್ತು.

ನಾವು ಒಂದು ಸಂಗತಿ ನೆನಪಿಡಬೇಕು. ನಾವು ತಾಸುಗಟ್ಟಲೆ ಪ್ರಚಂಡ ಹಾಗೂ ಭಯಂಕರ ಶಾರೀರಿಕ ಬಿಗುವಿನ ಕಾವು-ನೋವುಗಳಲ್ಲ ನರಳುತ್ತಿದ್ದೆವು. ಆ ಗಾಳಿಯ ಒತ್ತಡವನ್ನು ತಾಳುವುದರಲ್ಲಿ. ಮತ್ತು ಒಮ್ಮೆಲೆ ಆ ಒತ್ತಡ ದೂರವಾಯಿತು. ನಾನು ಉಬ್ಬಿ ಒಡೆಯುವೆನೋ ಎಂಬಂತೆ ಅನಿಸಿತು. ನನ್ನ ಅಂಗಾಂಗಗಳೆಲ್ಲ ಎಲ್ಲ ದಿಕ್ಕಿಗೆ ಚೆದರಿ ಹಾರುವವೇ ಎಂದೆನಿಸಿತು. ನನ್ನ ದೇಹದ ಪ್ರತಿಯೊಂದು ಪರಮಾಣುವೂ ಇನ್ನೊಂದು ಪರಮಾಣುವನ್ನು ದೂಡಿ ನೂಕಿ ಹೊರಗೆ ತಡೆಯದ ಒತ್ತಡದಿಂದ ನುಗ್ಗಿ ಬಯಲಿಗೆ ಬರುವದೇ ಎಂದೆನಿಸಿತು. ಆದರೆ ಇವೆಲ್ಲ ಅನಿಸಿಕ ಒಂದು ಕ್ಷಣ ತಾಳಿತು. ಒಡನೆಯೇ ಸರ್ವನಾಶವೂ ನಮ್ಮನ್ನು ಮುತ್ತಿತು.

ಗಾಳಿ ಮತ್ತು ಒತ್ತಡದ ಅಭಾವದ ಮೂಲಕ ಕಡಲು ಧಿಗ್ಗನೆ ಎದ್ದಿತು. ಅದು ನೆಗೆಯಿತು, ಜಿಗಿಯಿತು, ನೇರ ಮೋಡಗಳಿಗೆ ಹಾರಿತು. ಖಗೋಲದ ಪ್ರತಿ ನಿಟ್ಟಿನಿಂದಲೂ ಆ ಊಹೆಗೂ ನಿಲುಕದ ವೇಗದ ಗಾಳಿಯು ಸ್ವಬ್ಧವಾದ ಕೇಂದ್ರದ ಕಡೆಗೆ ಧಾವಿಸಿ ಬೀಸುತ್ತಿತ್ತು. ಇದರ ಪರಿಣಾಮವೆಂದರೆ ಕಡಲು ದಿಕ್ಕುದಿಕ್ಕಿನಿಂದ ಎದ್ದು ಹೊಡೆಮರಳಿ ನುಗ್ಗಿತು. ಅದನ್ನು ತಡೆಯಲು ಗಾಳಿ ಇದ್ದಿಲ್ಲ. ನೀರಿನ ಬಾಲ್ಡಿಯ ಬುಡದಿಂದ ಮೇಲಕ್ಕೆ ಪುಟಿದೆದ್ದು ಬರುವ ಚೆಂಡುಗಳಂತೆ ಕಡಲು ಕುಣಿಯಹತ್ತಿತು. ಅದಕ್ಕೆ ಒಂದು ಕ್ರಮವಿಲ್ಲ, ಭದತೆ ಇಲ್ಲ. ಆ ತೆರೆಗಳು ಹುಚ್ಚೆದ್ದು ಕೆರಳಿದ ಪಿಶಾಚಿಗಳಂತ ಏರಿಬಂದವು. ಕಡಿಮಯೆಂದರೆ ಎಂಭತ್ತು ಅಡಿ ಎತ್ತರ. ಅವು ತೆರೆಗಳೇ ಅಲ್ಲ. ಮನುಷ್ಯ ಕಂಡ ಯಾವ ತೆರೆಯನ್ನೂ ಅವು ಹೋಲುತ್ತಿದ್ದಿಲ್ಲ. ಅವು ಬರೇ ಅಪ್ಪಳಿಸುವ ಅಲ್ಲೋಲ-ಕಲ್ಲೋಲವಾಗಿ ಅಪ್ಪಳಿಸುವ ಹೊಯ್ಸೆಳಕು, ಪ್ರಚಂಡ ಹೊಯ್ಸೆಳಕು,–ಅಷ್ಟೇ. ಎಂಭತ್ತು ಅಡಿ ಎತ್ತರಕ್ಕೆ ಹಾರಿ ಹೊಯ್ಯುವ ಸೆಳಕು. ಅವು ನಮ್ಮ ಹಾಯಿಕಂಭಗಳ ಮೇಲಿಂದ ಹಾದು ಹೊರಳಿದವು-ಮುಕ್ಕಳಿಸಿ ಒಗೆದಂತೆ -ಸ್ಫೋಟಕವಾಗಿ ಚಿಮ್ಮಿದಂತೆ- ಕಳ್ಳುಕುಡಿದು ಹೂಯ್ದಾಡಿದಂತೆ. ಎಲ್ಲೂ ಹೇಗೂ ಹೊಮ್ಮಿ ಹೊಡೆಮರಳಿ ಹಬ್ಬುತ್ತಿದ್ದವು. ಒಂದನ್ನೊಂದು ನೂಕುತ್ತಿದ್ದವು. ಅಪ್ಪುತ್ತಿದ್ದವು, ಅಪ್ಪಳಿಸುತ್ತಿದ್ದವು. ಒಟ್ಟಾಗಿ ನುಗ್ಗಿ ಬಂದು ಕೂಡಿಯೇ ಕುಸಿಯುತ್ತಿದ್ದವು. ಅಥವಾ ಸಾವಿರ ತಡಸಲುಗಳಾಗಿ ಸಿಡಿದು ಬೀಳುತ್ತಿದ್ದವು.

ಆ ಸುಂಟರಗಾಳಿಯ ಕೇಂದ್ರವಾದ ಸಾಗರವನ್ನು ಯಾರೂ ಕನಸು-ಮನಸಿನಲ್ಲೂ ಕಂಡಿರಲಿಕ್ಕಿಲ್ಲ. ಅದೊಂದು ಹುಚ್ಚೆದ್ದ ಕಡಲಿನ ನರಕದ ಕುಂಡ!

ಮತ್ತೆ "ಪೆತಿತ್ ಜೀನೆ"? ಅದಕ್ಕೆ ಏನಾಯಿತೋ ನನಗೆ ಗೊತ್ತಿಲ್ಲ. ಆ ಪಾಮರ ಕಾಫರನಿಗೂ ಗೊತ್ತಿದ್ದಿಲ್ಲ. ಆ ಹಡಗ ಅಕ್ಷರಶಃ ಹರಿದು ಚೂರಾಯಿತು. ಟರ್ರನೆ ಬಿರಿದು ಬಯಲಾಯಿತು. ಒದೆದು ಬಡಿದು ಮುದ್ದೆಯಾಯಿತು. ಪುಡಿ ಪುಡಿ ಉರುವಲದ ಚೆಕ್ಕೆ ಚೂರಾಯಿತು. ನನಗೆ ಎಚ್ಚರ ಬಂದಾಗ ನಾನು ನೀರಿನಲ್ಲಿದ್ದೆ. ನನಗೆ ತಿಳಿಯುವ ಮುನ್ನವೇ ಈಸುತ್ತಿದ್ದೆ. ಮೂರರಲ್ಲಿ ಎರಡು ಪಾಲು ನಾನು ನೀರಿನಲ್ಲಿದ್ದೆ. ಆದರೂ ಈಜುತ್ತಿದ್ದ. ನಾನು. ಅಲ್ಲಿ`ಹೇಗೆ ತಲ್ಪದನೋ ನೆನಪಾಗಲಿಲ್ಲ. ನನ್ನ ಪ್ರಜ್ಞೆ ತಪ್ಪತ್ತಿರುವಾಗಲೇ "ಪತಿತ್ ಜೀನೆ" ನುಚ್ಚುನೂರಾಗಿ ಸಿಡಿದದ್ದು ನಾನು ನೋಡಿದ ನೆನಪು. ಆದರೆ ಈಗ ನಾನು ನೀರಿನಲ್ಲಿದ್ದೆ. ಆದಷ್ಟು ಆಗುವಷ್ಟು ಕೈಕಾಲು ಬಡಿಯುವದೊಂದೇ ನನಗೆ ಈಗ ಉಳಿದ ಉತ್ತಮ ಉಪಾಯ. ಆದರೆ ಈ ಉತ್ತಮ ಉಪಾಯದಲ್ಲಿ ಯಾವ ಆಸೆಯೂ ಉಳಿದಂತೆ ಇದ್ದಿಲ್ಲ. ಗಾಳಿ ಮತ್ತೆ ಬೀಸತೊಡಗಿತ್ತು. ಕಡಲು ಎಷ್ಟೋ ಸಣ್ಣದಾಗಿತ್ತು, ನಿಯಮಿತವಾಗಿತ್ತು. ಸುಂಟರಗಾಳಿಯ ಕೇಂದ್ರದೊಳಗಿಂದ ನಾನು ದಾಟಿ ಬಂದಿದ್ದೆನೆಂಬುದು ಗೊತ್ತಾಯಿತು. ಸುತ್ತಲೂ ಸುದೈವದಿಂದ ಶಾರ್ಕ್ ಮೀನುಗಳಿದ್ದಿಲ್ಲ. ನಮ್ಮ ಆ ಮೃತ್ಯು ನೌಕೆಯನ್ನು ಮುತ್ತಿಕೊಂಡು ಸತ್ತವರನ್ನು ತಿಂದು ಬದುಕುತಿದ್ದ ಆ ಕಾಳರಕ್ಕಸರ ಹಿಂಡುಗಳು ಸುಂಟರಗಾಳಿಗೆ ಚೆದರಿ ದಿಕ್ಕಾಪಾಲಾಗಿದ್ದವು.

"ಪೆತಿತ್ ಜೀನೆ" ಒಡೆದು ಪುಡಿಪುಡಿಯಾದಾಗ ಮಧ್ಯಾಹ್ನವಾಗಿರಬೇಕು. ಅನಂತರ ನಾನು ಅದರ ತಳಕೋಣೆಯ ಹಲಗೆಯೊಂದನ್ನು ಎತ್ತಿಕೊಂಡಾಗ ಎಷ್ಟೋ ತಾಸುಗಳು ಕಳೆದಿರಬೇಕು. ಆಗ ದಟ್ಟವಾದ ಜಡಿಮಳೆ ಸುರಿಯುತ್ತಿತ್ತು. ಮತ್ತು ನನ್ನನ್ನೂ ಆ ಹಲಗೆಯ ಮುಚ್ಚಳವನ್ನೂ ಒಟ್ಟಿಗೆ ಒಗೆದದ್ದು ಬರೇ ಯೋಗಾಯೋಗ. ಅದರ ಹಗ್ಗದ ಹಿಡಿಕೆಯಿಂದ ಒಂದು ಗಿಡ್ಡ ಹುರಿಯು ತೇಲುತ್ತಿತ್ತು. ಆಗಲೆ ನನಗೆ ಗೊತ್ತಾಯಿತು. ಒಂದು ದಿನದ ಮಟ್ಟಿಗೆ, ಶಾರ್ಕ ಮೀನುಗಳು ಮರಳದಿದ್ದರೆ ನಾನು ಈ ಹಲಗೆಯ

ಮೇಲೆ ಸುರಕ್ಷಿತನೆಂದು. ಮೂರು ಘಂಟೆಯ ನಂತರವೋ ಅದಕ್ಕೂ ನಂತರವೋ ಆ ಮುಚ್ಚಳದ ಹಲಗೆಯನ್ನು ಹಿಡಕೊಂಡು ಕಣ್ಣುಮುಚ್ಚಿಕೊಂಡು, ನನ್ನ ಜೀವವೆಲ್ಲ ಸಾಕಷ್ಟು ಹವೆ ಉಸಿರಾಡಿಸಿಕೊಳ್ಳುವದರಲ್ಲಿ ಏಕಾಗ್ರತೆಯಿಂದ ತೊಡಗಿಸಿದೆನು. ಜತೆಗೆ, ನನ್ನನ್ನು ಮುಳುಗಿಸುವಷ್ಟು ನೀರೂ ಹೊಟ್ಟೆಯೊಳಗೆ ಹೋಗದಂತೆಯೂ ಪೇಚಾಡುತ್ತಿದ್ದೆನು. ಅದೇ ಸಮಯ ನಾನು ಮಂದಿಯ ಧ್ವನಿಗಳನ್ನು ಕೇಳಿದಂತೆ ಅನಿಸಿತು. ಮಳೆ ನಿಂತಿತ್ತು. ಕಡಲೂ, ಗಾಳಿಯೂ ಆಶ್ಚರ್ಯಕರವಾಗಿ ಶಾಂತವಾಗುತ್ತಿದ್ದವು. ಆಗ ನನ್ನಿಂದ ಇಪ್ಪತ್ತು ಅಡಿ ದೂರ ಇನ್ನೊಂದು ಕದದ ಹಲಗೆಯ ಮೇಲೆ ಕ್ಯಾಪ್ಟನ್ ಔಡಾಸ್ ಮತ್ತು ಆ ಪಾಮರ ಕಾಫಿರ ಇಬ್ಬರೂ ಇದ್ದರು. ಅವರಿಬ್ಬರೂ ಆ ಹಲಗೆಯನ್ನು ವಶಪಡಿಸಿಕೊಳ್ಳುವುದಕ್ಕಾಗಿ ಕಾದಾಡುತ್ತಿದ್ದರು. ಆ ಫ್ರೆಂಚ್ ಕ್ಯಾಪ್ಟನ್ನನಂತೂ ಕಾದಾಡುತ್ತಿದ್ದುದು ಖಂಡಿತ. “ಪಾಪಿ! ಸತ್ತವನೆ!” ಆತ ಕೂಗಿದ್ದು ಕೇಳಿದೆ. ಜತೆಗೇ ಆತ ಆ ಕನಕಾ ಆಸಾಮಿಯನ್ನು ಒದೆದದ್ದೂ ಕಂಡೆ. ಕ್ಯಾಪ್ಟನ್ ಔಡಾಸ್‌ನ ಮೈಮೇಲೆ ಕಾಲಬೂಟುಗಳಲ್ಲದೆ ಯಾವ ಬಟ್ಟೆಯೂ ಇದ್ದಿಲ್ಲ. ಆ ಬೂಟುಗಳೂ ಭಾರಿ ಮಾದರಿಯವು. ಆ ಒದೆತ ತೀರ ಕ್ರೂರವಾಗಿತ್ತು. ಅದು ಆ ಪಾಮರನ ಮೋರೆಯ ಮೇಲೆ ಬಾಯಿ, ಗಡ್ಡಗಳ ನಡುವೆ ನೀಟಾಗಿ ಬಿದ್ದಿತು. ಅದರ ಪೆಟ್ಟಿಗೆ ಆತ ಅರೆಮೂರ್ಛಿತನಾದ. ಆತ ತಿರುಗಿ ಹೊಡೆಯುವನೆಂದು ನಾನು ಇದಿರುನೋಡುತ್ತಿದ್ದೆ. ಆದರೆ ಆ ಬಡಪಾಯಿ ಹತಾಶನಾಗಿ ಹತ್ತು ಅಡಿ ದೂರ ಈಸಾಡುವದರಲ್ಲಿಯೇ ಸಮಾಧಾನಪಟ್ಟುಕೊಂಡ! ಕಡಲಿನ ಹೊಯ್ದಾಟ ಆತನನ್ನು ಆ ಫ್ರೆಂಚ್ ಕಪ್ತಾನನ ಹತ್ತಿರಕ್ಕೆ ಒಗೆದಾಗಲೆಲ್ಲ ಆ ಫ್ರೆಂಚನು ಕೈಯಿಂದ ಹಲಗೆಗೆ ಜೋತುಬಿದ್ದು ಎರಡೂ ಕಾಲುಗಳಿಂದ ಆತನನ್ನು ಒದೆಯುತ್ತಿದ್ದ. ಇದೂ ಅಲ್ಲದೆ ಒಂದೊಂದು ಒದೆತಕ್ಕೂ ಆ ಕನಕಾ ನಾವಿಕನನ್ನು ಕಪ್ಪು ಕಾಫಿರನೆಂದೂ, ಪಾಪಿ ಪಾಮರನೆಂದೂ ಬಯ್ಯುತ್ತಿದ್ದ.

ನಾನು ತಡೆಯದಾದೆ. “ಎರಡು ತಾಸು ಖರ್ಚಾದರೂ ಸರಿಯೆ, ನಾನು ಅಲ್ಲಿಗೆ ಬಂದು ನಿನ್ನನ್ನು ಮುಳುಗಿಸಿಬಿಡುತ್ತೇನೆ- ಏ ಬಿಳಿಯ ಕುನ್ನಿ” ನಾನು ಗರ್ಜಿಸಿದೆ.

ನಾನು ಇಷ್ಟರಲ್ಲೇ ಅಲ್ಲಿಗೆ ಹೋಗದಿದ್ದುದಕ್ಕೆ ಕಾರಣ, ನಾನು ತೀರ ಸೋತುಹೋಗಿದ್ದೆ. ಅಲ್ಲಿಗೆ ಮತ್ತೆ ಈಸಾಡಲು ಪ್ರಯತ್ನ ಮಾಡುವ ವಿಚಾರವೇ ಓಕರಿಕೆ ತರುವಂತಹದಿತ್ತು. ಆದ್ದರಿಂದ ಆ ಕನಕಾ ನಾವಿಕನನ್ನು ಬಳಿಗೆ ಕರೆದುಕೊಂಡೆ. ಮತ್ತು ನನ್ನ ಹಲಗೆಯನ್ನು ಅವನೊಡನೆ ಪಾಲು ಮಾಡಿಕೊಂಡೆ. "ಓಟೂ" ಅವನು ತನ್ನ ಹೆಸರೆಂದು ಹೇಳಿದ. (ಓs ಟೂss ಎಂದು ಉಚ್ಚರಿಸಬೇಕೆಂದೂ ಕಾಣಿಸಿದ). ಆತ ಬಾರಬೋರಾದ ನಿವಾಸಿಯಂತೆ. ಸೊಸಾಯಿಟಿ ನಡುಗಡ್ಡೆಗಳ ಗುಂಪಿನಲ್ಲಿ ಅದು ತೀರ ಪಡುವಣ ಮೂಲೆ. ಆ ಇನ್ನೊಂದು ಕದದ ಹಲಗೆ ಅವನಿಗೇ ಮೊದಲು ಸಿಕ್ಕಿತ್ತೆಂದೂ ಸ್ವಲ್ಪ ಹೊತ್ತಿನ ಮೇಲೆ ಕ್ಯಾಪ್ಟನ್ ಔಡಾಸನನ್ನು ಕಂಡು ಕನಿಕರಪಟ್ಟು ಆ ಹಲಗೆಯಲ್ಲಿ ಅವನಿಗೂ ಆಶ್ರಯಕೊಟ್ಟನೆಂದೂ ಆ ಶ್ರಮಕ್ಕಾಗಿ ಅವನನ್ನೇ ಆ ಕ್ಯಾಪ್ಟನ್ ಒದ್ದು ಕಡಲಿಗೆ ತಳ್ಳಿದನೆಂದೂ ಅವನಿಂದ ಮುಂದೆ ತಿಳಿಯಿತು.

ಓಟೂ, ನಾನೂ ಕೂಡಿದ್ದು ಹೀಗೆ. ಆತ ಕಾದಾಡುವವನಲ್ಲ. ಅವನು ಕೇವಲ ಸೌಮ್ಯತೆಯ, ಮಾಧುರ್ಯದ ಪ್ರೀತಿಯ ಪ್ರಾಣಿ. ಅವನು ಆರು ಅಡಿ ಎತ್ತರದ ಆಳು. ಮೈಕೈ ಸ್ನಾಯುಗಳೆಲ್ಲ ಉಕ್ಕಿನ ತುಂಡುಗಳಂತೆ. ಸಿಂಹದೊಡನೆ ಹೋರಾಡುವ ಹಳೆಯ ರೋಮನ್ ಮಲ್ಲನಂತೆ. ಆದರೆ ಆತ ಹೋರಾಡುವಾತನಲ್ಲ. ಹಾಗೆಯೇ ಹೇಡಿಯೂ ಅಲ್ಲ. ಅವನದು ಸಿಂಹನಂತಹ ಹೃದಯ. ಮುಂದಿನ ಹಲವು ವರ್ಷಗಳಲ್ಲಿ ನಾನು ಕನಸಿನಲ್ಲಿಯೂ ಅನುಭವಿಸಲಾರದಂತಹ ಸಂಕಟಗಳನ್ನು ಆತ ಅನುಭವಿಸಿದ್ದು ನೋಡಿದ್ದೇನೆ. ಆತ ಹೋರಾಟದ ಆಳು ಅಲ್ಲವಾದರೂ, ಕದನ-ಜಗಳ ಕೆದರುವದನ್ನು ತಾನಾಗಿ ತಪ್ಪಿಸಿಕೊಳ್ಳುತ್ತಿದ್ದನಾದರೂ, ಸಂಕಟ ಒದಗಿ ಬಂದರೆ, ತೊಂದರೆ ತೊಡಗಿದರೆ ಆತ ಓಡಿಹೋಗುವವನಲ್ಲ. ಓಟೂ ಒಮ್ಮೆ ತೊಡಗಿದನೆಂದರೆ ಮುಗಿಯಿತು. ಕೊನೆಯವರೆಗೂ ಆತ ಕಣದಲ್ಲಿ ಉಳಿಯುವವನೇ. ಆತ ಒಮ್ಮೆ ಬಿಲ್‌ಕಿಂಗನಿಗೆ ಮಾಡಿದ್ದನ್ನು ನಾನು ಎಂದೂ ಮರೆಯಲಾರೆ. ಅದು ನಡೆದದ್ದು ಜರ್ಮನ್ ಸಾಮೊವಾ ನಡುಗಡ್ಡೆಯಲ್ಲಿ, ಅಮೇರಿಕನ್ ಹಡಗುಪಡೆಯ ನಾವಿಕರಲ್ಲೆಲ್ಲ ಬಿಲ್‌ಕಿಂಗ್ ದೇಹಭಾರದಲ್ಲಿ ಬಹಳೇ ಭಾರಿ ಹುದ್ದರಿಯೆಂದು ಹೆಸರಾದವನು. ಅವನೊಬ್ಬ ನರಪಶು,

ಶುದ್ಧ ಗೋರಿಲ್ಲಾ. ಕಂಡಲ್ಲಿ ಹೊಡೆಯುವ ಕಣ್ಣಲ್ಲಿ ನೆತ್ತರಿಲ್ಲದ ಒರಟು ಪುಂಡ. ಮುಷ್ಟಿ ಎತ್ತುವದರಲ್ಲಿಯೇ ಬಹಳ ಚುರುಕು. ಅವನೇ ಜಗಳ ಕೆದರಿದ ಓಟೂಗೆ ಎರಡು ಸಲ ಒದೆದ. ಒಮ್ಮ ಹೊಡೆದ. ಆಗ ಓಟೂಗೆ ಹೋರಾಡಲೇಬೇಕಾಯಿತು. ಈ ಹೋರಾಟ ನಾಲ್ಕು ಮಿನಿಟು ನಡೆದಿರಲಿಕ್ಕಿಲ್ಲವೆಂದು ನನಗೆ ಅನಿಸಿತು. ಆದರೆ ಆ ನಾಲ್ಕು ಮಿನಿಟುಗಳ ಕೊನೆಗೆ ಬಿಲ್ಕಿಂಗ್ ನಾಲ್ಕು ಮುರಿದ ಪಕ್ಕೆಲವು, ಒಂದು ಮುರಿದ ಮುಂಗೈ, ಒಂದು ಕೀಲ ಕಳಚಿದ ಹೆಗಲೆಲುವುಗಳಿಂದ ಕೂಡಿದ ದುರ್ದೈವಿಯಾಗಿದ್ದ. ಓಟೂನಿಗೆ ಶಾಸ್ತ್ರೀಯ ಮುಷ್ಟಿಯಿಂದ ಶ್ರೀಗಣೇಶವೂ ಬರುತ್ತಿದ್ದಿಲ್ಲ. ಅವನು ಬರೇ ಧಕ್ಕಾಬುಕ್ಕಿಯ ಬಂಟ. ಮತ್ತು ಆ ಸಂಜೆ ಎಪಿಯಾ ದಂಡೆಯ ಮೇಲೆ ತಿಂದ ಪೆಟ್ಟಿನ ಜಡ್ಡಿನಿಂದ ಗುಣಮುಖವಾಗಲಿಕ್ಕೆ ಬಿಲ್‌ಕಿಂಗವಿಗೆ ಕಡಿಮೆ ಎಂದರೆ ಮೂರು ತಿಂಗಳು ಹಿಡಿಯಿತು.

ಆದರೆ ನಾನು ಕತೆಗಿಂತಲೂ ಮುಂದೆ ಓಡುತ್ತಿದ್ದೇನೆ. ನಾವಿಬ್ಬರೂ ಕಡಲಲ್ಲಿ ಒಂದೇ ಹಲಗೆಯನ್ನು ಆಶ್ರಯಿಸಿದೆವು. ನಾವು ಅದಲುಬದಲಾಗಿ ಆ ಹಲಗೆಯನ್ನು ಬಳಸಿದವು. ನಮ್ಮಲ್ಲಿ ಒಬ್ಬನು ಹಲಗೆಯ ಮೇಲೆ ಅಂಗಾತ ಮಲಗಿ ವಿಶ್ರಾಂತಿ ಪಡೆಯುತ್ತಿದ್ದಾಗ ಇನ್ನೊಬ್ಬನು ಕೊರಳಮಟ್ಟ ನೀರಿನಲ್ಲಿ ಮುಳುಗಿ ಹಲಗೆಯನ್ನು ಕೈಯಿಂದ ಹಿಡಿದು ತೇಲುತ್ತಿದ್ದನು. ಎರಡು ದಿನ, ಎರಡು ರಾತ್ರೆ ಸರತಿಯಂತೆ ಒಮ್ಮೆ ಹಲಗೆಯ ಮೇಲೆ ಒಮ್ಮೆ ಕಡಲಲ್ಲಿ. ನಾವು ಆ ಸಮುದ್ರದಲ್ಲಿ ಸೆಳವಿನೊಂದಿಗೆ ನಡೆದವು. ಕೊನೆಕೊನೆಗೆ ನಾನು ಅಪಸ್ಮಾರವಾದಂತೆ ಬಡಬಡಿಸುತ್ತಿದ್ದೆ. ಓಟೂ ಕೂಡ ತನ್ನ ದೇಶಿ ಭಾಷೆಯಲ್ಲಿ ಏನೇನೋ ತೊದಲುತ್ತ ಹುಚ್ಚುಹುಚ್ಚಾಗಿ ವರ್ತಿಸುವುದನ್ನು ನಾನು ಕಂಡೆ. ನಿರಂತರ ನೀರಿನಲ್ಲಿಯೇ ಇದ್ದುದರಿಂದ ಬಾಯಾರಿಕೆಯಿಂದ ಸಾಯುವ ಸಂಕಟ ತಪ್ಪಿತು. ಆದರೂ ಕಡಲ ನೀರು ಮತ್ತು ಉರಿಬಿಸಿಲು ನಮಗೆ ಕಲ್ಪಿಸಲಿಕ್ಕೂ ಬಾರದಷ್ಟು ಸೊಗಸಾದ ಉಪ್ಪಿನಕಾಯಿಯಾಗಿ ಮಾಡಿದವು. ಮೈದೊಗಲಿಗೆ ಕಪ್ಪು ಮೆರಗು ತಂದವು.

ಕೊನೆಗೂ ಓಟೂ ನನ್ನ ಪ್ರಾಣ ಉಳಿಸಿದ. ನಾನು ನೀರಿನಿಂದ ಇಪ್ಪತ್ತು ಅಡಿ ದೂರ ಸಮುದ್ರ ದಂಡೆಯ ಮೇಲೆ ಎರಡು ತೆಂಗಿನ ಗರಿಗಳ ಮರೆಯ ನೆರಳಿಗೆ

ಬಿದ್ದಿರುವ ಪ್ರಸಂಗ ಬಂದಿತು. ಓಟೂ ಅಲ್ಲದೇ ಇನ್ನ್ಯಾರೂ ನನ್ನನ್ನು ಅಲ್ಲಿಗೆ ಎಳೆದೊಯ್ದು ನೆಳಲಿಗಾಗಿ ಎರಡು ಹೆಡೆಗಳನ್ನು ನಿಲ್ಲಿಸುವದು ಶಕ್ಯವಿದ್ದಿಲ್ಲ. ಅವನು ನನ್ನ ಮಗ್ಗಲಿಗೆ ಮಲಗಿದನು. ನಾನು ಮತ್ತೆ ಎಚ್ಚರ ತಪ್ಪಿದೆ. ಮತ ಎಚ್ಚೆತ್ತಾಗ ತಂಪಾದ ತಾರೆಗಳು ಮಿನುಗುವ ರಾತ್ರೆ ಕವಿದಿತ್ತು. ಓಟೂ ಸೀಯಾಳೊಂದನ್ನು ನನ್ನ ತುಟಿಗೆ ಒತ್ತಿ ಹಿಡಿದಿದ್ದ.

“ಪೆತಿತ್ ಜೀನೆ”ಯಿಂದ ಪಾರಾಗಿ ಬದುಕಿ ಉಳಿದವರು ನಾವು ಇಬ್ಬರೇ. ಕೆಪ್ಟನ್ ಔಡಾಸ್ ದಣಿವಿಗೆ ದೇಹವಿಟ್ಟಿರಬೇಕು. ಹಲವಾರು ದಿನಗಳ ನಂತರ ಅವನು ಸೇರಿಕೊಂಡ ಹಲಗೆ ದಂಡೆಗೆ ಬಂದು ಬಿತ್ತು. ಆದರೆ ಅವನು ಅದರೊಂದಿಗೆ ಬಂದಿರಲಿಲ್ಲ. ಓಟೂ ಮತ್ತು ನಾನು ಒಂದು ವಾರ, ಆ ದಂಡೆಯ ಮೂಲನಿವಾಸಿಗಳೊಂದಿಗೆ ಉಳಿದೆವು. ಅಲ್ಲಿಂದ ನಮ್ಮನ್ನು ಒಂದು ಫ್ರೆಂಚ್ ಹಡಗ ಪಾರುಮಾಡಿ ತಾಹಿತಿಗೆ ಒಯ್ದು ಬಿಟ್ಟಿತು. ಆ ಮೊದಲೇ ನಾವು ಹೆಸರುಗಳ ಅದಲುಬದಲುವಿಕೆಯ ವಿಧಿಯನ್ನು ಸಾಂಗಗೊಳಿಸಿದ್ದೆವು. ದಕ್ಷಿಣ ಸಮುದ್ರದಲ್ಲಿ ಅಂಥ ವಿಧಿಯು ರಕ್ತ ಸಂಬಂಧಕ್ಕಿಂತ ನಿಕಟವಾಗಿ ಉತ್ಕಟವಾಗಿ ಇಬ್ಬರನ್ನು ಒಂದುಗೂಡಿಸುತ್ತದೆ. ಈ ವಿಧಿಗೆ ಉಪಕ್ರಮ ನನ್ನದಿತ್ತು. ನಾನು ಸೂಚಿಸಿದಾಗ ಓಟೂ ಹಿರಿಹಿರಿ ಹಿಗ್ಗಿ ನಲಿದನು.

“ಇದು ಸರಿ” ಆತ ತಾಹಿತಿ ಭಾಷೆಯಲ್ಲಿ ನುಡಿದನು. “ಏಕೆಂದರೆ ನಾವು ಸಾವಿನ ದವಡೆಯಲ್ಲಿ ಎರಡು ದಿನ ಒಟ್ಟಾಗಿ ಉಳಿದು ಸಂಗಡಿಗರಾಗಿಯೇ ಇದ್ದೇವೆ.”

“ಆದರೆ ಸಾವು ತತ್ತರಿಸಿತು.” ನಾನು ನಕ್ಕು ಅಂದೆ.

“ನೀವು ಮಾಡಿದ್ದು ಒಳ್ಳೇ ಎದೆಗಾರಿಕೆಯ ಕೆಲಸ ನನ್ನೊಡೆಯಾ.” ಓಟು ಉತ್ತರಿಸಿದ “ಮತ್ತು ಸಾವು ಇದಿರಾಡುವಷ್ಟು ದುಷ್ಟವಿದ್ದಿರಲಿಲ್ಲ.”

“ಆದರೆ ನನ್ನನ್ನು ಒಡೆಯನಾಗಿ ಮಾಡುವದೇಕೆ?” ಮನ ನೊಂದ ಭಾವವನ್ನು ಒಡಮೂಡಿಸುತ್ತ ನಾನು ನುಡಿದೆ. “ನಾವು ಹೆಸರು ಅದಲು ಬದಲು

ಮಾಡಿಕೊಂಡಿದ್ದೇವೆ. ನಿನಗೆ ನಾನು ಓಟು ನನಗೆ ನೀನು ಚಾರ್ಲಿ. ನಮ್ಮಿಬ್ಬರ ನಡುವೆ ಎಂದೆಂದಿಗೂ, ಎಂದೆಂದಿಗೂ ನೀನು ಚಾರ್ಲಿ ನಾನು ಓಟು ಆಗಿಯೇ ಉಳಿಯುವವು. ಇದು ಈ ರೂಢಿಯ ರೀತಿ. ನಾವು ಸತ್ತಾಗ ಈ ತಾರೆಗಳ ಮತ್ತು ಬಾನಿನ ಆಚೆಗೆ ನಾವಿಬ್ಬರು ಎಲ್ಲಾದರೂ ಮತ್ತೆ ಬದುಕುವುದಾದರೆ ಅಲ್ಲಿಯೂ ನೀನು ನನಗೆ ಚಾರ್ಲಿ ನಾನು ನಿನಗೆ ಓಟು."

"ಹೌದು ನನ್ನೊಡೆಯಾ," ಆತ ನುಡಿದ. ಅವನ ಕಣ್ಣು ಹರ್ಷದಿಂದ ಮೃದುವಾಗಿ ಮಿನುಗುತ್ತಿದ್ದವು.

"ನಡೆ ನೀನು ಹೊರಟುಹೋಗು" ನಾನು ಸಂತಾಪದಿಂದ ಅಂದೆ.

"ನನ್ನ ತುಟಿ ಏನು ಆಡಿದರೇನಂತೆ?" ಆತ ನುಡಿದ. "ಅವು ನನ್ನ ತುಟಿಗಳು. ನಾನು ಓಟುವಿನ ಕುರಿತು ಎಂದೆಂದೂ ಚಿಂತಿಸುವೆನು, ನನ್ನ ಕುರಿತು ಚಿಂತಿಸುವಾಗ ನಿಮ್ಮ ವಿಚಾರವನ್ನೇ ಮಾಡುವೆನು. ಮಂದಿ ನನ್ನ ಹೆಸರೆತ್ತಿ ಕರೆದಾಗ ನಿಮ್ಮ ವಿಚಾರವನ್ನೇ ಮಾಡುವೆನು. ಈ ಬಾನಿನ ಆಚೆ ಈ ತಾರೆಗಳ ಆಚೆ ಯಾವಾಗಲೂ ಎಂದೆಂದಿಗೂ ನೀವು ನನಗೆ ಓಟುವೇ ಆಗಿರುವಿರಿ. ಅದು ಸರಿಯೇ ನನ್ನೊಡೆಯಾ?"

ನನ್ನ ನಗುವನ್ನು ನಾನೇ ಮರೆಯಿಸಿ ಹೇಳಿದೆ "ಸರಿ ಹಾಗೆಯೇ ಸರಿ."

ಪಾಪೀತಿಯಲ್ಲಿ ನಾವು ಅಗಲಿದೆವು. ನಾನು ದಂಡೆಯಲ್ಲಿಯೇ ಮೈಕಸುವು ತುಂಬಿಕೊಳ್ಳುವದಕ್ಕಾಗಿ ಉಳಿದೆನು. ಆತ ಒಂದು ಕೊಂತಲಿನಲ್ಲಿ (ಕಿರಿ ದೋಣಿ) ತನ್ನ ದ್ವೀಪವಾದ ಬೋರಾಬೋರಾಕ್ಕೆ ಹೊರಟುಹೋದ. ಆರು ವಾರಗಳ ನಂತರ ಆತ ಹಿಂದಿರುಗಿ ಬಂದ. ನನಗೆ ಆಶ್ಚರ್ಯವಾಯಿತು. ಏಕೆಂದರೆ ತನ್ನ ಹೆಂಡತಿಯ ವಿಷಯ ನನ್ನೊಡನೆ ಆಡಿದ್ದ. ಆಕೆಯ ಬಳಿ ಆತ ಮರಳಿದ್ದ ಇನ್ನು ದೂರದ ಕಡಲು ಪಯಣಗಳನ್ನು ಬಿಟ್ಟುಕೊಡುವವನಿದ್ದ.

“ನೀವು ಎಲ್ಲಿಗೆ ಹೋಗುವಿರಿ ನನ್ನೊಡೆಯಾ?” ಆತ ಕೇಳಿದ, ಪ್ರಥಮ ದರ್ಶನದ ನಮಸ್ಕಾರಗಳು ಮುಗಿದೊಡನೆ.

ನಾನು ಹೆಗಲು ಹಾರಿಸಿದೆ, ಈ ಪ್ರಶ್ನೆ ಬಿಗಿಯಾಗಿತ್ತು. “ಸಕಲ ಜಗತ್ತು ಸಕಲ ಸಮುದ್ರ, ಸಮುದ್ರದಲ್ಲಿದ್ದ ಸಕಲ ನಡುಗಡ್ಡೆಗಳೆಲ್ಲ ಸಂಚರಿಸುವ” ನಾನು ಉತ್ತರವಿತ್ತೆ.

“ನಾನು ನಿಮ್ಮೊಡನೆಯೇ ಬರುತ್ತೇನೆ” ಆತ ಸರಳವಾಗಿ ಹೇಳಿಬಿಟ್ಟ, “ನನ್ನ ಹೆಂಡತಿ ಸತ್ತಳು.”

ನನಗೆ ಅಣ್ಣತಮಂದಿರು ಯಾರೂ ಇದ್ದಿಲ್ಲ. ಆದರೆ ಇತರರ ಅಣ್ಣ ತಮ್ಮಂದಿರನ್ನು ನಾನು ಕಂಡಮಟ್ಟಿಗೆ ಹೇಳುವುದಾದರೆ ಓಟು ನನಗೆ ತಮ್ಮನಂತೆಯೇ ಇದ್ದ ರೀತಿ ಯಾವ ಮನುಷ್ಯನಿಗೂ ಯಾವ ಅಣ್ಣ ತಮ್ಮಂದಿರೂ ಇರಬಹುದೆಂಬ ಬಗ್ಗೆ ನನಗೆ ಸಂಶಯವೇ ಇದೆ. ಆತ ನನ್ನ ಅಣ್ಣ, ತಮ್ಮ, ತಂದೆ, ತಾಯಿ ಎಲ್ಲ ಆಗಿದ್ದ. ಮತ್ತು ನನಗೆ ಇಷ್ಟು ಗೊತ್ತು. ಓಟೂನ ಮೂಲಕ ನಾನು ಹೆಚ್ಚು ಸರಳ ಹಾಗೂ ಒಳ್ಳೇ ಮನುಷ್ಯನಾಗಿ ಬಾಳಿದೆ. ಇತರ ಜನರ ಬಗ್ಗೆ ನಾನು ಪರಿವೆಯನ್ನೇ ಮಾಡಿರಲಿಲ್ಲ. ಆದರೆ ಓಟೂನ ಕಣ್ಣಲ್ಲಿ ನೇರವಾಗಿ, ಸರಳವಾಗಿ ಬದುಕಬೇಕು. ಅವನ ಮೂಲಕ ನಾನು ಕಲಂಕಿತನಾಗಲು ಧೈರ್ಯಪಡಲಿಲ್ಲ. ತನ್ನದೇ ಆದ ಪ್ರೀತಿಯ ಮತ್ತು ಆರಾಧನೆಗಳ ಗಣ ಮಿಶ್ರಣದಿಂದ ಉಂಟುಮಾಡಿದ ನನ್ನನ್ನು ಆತ ತನ್ನ ಆದರ್ಶನನ್ನಾಗಿ ಮಾಡಿಕೊಂಡಿದ್ದ. ನಾನು ನರಕ ಕುಂಡದ ಕಡಿದಾದ ಅಂಚಿಗೆ ನಿಂತ ಸಮಯಗಳು ಇದ್ದವು. ಅಂತಹ ಸಮಯಗಳಲ್ಲಿ ಓಟೂನ ವಿಚಾರ ನನ್ನನ್ನು ತಡೆಯದಿದ್ದರೆ ನಾನು ಅಧಃಪಾತಹೊಂದುವದು ಕಷ್ಟವಿದ್ದಿಲ್ಲ. ನನ್ನಲಿಯೂ ಅವನ ಅಭಿಮಾನ ಪ್ರವೇಶಿಸಿತು. ಅವನು ಪಟ್ಟುಕೊಳ್ಳುವ ಆ ಅಭಿಮಾನ ಕಡಿಮೆಯಾಗುವಂತೆ ಏನನ್ನೂ ಮಾಡಕೂಡದೆಂಬುದೊಂದು ಮುಖ್ಯ ನಿಯಮ ನನ ವೈಯಕ್ತಿಕ ಆಚಾರ ಧರ್ಮಗಳಲ್ಲಿ ಸೇರಿಕೊಂಡಿತ್ತು.

ಅವನ ಭಾವನೆಗಳು ನನ್ನ ಕುರಿತು ಏನಿದ್ದವೆಂಬುದನ್ನು ನಾನು ನೇರವಾಗಿ ಅರಿತುಕೊಳ್ಳಲಿಲ್ಲ. ಆತ ಎಂದೂ ಟೀಕಸುತ್ತುದ್ದಿಲ್ಲ, ನಿಂದಿಸುತ್ತಿದ್ದಿಲ್ಲ. ಅವನ ದೃಷ್ಟಿಯಲ್ಲಿ ನನಗಿರುವ ಉನ್ನತ ಸ್ಥಾನದ ಕಲ್ಪನೆ ನನ್ನಲ್ಲಿ ಮೆಲ್ಲಗೆ ಉದಯಸಗೊಂಡಿತು. ಮತ್ತು ನನ್ನ ಅತ್ಯುತ್ತಮ ಮಟ್ಟಕ್ಕಿಂತ ಕೆಳಗೆ ನಾನು ಏನೇ ಆದರೂ ಅವನ ಮೇಲೆ ಪೀಡೆ ಹೇರಿದಂತೆ ಎಂಬುದನ್ನು ಮೆಲ್ಲನೆ ಮನಗಂಡೆನು.

ಹದಿನೇಳು ವರ್ಷ ನಾವು ಜತೆಯಾಗಿ ಉಳಿದೆವು. ಅಷ್ಟೊಂದು ದೀರ್ಘಕಾಲ ಆತ ನನ್ನನ್ನು ಹಿಂಬಾಲಿಸಿಯೇ ಇದ್ದ. ನಾನು ಮಲಗಿದಾಗ ನನ್ನ ಮೇಲೆ ಕಣ್ಣಿಡುತ್ತ, ಜ್ವರ ಜರ್ಜರತೆಗಳಲ್ಲೂ ನನ್ನ ಆರೈಕೆ ಮಾಡುತ್ತ, ಇಷ್ಟೇ ಏನು ನನಗಾಗಿ ಹೊಡೆದಾಟಗಳಲ್ಲಿ ಗಾಯಗೊಳ್ಳುತ್ತಲೂ ಅಹುದು! ನಾವಿಬ್ಬರೂ ಅದೇ ಹಡಗದಲ್ಲಿ ಕೆಲಸಕ್ಕೆ ನಿಂತೆವು. ಜತೆಗೆ ನಾವು ಹವಾಯಿಯಿಂದ ಸಿಡ್ನೆಹೆಟ್‌ತನಕ ಮತ್ತು ಟೊರ್ರೆಸ್ ಸ್ಟೇಟದಿಂದ ಗಾಲಾಪೆಗೋಸತನಕ ಪ್ಯಾಸಿಫಿಕ್ ಮಹಾಸಾಗರದಲ್ಲಿ ಅಂಡಲೆದೆವು. ನ್ಯೂಹೆಬ್ರಾಯಿಡ್ಸ್, ಮತ್ತು ಲೈನದ್ವೀಪಗಳಿಂದ ಪಶ್ಚಿಮಕ್ಕೆ ನೇರವಾಗಿ ಲುಯಿಸಾಯಿಡ್ಸ ನ್ಯೂಬ್ರಿಟನ್ನ, ನ್ಯೂಆಯರ್ಲಂಡ್ ಮತ್ತು ನ್ಯೂ ಹಾನೋವರಗಳ ತನಕವೂ ನಾವು ಹಂಗಾಮಿನೊಂದಿಗೆ ಹೋದದ್ದುಂಟು. ಮೂರು ಸಲ ನಾವು ಹಡಗ ಒಡೆದು ಕಡಲಪಾಲಾದೆವು. ಒಮ್ಮೆ ಗಿಲ್ಬರ್ಟದಲ್ಲಿ, ಇನ್ನೊಮ್ಮೆ ಸಾಂತಾಕ್ರೂಜ ದ್ವೀಪ ಸಮೂಹದಲ್ಲಿ, ಮತ್ತೊಮ್ಮೆ ಫಿಜಿ ನಡುಗಡ್ಡೆಗಳ ನಡುವ ಎಲ್ಲೇ ಇರಲಿ, ಮುತ್ತಿನ, ಮುತ್ತಿನ ಚಿಪ್ಪಿನ, ದೊಡ್ಡ ಆನೆಯ ಕವಚಗಳ ರೂಪದಲ್ಲಿ ಡಾಲರು ಪ್ರಾಪ್ತಿಯಾಗುವದಾದರೆ ನಾವು ವ್ಯಾಪಾರ ಮಾಡುತ್ತಿದ್ದೆವು.

ಅದು ಆರಂಭವಾದುದು ಪಾಪೀತಿಯಲ್ಲಿ. ಅದಾಗಲೇ ಅವನು ನನ್ನೊಂದಿಗೆ ಸಕಲ ಸಮುದ್ರದಲ್ಲಿಯೂ, ಸಮುದ್ರದ ಸಕಲ ದ್ವೀಪಗಳಲ್ಲಿಯೂ ಬರುವೆನೆಂದು ಸಾರಿದ್ದ ಮಾತ್ರ. ಆಗಿನ ದಿನಗಳಲ್ಲಿ ಪಾಪೀತಿಯಲ್ಲಿ ಒಂದು ಕ್ಲಬ್ಬು ಇತ್ತು. ಆ ಕ್ಲಬ್ಬಿನಲ್ಲಿ ಮುತ್ತುಗಾರರೂ, ವ್ಯಾಪಾರಿಗಳೂ, ಕೈಪ್ಟನ್ನರೂ ದಕ್ಷಿಣ ಸಮುದ್ರದ ಕಿರುಕುಳ

ಸಾಹಸಿಗರೆಲ್ಲರೂ ಒಂದೆಡೆಗೆ ಕೂಡುತ್ತಿದ್ದರು. ಜೂಜು ಆಡುವುದಕ್ಕೂ, ಹೂಜೆ ಬರಿದು ಮಾಡುವುದಕ್ಕೂ, ಆಗ ಮಿತಿಯೇ ಉಳಿಯುತ್ತಿದ್ದಿಲ್ಲ. ಭಾರಿಸಾಟಿ, ಭಾರಿಒಡ್ಡ ಹಾಗೂ ಭಾರಿ ಕುಡಿತಗಳು ಖಾಲಿಯಾಗುತ್ತಿದ್ದವು. ಮತ್ತು ನನಗೆ ಒಗ್ಗುವ, ಇಲ್ಲವೇ ಒಪ್ಪುವದಕ್ಕಿಂತ ಹಚ್ಚು ಅಪರರಾತ್ರಿಯ ಘಂಟೆಗಳನ್ನು ನಾನು ಅಲ್ಲಿ ಕಳೆಯುತ್ತಿದ್ದೆನು. ಕ್ಲಬ್ಬು ಎಷ್ಟೇ ಸಮಯಕ್ಕೆ ಬಿಟ್ಟರೂ ನನ್ನನ್ನು ಕ್ಷೇಮವಾಗಿ ಮನೆಗೆ ಮುಟ್ಟಿಸಲು ಓಟೂ ದಾರಿಕಾಯುತ್ತ ಇರುತ್ತಿದ್ದ.

ಮೊದಮೊದಲು ನಾನು ನಕ್ಕಬಿಡುತ್ತಿದ್ದೆ. ಆಮೇಲೆ ಅವನನ್ನು ಗದ್ದರಿಸಲು ಪ್ರಾರಂಭಿಸಿದೆ. ಆ ನಂತರ ಸ್ಪಷ್ಟ ಹೇಳಿಬಿಟ್ಟೆ. ನನಗೆ ದಾದೀತನದ ಆರೈಕೆಯು ಬೇಕಿಲ್ಲವೆಂದು. ಅಂದಿನಿಂದ ನಾನು ಕ್ಷಬ್ಬನಿಂದ ಹೊರಬಿದ್ದಾಗ ಆತ ಕಣ್ಣಿಗೂ ಕಾಣುತ್ತಿರಲಿಲ್ಲ. ಆದರೆ ಒಂದು ವಾರದ ನಂತರ ಕೇವಲ ಆಕಸ್ಮಿಕ ಯೋಗದಿಂದ ನನಗೆ ತಿಳಿದುಬಂದಿತು. ಆತ ನನ್ನನ್ನು ಮನೆಯವರೆಗೆ, ನನಗೆ ತಿಳಿಯದಂತೆ ಕೇರಿಯ ಆಚೆಯಿಂದ ಮಾವಿನ ಮರಗಳ ನೆಳಲುಗಳಲ್ಲಿ ಮೈಮರೆಸಿಕೊಳ್ಳುತ್ತ ಹಿಂಬಾಲಿಸುತ್ತಿದ್ದ. ಆಗ ನಾನು ಮಾಡಲಾದರೂ ಏನು? ಏನು ಮಾಡಿದೆ ಅನ್ನೋದು ನನಗೇ ಗೊತ್ತು.

ನನಗೆ ಅರಿವಾಗದಂತೆ ನಾನು ಕ್ಲಬ್ಬಿನಲ್ಲಿ ಕುಳಿತಿರುವ ಕಾಲ ಕಡಿಮೆ ಮಾಡತೊಡಗಿದೆ. ಮಳೆಗಾಳಿಯ ಒದ್ದೆ ಮುದ್ದೆ ರಾತ್ರೆಗಳಲ್ಲಿ, ಸ್ಲಬ್ಬಿನಲ್ಲಿ ನಡೆಯುತ್ತಿರುವ ಮದ್ಯಮೋಜು ಮತ್ತು ಮರ್ಕಟತನದ ಮಧ್ಯದಲ್ಲಿ ಒಂದು ವಿಚಾರ ಎಡೆಬಿಡದೆ ನನ್ನ ತಲೆಯಲ್ಲಿ ಸುತ್ತುತಿತು. ಹೊರಗೆ ರಿಪಿರಿಪಿ ಹನಿಸುವ ಮಾವಿನಮರಗಳ ಕೆಳಗೆ ಓಟೂ ನನಗಾಗಿ ಒಂಟಿಗಾವಲು ಇಡುತ್ತ ಶೂನ್ಯನಾಗಿ ನಿಂತಿದ್ದಾನೆ! ನಿಜವಾಗಿಯೂ ಅವನು ಮಡಿವಂತನಿದ್ದಿಲ್ಲ. ಸಾಮಾನ್ಯ ಕ್ರೈಸ್ತ ನೀತಿಮತ್ತೆಯು ಏನೆಂಬುದು ಆತನಿಗೆ ಗೊತ್ತಿದ್ದಿಲ್ಲ. ಬೋರಾಬೋರಾದ ಜನರಲ್ಲ ಕ್ರೈಸ್ತರಾಗಿದ್ದರು. ಆದರೆ ಆತ ಪಾಮರ, ಕಾಫಿರ, ಧರ್ಮಲಂಡನಾಗಿದ್ದ. ಆ ದ್ವೀಪದಲ್ಲಿ ಅವನೊಬ್ಬನೇ ಪಾಷಂಡಿ. ಪೂರ್ತಿ ಜಡವಾದಿ. ಸತ್ತಮೇಲೆ ನಿಜವಾಗಿಯೂ ಸಾಯುವೆನೆಂದು ನಂಬುವ ಹುಂಬ. ಆತನು ಕೇವಲ

ನ್ಯಾಯ ನಡತೆ ಮತ್ತು ಪ್ರಾಮಾಣಿಕ ವ್ಯವಹಾರಗಳಲ್ಲಿ ನಂಬಿಗೆ ಇಡುತ್ತಿದ್ದ. ಅವನ ಆಚಾರ ಧರ್ಮದಲ್ಲಿ ಕ್ಷುಲ್ಲಕತನ ಖೂನಿಯಷ್ಟೇ ಘೋರ ಅಪರಾಧವಿತ್ತು. ಅಲ್ಲಿ ನನ್ನ ನಂಬಿಕೆಯೇನೆಂದರೆ ಆತ ಸುಳ್ಳು ಕಳ್ಳ ವ್ಯಾಪಾರಿಗಿಂತ ಕೊಲೆಗಡಕನನ್ನು ಹೆಚ್ಚು ಆದರದಿಂದ ನೋಡುತ್ತಿದ್ದ.

ನನ್ನ ಕುರಿತು ಹೇಳುವದಾದರೆ ನನಗೆ ಅಪಾಯಕರವಾದ ಯಾವದನ್ನೂ ನಾನು ಮಾಡುವದಕ್ಕೆ ಆತನ ಆತಂಕವಿತ್ತು. ಜೂಜು ಆಡುವದು ಸರಿ. ಆತ ಸ್ವತಃ ಮನವಾರೆ ಜೂಜು ಆಡುತ್ತಿದ್ದ. ಆದರೆ ನಿದ್ದೆಗೆಡುವುದು, ಜಾಗರಣೆ ರಾತ್ರಿಗಳು ಆರೋಗ್ಯವನ್ನು ಕೆಡಿಸುವದೆಂದು ಆತನ ತಕರಾರು. ತಮ್ಮ ಕುರಿತು ಜಾಗ್ರತೆ ವಹಿಸದೇ ಇದ್ದ ಜನ ಜ್ವರದಿಂದ ಸತ್ತಿದ್ದು ಆತ ನೋಡಿದ್ದ. ಆತ ಸೆರೆ ಸೇಂದಿ ಬಿಟ್ಟವನಲ್ಲ. ಹಡಗಗಳಲ್ಲಿ ತೊಯ್ದು ಕೆಲಸ ಮಾಡಬೇಕಾಗಿ ಬಂದಾಗ, ಆತ ಒಂದು ಉರಿಕಟ್ಟಾದ ಕುಡಿತೆ ಯಾವಾಗಲೂ ಬಗ್ಗಿಸಲು ಸಿದ್ಧ. ಆದರೂ ಆತ ಸರಾಯಿಯಲ್ಲಿ ಮಿತವಿರಬೇಕೆಂಬ ಮತದವ. ಮದ್ಯದ ಅಮಲಿನಲ್ಲಿ, ಅನೇಕರು ಮಾರ್ಪಟ್ಟದ್ದು ಮರ್ಯಾದೆಗೆಟ್ಟದ್ದು ಆತ ನೋಡಿದ್ದ.

ನನ್ನ ಕಲ್ಯಾಣ ಓಟೂನ ಎದೆಯಾಳದ ಚಿಂತೆ. ನನಗೂ ಮೀರಿ ಮುಂದೆ ಆತನ ನೋಟ. ನನ್ನ ಯೋಜನೆಗಳನ್ನು ತೂಗಿ ನೋಡಿ ಅವುಗಳಲ್ಲಿ ನನಗಿಂತಲೂ ಹೆಚ್ಚಿನ ಆಸಕ್ತಿಗಳನ್ನು ವಹಿಸುವಾತ ಆತ. ಮೊದಮೊದಲು ನನ್ನ ವಿಷಯಗಳಲ್ಲಿ ಅವನ ಈ ಆಸಕ್ತಿಯ ಕುರಿತು ನನಗೆ ಅರಿವಿದ್ದಿಲ್ಲ. ಆಗ ಆತ ನನ್ನ ಇಂಗಿತ ಉದ್ವೇಗಗಳನ್ನೆಲ್ಲ ಊಹಿಸಿಕೊಳ್ಳಬೇಕಾಗುತ್ತಿತ್ತು. ಉದಾಹರಣೆಗಾಗಿ ಒಮ್ಮೆ ಪಾಪೀತಿಯಲ್ಲಿ ನಾನು ನನ್ನ ಒಬ್ಬ ದೇಶಬಾಂಧವನಾದ ಧೂರ್ತನೊಡನೆ ಬಂದು ಉಡುವಿನ (ಮೀನ ಗೊಬ್ಬರದ) ಸಾಟಿಯಲ್ಲಿ ಪಾಲುಗಾರನಾಗಲು ಹೊರಟೆ. ಆತ ಅಂಥ ಧೂರ್ತನೆಂದು ನನಗೆ ಗೊತ್ತಿದ್ದಿಲ್ಲ. ಪಾಪೀತಿಯಲ್ಲಿಯ ಬೇರೆ ಯಾವ ಬಿಳಿಯನಿಗೂ ಗೊತ್ತಿದ್ದಿಲ್ಲ. ಓಟೂನಿಗೂ ಅದು ಗೊತ್ತಿದ್ದಿಲ್ಲ. ಆದರೆ ನಾವಿಬ್ಬರೂ ಎಷ್ಟು ಹತ್ತಿರಕ್ಕೆ ಘನವಾಗಿ

ಕೂಡತೊಡಗಿದೆವೆಂದು ಆತ ನೋಡಿದ. ಮತ್ತು ನಾನು ಹೇಳದೇ ಆತ ಎಲ್ಲವನ್ನೂ ಕಂಡುಹಿಡಿದು ನನಗೆ ತಿಳಿಸಿದ; ತಾಹಿತಿಯ ದಂಡೆಯಲ್ಲಿ ಮೂಲನಿವಾಸಿ ನಾವಿಕರು ಕಡಲ ಎಲ್ಲ ಮೂಲೆಗಳಿಂದ ಬಂದು ಕಲೆಯುತ್ತಾರೆ. ಓಟೂ ಸಂದೇಹಪಡುತ್ತಲೇ ಅವರಲ್ಲಿ ಹೋಗಿ ಕಲೆತು ತನ್ನ ಸಂದೇಹ ಬಲಪಡಿಸುವ ತನಕವೂ ಅವರಿಂದ ಸಾಕಷ್ಟು ವಿವರಗಳನ್ನು ಕೇಳಿ ಕಲೆಹಾಕಿದ. ಆಹ! ಅದೊಂದು ಚಂದಕತೆ, ಅದು ರಂಡಾಲ್ಫ ವಾಟರ್ಸನದು. ಓಟೂ ಮೊದಲು ಅದನ್ನು ಹೇಳಿದಾಗ ನಾನು ನಂಬಲೇ ಇಲ್ಲ. ಆದರೆ ಅದನ್ನು ವಾಟರ್ಸನಿಗೇ ಕೇಳಿ ತಾಳೆ ನೋಡಿದಾಗ ಅವನು ಮರುಮಾತಿಲ್ಲದೇ ಕುಸಿದುಬಿದ್ದ ಮತ್ತು ಮುಂದಿನ ಮೊದಲನೆಯ ಹಡಗವನ್ನೇರಿ ಆಕ್ಲಾಂಡಿಗೆ ಹೊರಟುಹೋದ.

ಮೊದಲು ಇವನ್ನು ಒಪ್ಪಿಕೊಳ್ಳಲು ನಾನು ಸಿದ್ಧನೇ. ಓಟೂ ಹೀಗೆ ನನ್ನ ವ್ಯವಹಾರದಲ್ಲಿ ಮೂಗು ತುರುಕಿಸುತ್ತಿದ್ದುದು ನನಗೆ ಸೇರಲಿಲ್ಲ. ಅವನ್ನು ನಿಷೇಧಿಸದೆ ಇರಲು ನನ್ನಿಂದ ಆಗಲಿಲ್ಲ. ಆದರೆ ಆತ ಪೂರ್ತಿ ನಿಸ್ವಾರ್ಥಿ ಎಂದು ನನಗೆ ಗೊತ್ತಿತ್ತು. ಆಗ ಅವನ ವಿವೇಕವನ್ನು, ದೂರದರ್ಶಕತ್ವವನ್ನು ನಾನು ಮನ್ನಿಸಲೇ ಬೇಕಾಯಿತು. ಆತನಿಗೆ ತೀಕ್ಷ್ಣ ಹಾಗೂ ದೂರದೃಷ್ಟಿ ಇತ್ತು. ಕಾಲ ಕಳೆದಂತೆ ಆತ ನನ್ನ ಸಲಹೆಗಾರನಾದ; ನನ್ನ ವ್ಯವಹಾರಗಳು ನನಗಿಂತ ಆತನಿಗೆ ಹೆಚ್ಚು ಗೊತ್ತಾಗತೊಡಗಿದವು. ನಿಜವಾಗಿಯೂ ನನಗಿಂತ ಆತನೇ ಹೆಚ್ಚು ನನ್ನ ಹಿತದ ಬಗ್ಗೆ ಲಕ್ಷ್ಯ ಪೂರೈಸುತ್ತಿದ್ದ. ನನ್ನದು ಯವ್ವನೋನ್ಮಾದದ ಸಡಗರದ ಪರಿವೆಗೇಡಿತನ. ನನಗೆ ಯಾವಾಗಲೂ ಡಾಲರುಗಳಿಗಿಂತ ರೋಮಾಂಚಕರ ದುಸ್ಸಾಹಸಪ್ರಿಯ, ಕಮ್ಮಗಿನ ಹಸೆಗಿಂತ ರಾತ್ರೆಗೆಲ್ಲ ಗಂಡಾಂತರದ ಹವ್ಯಾಸ ಹೆಚ್ಚು ಮೆಚ್ಚಿಗೆ. ಅದರಿಂದ ನನ್ನನ್ನು ನೋಡಿಕೊಳ್ಳಲು ನನಗಾಗಿ ನೋಡಿಕೊಳ್ಳುವವನೊಬ್ಬ ಇರುವದು ಒಳಿತೇ ಆಯಿತು. ಓಟೂ ಇಲ್ಲದಿದ್ದರೆ ನಾನು ಇಂದು ಇಲ್ಲಿ ಇರುತ್ತಲೇ ಇರಲಿಲ್ಲ.

ಅಂತಹ ಅನೇಕ ಉದಾಹರಣೆಗಳಲ್ಲಿ ಒಂದನ್ನು ಇಲ್ಲಿ ಕೊಡುತ್ತೇನೆ. ಪ್ಲೆಮೊಥೋಸದಲ್ಲಿ ಮುತ್ತಿನ ಸಿಂಪಿನ ವ್ಯಾಪಾರಕ್ಕೆ ಇಳಿಯುವ ಮೊದಲು ನನಗೆ ನಿಗ್ರೋಜ ವಾನರನ್ನು ಒಡನೆ ಒಯ್ದು ಕಳ್ಳ ವ್ಯವಹಾರ ಮಾಡುವದರ ಅನುಭವವಿತ್ತು. ಒಮ್ಮೆ ಓಟೊ ಮತ್ತು ನಾನು ಸಮುದದಂಡೆಯ ಮೇಲೆ ನಿಜವಾಗಿಯೂ ನಾವು ಆಗ ಕೆಲಸವಿಲ್ಲದೇ ದಂಡಮೇಲೆ ಬಳಿದುಬಂದು ಬಿದ್ದಂತೆ ಇದ್ದೆವು. ಆಗ ನಿಗ್ರೋ ಗುಲಾಮರನ್ನು ಹಿಡಿದೆತ್ತಿ ಸಾಗಿಸುವ ಹಡಗದ ಮೇಲೆ ನಾನು ಜವಾನರನ್ನು ಹಿಡಿದು ತರುವ "ಸೇರೋಗಾರ" ನಾಗಿ ಹೋಗುವ ಅವಕಾಶ ದೊರಕಿತು. ಓಟು ಹಾಯಿಯ ಕಂಭದ ಮುಂದೆ ಚಾಕರಿ ಹಿಡಿದ. ಮುಂದೆ ಆರು ವರ್ಷ ವೆಲೇನಿಸಿಯಾದ ಅತ್ಯಂತ ಕಾಡುವಲಯದ ಕಡಲಿನಲ್ಲಿ ಸಿಕ್ಕಷ್ಟು ಹಡಗುಗಳ ಮೇಲೆ ನಾವು ದುಡಿದೆವು. ನಾನಿದ್ದ ಹಡಗದಲ್ಲಿ ತಾನು ಹುಟ್ಟು ಓಡಿಯುವ ಚಾಕರಿ ಹಿಡಿಯುತ್ತಿದ್ದ. ಓಟು ಮೂಲನಿವಾಸಿಗಳನ್ನು ಗುಲಾಮರಾಗಿ ಹಿಡಿದು ತರುವ ನಮ್ಮ "ರಂಗ ರೋಟಿ"ನ ರೀತಿಯೆಂದರೆ "ಸೇರೋಗರ"ನಿಗೆ ಸಮುದ್ರ ದಂಡೆಯ ಮೇಲೆ ಕೂಡಿಹಾಕುವದು, ಕಾವಲಿನ ಹಡಗ ದಂಡೆಯಿಂದ ನೂರುಗಟ್ಟಲೆ ಅಡಿ ದೂರ ಆಳ ನೀರಿನಲ್ಲಿ ನಿಲ್ಲಿಸುವದು ವಾಡಿಕೆ. "ಸೇರೋಗಾರ" ದೋಣಿ, ಕಡಲಿನ ಅಂಚಿಗೆ ಹುಟ್ಟುಗಳೊಡನೆ ಸಜ್ಜಾಗಿ ತೇಲುತ್ತಿರುವದು. ನಾನು ನನ್ನ ವ್ಯಾಪಾರಿ ಸರಕುಗಳೊಂದಿಗೆ ದಂಡೆಗೆ ಬಂದಾಗ ಓಟು ಹುಟ್ಟು ಬಿಟ್ಟು ದೋಣಿಯ ಹಿಂಬದಿಗೆ ಹಾಯದ ಹಾಳೆಗಳ ನಡುವೆ ಬಂದು ನಿಂತ. ಅಲ್ಲಿ ಆ ಹಾಯದ ಬಟ್ಟೆಯ ಮರೆಯಲ್ಲಿ ಒಂದು ವಿಂಚೇಷ್ಟರ ಬಂದೂಕು ಇಟ್ಟಿತ್ತು. ದೋಣಿಯ ನಾವಿಕರು ಸಶಸ್ತ್ರರಾಗಿದ್ದರು. ದೋಣಿಯ ಅಂಚಿನ ಉದ್ದಕ್ಕೂ ಬಂದು ತುಂಬುವ ತುಬಾಕಿಗಳನ್ನು ಅಲ್ಲಲ್ಲ ಅಡಗಿಸಿಟ್ಟಿದ್ದರು. ಅತ್ತ ನಾನು ಆ ಉರುಟುಗೂದಲಿನ ನರಭಕ್ಷಕ ಆದಿವಾಸಿಗಳೊಂದಿಗೆ ಮಾತಾಡುತ್ತ ಅವರನ್ನು ಕ್ವೀನ್ಸ್‌ಲ್ಯಾಂಡದ ತೋಟಗಳಲ್ಲಿ ದುಡಿಯುವದಕ್ಕೆ ಬರಲು ಮನ ಒಲಿಸುತ್ತಿರುವಾಗ ಓಟು ಕಾವಲು ನಿಂತಿದ್ದ. ಆಗಾಗ ಅವನ ತಗ್ಗಿದ ಧ್ವನಿಯು ಆ ಮಂದಿಯ ಸಂದಿಗ್ಧ ಚಟುವಟಿಕೆಯ ಹಾಗೂ ಒದಗಬಹುದಾದ ಮೋಸಗಾರಿಕೆಯ ಮುಂಜಾಗ್ರತ ನನಗೆ

ಕೂಡುತ್ತಿತ್ತು. ಕೆಲ ಒಮ್ಮೆ ಅವನ “ರ್ಯಾಫಲ್ಲಿನ” ತ್ವರೆಯು ಬಾರಿನಿಂದ ಅಂಥ ಪ್ರಥಮ ಸೂಚನೆ ಪಡೆಯುತ್ತಿದ್ದೆ. ಮತ್ತು ದೋಣಿಗೆ ನುಗ್ಗುವಾಗ, ನನ್ನನ್ನು ಬೇರೆ ದೋಣಿಗೆ ಎತ್ತಿಕೊಳ್ಳಲು ಅವನ ಕೈ ಯಾವಾಗಲೂ ಮುಂದಕ್ಕೆ ಚಾಚಿತ್ತು. ಒಮ್ಮೆ ನನಗೆ ಒಳ್ಳೇ ನೆನಪಿದೆ. ಸಾಂತಾಆನಾದಲ್ಲಿ ಗಲಭೆ ಸುರುವಾಗುತ್ತಿರುವಾಗಲೇ ದೋಣಿ ನೆಲಕಚ್ಚಿತು. ಮಳಲಲ್ಲಿ ಸಿಲುಕಿತು. ಆಗ ಕಾವಲಿನ ಹಡಗ ನಮ್ಮ ನೆರವಿಗೆ ಧಾವಿಸಿ ಬರತೊಡಗಿತು. ಆದರೆ ಇಪ್ಪತ್ತುಗಟ್ಟಲೇ ಕಾಡುಜನ ಆ ಹಡಗ ಹತ್ತಿರ ಬರುವಷ್ಟರಲ್ಲೇ ನಮ್ಮನ್ನು ಇದ್ದಲ್ಲೇ ಇಲ್ಲವಾಗಿಸಬಹುದಿತ್ತು. ಓಟು ದೋಣಿಯಿಂದ ನೇರ ದಂಡೆಗೆ ಹಕ್ಕಿಯಂತೆ ಎರಗಿ ಹಾರಿದ ಎರಡೂ ಕೈಗಳನ್ನು ವ್ಯಾಪಾರದ ಸರಕುಗಳಲ್ಲಿ ತುರುಕಿದ ತುಬಾಕಿ, ಮಣಿಹಾರ, ರಣಗೊಡಲಿ, ಚೂರಿ, ಕೆಲಿಕೋ ಬಟ್ಟೆ ಇವೆಲ್ಲ ರಾಶಿಹಾಕಿ ಎಲ್ಲ ಕಡೆಗೆ ತುರುಕಿ ಹಾಕಿದ ಆ ಉರುಟುಗೂದಲಿನ ಘಟೋದ್ಭಚರಿಗೆ ಇದು ಭಾರಿಯಾಯಿತು. ಅವರು ಮುಗಿದುಬಿಟ್ಟು ಆ ನಿಧಿಗಳ ಬಗ್ಗೆ ಹಿಗ್ಗಾ ಮುಗ್ಗಾ ಹೆಣಗುತ್ತಿದ್ದಾಗ ದೋಣಿಯನ್ನು ದಂಡೆಯಿಂದ ದೂರ ನೂಕಲಾಯಿತು. ತಳಕಿತ್ತು ನಾವು ನಾಲ್ವತ್ತು ಅಡಿ ದೂರ ನೀರಲ್ಲಿ ತಲ್ಪಿದೆವು ಮತ್ತು ಮುಂದಿನ ನಾಲ್ಕು ತಾಸುಗಳಲ್ಲಿ ಅದೇ ದಂಡೆಯ ಮೇಲೆ ನನಗೆ ಮೂವತ್ತು ಜನ ಜವಾನರು ದುಡಿಯುವ ಆಳಾಗಿ ದೊರೆತರು.

ನಾನು ಉದಾಹರಿಸಲಿಕ್ಕೆಂದು ವಿಶೇಷವಾಗಿ ನೆನಪಿಟ್ಟುಕೊಂಡ ಘಟನೆ ಮಾಲ್ವೆತಾದಲ್ಲಿ ನಡೆದದ್ದು. ಸೊಲೊಮನ್ ದ್ವೀಪಗಳಲ್ಲಿ ಅದು ತೀರ ಕಾಡುಮಟ್ಟದ್ದು. ಮೂಲನಿವಾಸಿಗಳು ಬಹಳ ಗೆಳೆತನ ಕಾಣಿಸುತ್ತಿದ್ದರು; ನಮಗೇನು ಗೊತ್ತು. ಹೇಗೆ ಗೊತ್ತಾಗಬೇಕು? ಎರಡು ವರ್ಷಗಳಿಂದಲೂ ಈ ಹಳ್ಳಿಯ ಜನ ವರ್ಗಣಿ ಒಟ್ಟು ಹಾಕಿ, ಒಬ್ಬ ಒಳ್ಳೆಯ ತಲೆಯನ್ನು ಕೊಂಡುಕೊಳ್ಳಲು ಹಣ ಶೇಖರಿಸುತ್ತಿದ್ದರೆಂದು ಈ ವಾಸಿಗಳೆಲ್ಲಿ ತಲೆಹೋಕರು ಅವರು ಒಳ್ಳೆಯತನ ತಲೆಯನ್ನು ಹೆಚ್ಚಾಗಿ ಮೆಚ್ಚುವವರು. ಈ ತಲೆ ವಶಪಡಿಸಿಕೊಂಡವರಿಗೆ ಅದೆಲ್ಲ ವರ್ಗಣಿ ಸಿಗುತ್ತಿತ್ತು? ನಾನು ಅಂದಂತೆ ಅವರು ಬಹಳ ಗೆಳೆಯರಂತೆ ಕಾಣಿಸಿಕೊಂಡರೂ ಮತ್ತು ಈ ದಿನ ನಾನು

ದೋಣಿಯಿಂದ ೧೦೦ ಗಜ ದೂರ ದಂಡೆಯ ಮೇಲೆ ಇದ್ದೆ. ಜವಾನನಾಗಿ ಎಚ್ಚರಿಕೆ ಕೊಟ್ಟಿದ್ದೆ. ಮತ್ತು ವಾಡಿಕೆಯಂತೆ ಅವನನ್ನು ಲೆಖ್ಖಿಸದೆ ನಾನು ದುಃಖಕ್ಕೆ ಒಳಗಾದೆನು.

ನನಗೆ ಮೊದಲು ಗೊತ್ತಾದದ್ದು ಜವಳು ನೆಲದ ಸುಂದರ ಬನಗಳ ಪೊದೆಗಳೊಳಗಿದ್ದ ಬರ್ಚಿಗಳ ಒಂದು ಕಾರ್ಮುಗಿಲಿನಂಥ ಗುಂಪು ನನ್ನ ಕಡೆಗೆ ನುಗ್ಗಿ ಬಂದಿತು. ಕನಿಷ್ಠ ಹನ್ನೆರಡು ನನ್ನಲ್ಲಿ ನಾಟಿದ್ದವು; ನಾನು ಕೂಡಲೇ ಓಡಲು ಆರಂಭಿಸಿದನು. ಆದರೆ. ನನ್ನ ಕಣಿಗಾಲಿನಲ್ಲಿ ತಿವಿದು ಕೂತ ಒಂದು ಬರ್ಚಿಯ ಅಲಗಿನ ಮೇಲೆ ಎಡವಿಬಿದ್ದು ನಾನು ಮುಗ್ಗರಿಸಿದೆನು. ಆಗ ಆ ಉಣ್ಣೆ ತಲೆಯವರು ನನ್ನ ಕಡೆಗೆ ಧಾವಿಸಿಬಂದರು. ಪ್ರತಿಯೊಬ್ಬನು ಉದ್ದ ಹಿಡಿಕೆಯ ಒಂದು ರಣಗೊಡಲಿ ಜಳಪಿಸುತ್ತಿದ್ದ, ನನ್ನ ತಲೆ ಕಡಿದ ಶಾಗೆಯಲಿಕ್ಕೆ ಆ ಪಾರಿತೋಷಕ ಪಡೆಯುವ ಕುತೂಹಲದಲ್ಲಿ ಅವರು ಒಬ್ಬರಿಗೊಬ್ಬರು ಅಡ್ಡ ಬಂದು ತಡಕಾದರು. ಆ ಗೊಂದಲದಲ್ಲಿ ನಾನು ಎಡಬಲಕ್ಕೆ ಉಸುಬಿನಲ್ಲಿ ಹೊರಳಾಡಿ ಹಲವು ಕಡಿತಗಳನ್ನು ತಪ್ಪಿಸಿಕೊಂಡೆ.

ಓಟು ಆಗ ಬಂದು ಮುಟ್ಟಿದ. ಮಂದಿಯನ್ನು ಮರ್ಧನ ಮಾಡುವ ಪುಂಡ ಓಟು ಹೇಗೋ ಅವನು ಒಂದು ರಣಗದೆಯನ್ನು ಎತ್ತಿಕೊಂಡು ಬಂದಿದ್ದ. ಹತ್ತಿರದಿಂದ ಬಳಸಿದಲ್ಲಿ ರೈಫಲ್ಲಿಗಿಂತ ಇದು ಹೆಚ್ಚು ಪರಿಣಾಮಕಾರಿಯಾದ ಆಯುಧವಾಗಿತು. ಅವನು ಆ ಜನರ ನಟ್ಟ ನಡುವೆಯೇ ಒಳ ನುಗ್ಗಿದನು. ಆದ್ದರಿಂದ ಅವರು ಅವನನ್ನು ಬರ್ಚಿಯಿಂದ ತಿವಿಯುವಂತೆ ಇದ್ದಿಲ್ಲ. ಅವರ ರಣಕೊಡಲಿಗಳಂತೂ ನಿರುಪಯೋಗಕ್ಕಿಂತ ಕೀಳಾಗಿದ್ದವು. ಆತ ನನ್ನ ಪರವಾಗಿ ನನಗಾಗಿ ಹೋರಾಡುತ್ತಿದ್ದ ಹಳೆಯ ಕಾಡುಕಲಿಗಳಿಗೊಪ್ಪುವ ಪ್ರಚಂಡ ಕೋಪಾಟೋಪ ಅವನದಾಗಿತ್ತು. ಆ ಗದೆಯನ್ನು ಎತ್ತಿಬೀಸುವ ಠೀವಿಯೇ ಅವನದು ಅತ್ಯದ್ಭುತವಾಗಿತ್ತು. ಆ ಸುತ್ತು ಬೀಸಿನ ಪೆಟ್ಟುಗಳಿಗೆ ಆ ಜನರ ತಲೆಗಳು ಹಳಸಿದ ಕಿತ್ತಳೆಯ ಹಣ್ಣುಗ್ಗಳಂತೆ ಒಡೆದವು. ಅವರನ್ನು ಹಿಮ್ಮೆಟ್ಟಿಸಿ, ನನ್ನನ್ನು ತೋಳುಗಳಲ್ಲಿ ಹಿಡಿದೆತ್ತಿ ಓಡಲಿಕ್ಕೆ ಆರಂಭ ಮಾಡಿದಾಗಲೇ ಅವನಿಗೆ ಮೊದಲನೆಯ ಗಾಯ ಉಂಟಾಯಿತು. ನಾಲ್ಕು ಬರ್ಚಿಯ ಗಾಯಗಳೊಂದಿಗೆ

ಆತ ದೋಣಿಗೆ ಮರಳಿದ. ಮತ್ತು ತನ್ನ ವಿಂಚೆಷ್ಟರ ಎತ್ತಿಕೊಂಡು ಒಂದೊಂದು ಗುಂಡಿಗೆ ಒಬ್ಬೊಬ್ಬ ಗಂಡಸಿನ ಬಲಿ ತೆಗೆದುಕೊಂಡ. ಆನಂತರವೇ ನಾವು ಹಡಗಕ್ಕೆ ಹೋಗಿ ವೈದ್ಯಕೀಯ ಚಿಕಿತ್ಸೆ ಮಾಡಿಕೊಂಡೆವು. ಹದಿನೇಳು ವರ್ಷ ನಾವು ಕೂಡಿಯೇ ಇದ್ದೆವು. ಅವನು ನನ್ನನ್ನು ಆದರ್ಶ ವ್ಯಕ್ತಿಯನ್ನಾಗಿ ಮಾರ್ಪಡಿಸಿದನು. ಅವನಲ್ಲದಿದ್ದರೆ ಇಂದಿಗೆ ನಾನು ಹಡಗದ ಮೇಲಿನ ಮ್ಹಾಲಿನ ಮೇಲ್ವಿಚಾರಕನೇ "ಸೇರೋಗಾರನೊ" ಅಥವಾ ಒಂದು ನೆನಪಾಗಿಯೇ ಉಳಿಯುತ್ತಿದ್ದೆ.

"ನೀವು ಹಣ ವೆಚ್ಚಮಾಡುವಿರಿ; ಮತ್ತು ಹೊರಗೆ ಹೋಗಿ ಮತ್ತೆ ಹೆಚ್ಚು ಗಳಿಸುವಿರಿ" ಆತ ನನಗೆ ಒಂದು ದಿನ ಅಂದ. "ಈಗ ಹಣಗಳಿಸುವದು ಅಷ್ಟು ಕಷ್ಟವಲ್ಲ. ಆದರೆ ನೀವು ಮುದುಕರಾದ ಮೇಲೆ ನಿಮ್ಮ ಹಣವೆಲ್ಲ ವೆಚ್ಚವಾಗಿ ಹೋಗುವದು. ಆಗ ನೀವು ಹೊರಗೆ ಹೋಗಿ ಮತ್ತೆ ಹಣ ಗಳಿಸವದು ಶಕ್ಯವಿಲ್ಲ. ನನಗೆ ಗೊತ್ತು ನನ್ನೊಡೆಯ, ಬಿಳಿಯ ಮಂದಿಯ ರೀತಿಗಳನ್ನೆಲ್ಲ ನಾನು ನೋಡಿ ತಿಳಿದಿದ್ದೇನೆ. ದಂಡೆಗಳ ಮೇಲೆ ಎಷ್ಟೋ ಮುದುಕರಿದ್ದಾರೆ; ಅವರು ಹಿಂದೊಮ್ಮೆ ತರುಣರಾಗಿದ್ದರು; ಆಗ ನಿಮ್ಮಂತೆಯೇ ಹಣ ತರಬಲ್ಲವರಾಗಿದ್ದರು. ಆದರೆ ಈಗ ಅವರು ಮುದುಕರಾಗಿದ್ದಾರೆ. ಈಗ ಯಾವ ಕೆಲಸಕ್ಕೂ ಬಾರದವರಾಗಿದ್ದಾರೆ. ಈಗ ನಿಮ್ಮಂಥ ತರುಣರು ದಂಡೆಗೆ ಬಂದಾಗ ತಮಗೇನಾದರೂ ಕುಡಿಯಲು ಕೊಂಡುಕೊಡುವರೆಂದು ಅವರು ಕಾಯುತ್ತ ಇರುತ್ತಾರೆ."

"ಆ ಕಪ್ಪು ಹುಡುಗ (ನಿಗ್ರೋ ಹುಡುಗ) ಒಂದು ತೋಟದಲ್ಲಿ ಗುಲಾಮನಾಗಿದ್ದಾನೆ. ಅವನಿಗೆ ವರ್ಷಕ್ಕೆ ಇಪತ್ತು ಡಾಲರು ಸಿಗುತ್ತದೆ. ಅವನು ಮೈ ಮುರಿದು ದುಡಿಯುತ್ತಾನೆ. ಅವನ ಮೇಲಧಿಕಾರಿ ಅಷ್ಟು ಚನ್ನಾಗಿ ಕೆಲಸ ಮಾಡುವದಿಲ್ಲ. ಅವನು ಒಂದು ಕುದುರೆಯನ್ನೇರಿ ಆ ಹುಡುಗ ಕೆಲಸ ಮಾಡುವದನ್ನು ನೋಡಿಕೊಳ್ಳುತ್ತಾನೆ. ಆದರೆ ಅವನಿಗೆ ವರ್ಷಕ್ಕೆ ಹದಿನೆರಡು ನೂರು ಡಾಲರು ಸಿಗುತ್ತವೆ. ನಾನು ಹಡಗದ ಕೂಲಿಯಾಳು. ತಿಂಗಳಿಗೆ ಹದಿನೈದು ಡಾಲರು ಸಂಬಳ. ಏಕಂದರೆ

ನಾನು ಒಬ್ಬ ಒಳ್ಳೆ ಚಾಕರಿಯವನು; ನಾನು ಚನ್ನಾಗಿ ದುಡಿಯುತ್ತೇನೆ. ಕ್ಯಾಪ್ಟನ್ನನಿಗೆ ತಂಪಿಗಾಗಿ ಇಮ್ಮಡಿಗೆಯ ಚಪ್ಪರವಿರುತ್ತದೆ. ಉದ್ದುದ್ದ ಸೀಸೆಗಳೊಳಗಿಂದ ಆತ ಬೀರ ಕುಡಿಯುತ್ತಾನೆ. ಆತ ಒಂದು ಹುಟ್ಟು ಎತ್ತಿದ್ದಾಗಲಿ, ಹಗ್ಗ ಜಗ್ಗಿದ್ದಾಗಲೀ ಜಲ್ಲು ಎಳೆದದ್ದಾಗಲಿ ನಾನು ಕಂಡಿದ್ದಿಲ್ಲ. ಆದರೆ ಅವನಿಗೆ ತಿಂಗಳಿಗೆ ನೂರೈವತ್ತು ಡಾಲರು. ನಾನು ಸೇವಕ ಆತ ನಾವಿಕನೇ ನನ್ನೊಡೆಯ, ನೀವು ನಾವಿಕತನ ಕಲಿತುಕೊಂಡರೆ ಬಹಳ ಒಳಿತಾದೀತು ನೋಡಿ."

ಓಟು ನನ್ನನ್ನು ಅದಕ್ಕಾಗಿ ಒತ್ತಾಯಪಡಿಸಿದನು. ಅಂಕುಶವಿಟ್ಟು ದೂಡಿದನು. ನನ್ನದೇ ಮೊದಲನೆಯ ಹಡಗದಲ್ಲಿ ಓಟು ಎರಡನೇ ಚಾಲಕನಾಗಿ ನಡೆದನು. ಅವನು ನನ್ನ ಕ್ಯಾಪ್ಟನ್ನಿಕೆಯ ಕಟ್ಟಳಿಕೆಯ ಬಗ್ಗೆ ನನಗಿಂತಲೂ ಹೆಚ್ಚು ಹೆಮ್ಮೆ ಪಟ್ಟುಕೊಳ್ಳುತ್ತಿದ್ದ ಮುಂದೆ ನಡೆದದ್ದು ಹೀಗೆ.

"ಕ್ಯಾಪ್ಟನ್ನನಿಗೆ ಒಳ್ಳೇ ಸಂಬಳ ನನ್ನೊಡೆಯ. ಆದರೆ ಹಡಗ ಅವನ ವಶದಲ್ಲಿ ಇರುತ್ತದೆ ಅಷ್ಟೆ! ಅದರ ಹೊಣೆಯ ಹೊರೆಯಿಂದ ಆತ ಎಂದೂ ಬಿಡುಗಡೆ ಪಡುವದಿಲ್ಲ. ಹೆಚ್ಚು ಪ್ರಾಪ್ತಿ ಪಡೆಯುವವನು ಹಡಗದ ಒಡೆಯ. ದಂಡೆಯಲ್ಲಿಯೇ ತನ್ನ ಆಳು ಹೋಳುಗಳ ನಡುವೆ ಕುಳಿತು ಹಣವನ್ನು ಚಲಾಯಿಸುತ್ತಿರುತ್ತಾನೆ."

"ನಿಜ ಆದರೆ ಒಂದು ಹಡಗಕ್ಕೆ ಅದು "ಸ್ಕೂನರ" ಮಾದರಿಯ ಇಂಥ ಹಡಗಕ್ಕೆ ಅದೂ ಹಳೆಯ "ಸ್ಕೂನರಿ"ಗೆ ಐದು ಸಾವಿರ ಡಾಲರು ಬೆಲೆ ಬೀಳುತ್ತದೆ" ನಾನು ಅಕ್ಷೇಪಿಸಿದೆ. "ಐದು ಸಾವಿರ ಡಾಲರು ಉಳಿಸುವನಕ ನಾನು ಹಣ್ಣು ಮುದುಕನಾದೇನು."

"ಆದರೆ ಹಣ ಮಾಡಲಿಕ್ಕೆ ಬಿಳಿಮಂದಿಗೆ ಅಡ್ಡದಾರಿಗಳು ಬಹಳ ಇವೆ" ಅಂದ ಓಟು ತೆಂಗಿನ ಸಾಲುಗಳು ಸುತ್ತುನಿಂತ ದಂಡೆಯತ್ತ ಕೈಮಾಡಿ ತೋರಿಸುತ್ತ,

ಆ ಸಮಯ ನಾವು ಸೊಲೊಮನ್ ದ್ವೀಪಗಳಲ್ಲಿ ಇದ್ದೆವು. ಗ್ವಡಾಲಕಾನಲದ ಪೂರ್ವ ದಂಡೆಗುಂಟ ಹಸ್ತಿದಂತದ ಮಾಲು ಹೇರಿಕೊಳ್ಳುತ್ತ ಸಾಗಿದ್ದವು.

"ಈ ನದಿಯ ಮತ್ತು ಮುಂದಿನ ಇನ್ನೊಂದರ ಅಳಿವೆಗಳ ನಡುವಿನಂತರ ಎರಡು ಮೈಲು. ಸಮತಳ ಬಯಲು ಹಿಂದಕ್ಕೆ ಹಚ್ಚಿದ. ಈ ಸಲ ಅದಕ್ಕೆ ಬೆಲೆಯಿಲ್ಲ. ಬರುವ ವರುಷ-ಯಾರಿಗೆ ಗೊತ್ತು? ಆಥವಾ ಆ ಮುಂದಿನ ವರ್ಷ ಮಂದಿ ಈ ಭೂಮಿಗಾಗಿ ಬಹಳ ಹಣ ತೆರುವರು. ಇಲ್ಲಿ ಲಂಗರು ಹಾಕಲು ಅನುಕೂಲ ಒಳ್ಳೆಯದಿದೆ. ದೊಡ್ಡ ಹಡಗಗಳೂ ಹತ್ತಿರಕ್ಕೆ ನಿಲ್ಲಬಹುದು. ಇಲ್ಲಿಂದ ನಾಲ್ಕು ಮೈಲು ಒಳವರೆಗಿನ ಭೂಮಿಯನ್ನು ಇಲ್ಲಿಯ ಒಡೆಯ ಸರದಾರನಿಂದ ಹತ್ತು ಸಾವಿರ ಹೊಗೆಸೊಪ್ಪಿನ ದಂಟು, ಹತ್ತು ಸೀಸೆ ಸರಾಯಿ, ಒಂದು ಬಿರಿದು ತುಂಬುವ ಸ್ನಿಂದರ ಕೋವಿ, ಇಷ್ಟಕ್ಕೆ ಕೊಂಡುಕೊಳ್ಳಬಹುದು. ಇವಿಷ್ಟಕ್ಕೆ ನಿಮಗೆ ಹೆಚ್ಚೆಂದರೆ ಒಂದು ನೂರು ಡಾಲರು ಬಿದ್ದೀತು. ಆದ್ದರಿಂದ ನೀವು ಈ ಕ್ರಯದ ಕರಾರು ನಾವೇ ಕಮಿಶನರರ ಹತ್ತಿರ ಒಪ್ಪಿಸಿಡಿರಿ. ಬರುವ ವರ್ಷ ಇಲ್ಲವೇ ಮರುವರ್ಷ ಇದನ್ನು ಮಾರಿ ಒಂದು ಹಡಗದ ಒಡೆಯರಾಗಬಹುದು."

ನಾನು ಓಟುವಿನ ಸಲಹೆಯಂತೆ ನಡೆದೆ; ಮತ್ತು ಅವನ ಮಾತು ಎರಡಲ್ಲ ಮೂರು ವರ್ಷಗಳಲ್ಲಿ ನಿಜವಾಯಿತು. ಅನಂತರ ಮಾಡಿದ್ದು ಗ್ವುಡಾಲ ಕಾನಾಲದಲ್ಲಿಯ ಹುಲ್ಲುಗಾವಲಿನ ಆಚೆ ಇಪ್ಪತ್ತು ಸಾವಿರ ಎಕರೆ ೯೯೦ ವರ್ಷದ ಸರಕಾರಿ ಲಾವಣಿಯ ಮೇಲೆ. ಅದು ಹೆಸರಿಗೆ ಮಾತ್ರ ಲಾವಣಿಯ ರಕಮು ತೆತ್ತು ನಿಜವಾಗಿಯೂ ಈ ಲಾವಣಿಯ ಹಕ್ಕು ನಾನು ಸರಿಯಾಗಿ ತೊಂಬತ್ತು ದಿನ ಮಾತ್ರ ಭೋಗಿಸಿದೆ. ಅದರ ಕೊನೆಗೆ ನನ್ನ ಈ ಹಕ್ಕನ್ನು ಅರ್ಧ ದ್ರವ್ಯಕ್ಕೆ ಒಂದು ಕಂಪನಿಗೆ ಮಾರಿದೆ. ಇಂಥ ಸಾಟೆಗಳಲ್ಲಿ ಯಾವಾಗಲು ಇದಿರಿಗೆ ದೂರ ನೋಡಿ ಸಂಧಿ ಸಾಧಿಸುವ ಸೂಚನೆ ಕೊಡುವವ ಓಟು ಆಗಿದ್ದ. ಒಂದು ಮುಳುಗಿ ಮೇಲ್ದೆಗೆದ ಹಡಗ 'ಡೊಂಕ್ಯಾಸ್ಟರ' ಎಂಬುದನ್ನು ಲಿಲಾವಿನಲ್ಲಿ ನೂರು ಪೌಂಡುಗಳಿಗೆ ಕೊಂಡು ಅದರ ಎಲ್ಲ ವೆಚ್ಚ ತೆತ್ತು ಮೂರು ಸಾವಿರ ನಗದಿ ಲಾಭ

ಪಡೆಯುವಂತೆ ಮಾಡಿದ್ದರ ಹೊಣೆಗಾರಿಕೆ ಅವನದೇ ಸರಿ. ಅವನೇ ನನ್ನನ್ನು ಸವಾಯಿ ತೋಟದುದ್ದಿಮೆಗೂ, ವಿಪ್ಪೇಲುವಿನ 'ಕೊಕಾ' ವ್ಯಾಪಾರದ ಸಾಹಸಕ್ಕೂ ಒಡ್ಡಿದನು.

ಹಿಂದಿನ ದಿನಗಳಂತೆ ನಾವು ಕಡಲ ಪಯಣಕ್ಕೆ ಈಗ ಹೋಗುತ್ತಿದ್ದಿಲ್ಲ. ನಾನು ಅಷ್ಟು ಸಂಪನ್ನನಾಗಿಬಿಟ್ಟಿದ್ದೆ. ಮದುವೆಯೂ ಆಗಿದ್ದೆ. ನನ್ನ ಜೀವನದ ಮಟ್ಟ ಏರಿಬಿಟ್ಟಿದೆ. ಆದರೆ ಓಟು ಆತ ಹಳೆಯ ಕಾಲದ ಓಟುವೆ ಆಗಿದ್ದ. ಮನೆಯಲ್ಲಿ ಒಳಹೊರಗೆ ಸುಳಿದಾಡುತ್ತ ಕಚೇರಿಯ ಕೊಟಡಿಗಳಲ್ಲಿ ನನ್ನನ್ನು ಹಿಂಬಾಲಿಸುತ್ತ ಬಾಯಲ್ಲಿ ಮರದ ಚಿಲುಮೆ ಇರಿಸಿಕೊಂಡು ಕಡಿಮೆ ಬೆಲೆಯ ಅಂಗಿಯನ್ನು ತೊಟ್ಟುಕೊಂಡು ನಾಲ್ಕು ಶಿಲಿಂಗಿನ ಒಂದು ಮೊಣಕಾಲು ಮಟ್ಟದ ಲುಂಗಿಯನ್ನು ಸೊಂಟಕ್ಕೆ ಸುತ್ತಿಕೊಳ್ಳುತ್ತಿದ್ದ. ಹಣ ವೆಚ್ಚ ಮಾಡಲು ಅವನನ್ನು ತರಬೇತಿಗೊಳಿಸಲು ನನ್ನಿಂದ ಆಗಲೇ ಇಲ್ಲ. ಪ್ರೀತಿಯಿಂದಲ್ಲದೆ ಅವನಿಗೆ ಪ್ರತ್ಯುಪಕಾರ ಮಾಡುವ ಬೇರೆ ಮಾರ್ಗವಿದ್ದಿರಲಿಲ್ಲ. ಮತ್ತು ಆ ಪ್ರೀತಿ ನಮ್ಮಲ್ಲಿಂದ ಅವನಿಗೆ ದೊರೆಯುತ್ತಿದ್ದುದಕ್ಕೆ ಭಗವಂತನೇ ಸಾಕ್ಷಿ. ನನ್ನ ಮಕ್ಕಳು ಅವನನ್ನು ಪೂಜಿಸುತ್ತಿದ್ದರೆಂದರೆ ತಪ್ಪಾಗಲಿಕ್ಕಿಲ್ಲ. ಅವನನ್ನು ಮುದ್ದುಗೆಡಿಸುವದು, ಸಲುಗೆಯಿಂದ ಬುದ್ಧಿಗೆಡಿಸುವದು ಶಕ್ಯವಿದ್ದರೆ ನನ್ನ ಹೆಂಡತಿ ನಿಜವಾಗಿಯೂ ಅವನ ನಾಶಕ್ಕೆ ಕಾರಣವಾಗುತ್ತಿದ್ದಳು.

ನನ್ನ ಮಕ್ಕಳು! ವ್ಯಾವಹಾರಿಕ ಪ್ರಪಂಚದಲ್ಲಿ ಹೆಜ್ಜೆ ಇಡುವದು ಹೇಗೆಂದು ತೋರಿಕೊಟ್ಟವನು ಅವನೇ. ಅವರಿಗೆ ನಡೆಯಲು ಕಲಿಸಿದವನು ಅವನೇ. ಅವರು ಕಾಯಿಲೆ ಬಿದ್ದಾಗಲೆಲ್ಲ ಅವನೆ ಬಳಿಯಲ್ಲಿ ಕಾದು ಕುಳಿತು ಉಪಚರಿಸುವಾತ. ಅವರನ್ನು ಕೋಡಿಗೆ ಒಯ್ದು ನೀರ್ನೆಲ ಜಂತುಗಳಾಗಿ ಮಾಡಿದವನೂ ಅವನೇ. ನಾನು ತಿಳದಿದ್ದಕ್ಕಿಂತ ಎಷ್ಟೋ ಪಾಲು ಹೆಚ್ಚು ಅವನು ನನ್ನ ಮಕ್ಕಳಿಗೆ ಮೀನಗಳ ಚಟಗಳ ಕುರಿತು ಅವುಗಳನ್ನು ಒಡಿಯುವದನ್ನು ಕುರಿತು ಅವನೇ ಕಲಿಸಿದವನು. ಕಿರಿಗಾಡಿನಲ್ಲಿಯೂ ಇದೇ ಕತೆ. ಏಳು ವರ್ಷ ಪ್ರಾಯಕ್ಕೆ ನಮ್ಮ ಟೋಮನಿಗೆ ಗೊತ್ತಾದಷ್ಟು ವನ್ಯವಿದ್ಯೆ ಇರುವದೆಂದು ಕೂಡ ಸಾನು ಕನಸಿನಲ್ಲಿಯೂ ಎಣಿಸಿದ್ದಿಲ್ಲ. ಆರು ವರ್ಷದ

ಮೇರಿ ಜಾರುಬಂಡೆಯ ಮೇಲೆ ಯಾವ ನಡುಕವಿಲ್ಲದೇ ಹಾದುಹೋಗುತ್ತಿದ್ದಳು. ಆ ಕೆಲಸಕ್ಕೆ ಗಟ್ಟಿಗರು ಹಿಂಜರಿಯುವದನ್ನು ನಾನು ನೋಡಿದ್ದೇನೆ. ನಮ್ಮ ಪ್ರ್ಯಾಂಕ ಆರು ವರ್ಷ ವಯಸ್ಸು ದಾಟಿದ ಕೂಡಲೇ ಮೂರು ಆಳು ನೀರಿನೊಳಗಿಂದ ಶಿಲಿಂಗುಗಳನ್ನು ಹೆಕ್ಕಿ ತರಹತ್ತಿದ.

“ಬೋರಾಬೋರಾದಲ್ಲಿಯ ನಮ್ಮ ಜನರಿಗೆಲ್ಲ ನನ್ನಂಥ ಪಾಮರ ಇಲ್ಲವೇ ಪಾಷಂಡಿ ಸೇರುವದಿಲ್ಲ. ಅವರೆಲ್ಲ ಕ್ರೈಸ್ತರು, ಮತ್ತು ನನಗೂ ಆ ಬೋರಾಬೋರದ ಕ್ರೈಸ್ತರು ಸೇರುವುದಿಲ್ಲ.” ಆತ ಒಂದು ದಿನ ಅಂದನು, ಅವನದೇ ಹಕ್ಕಿನದಾದ ಕೆಲವು ಹಣವನ್ನು ವಿನಿಯೋಗಿಸಲು ಒಂದು ದಾರಿ ಅವನಿಗೆ ಹೇಳಿಕೊಡುತ್ತಿದ್ದೆ. ನಮ್ಮದೊಂದು ಹಡಗದಲ್ಲಿ ಅವನ ಮನೆಯ ದ್ವೀಪಕ್ಕೆ ಭೆಟ್ಟಿಕೊಡಲು ಅವನ ಮನಸೋಲಿಸುತ್ತಿದ್ದೆ. ಅವನ ಬದುಕಿನಲ್ಲಿಯೇ ದೊಡ್ಡ ದುಂದಿನ ವೆಚ್ಚವಾಗಲೆಂದು ಆಶಿಸಿ ಆ ಕಡಲ ಪರ್ಯಟನವನ್ನು ಸೂಚಿಸಿದ್ದೆ. ಆದರೆ ಅದಕ್ಕೆ ಆತ ಹಾಗೆ ಅಂದನು.

“ನಮ್ಮ ಹಡಗುಗಳಲ್ಲಿ ಒಂದು” ಎಂದು ನಾನಂದೆ. ಆದರೆ ಕಾಯಿದೆಯ ಕಟ್ಟುಮಾತಿನಲ್ಲಿ ಅವು ಆ ಕಾಲಕ್ಕೆ ನನ್ನವಾಗಿದ್ದವು. ಒಡೆತನದಲ್ಲಿ ಪಾಲುಗಾರನಾಗಲು ಅತನನ್ನು ಒಲಿಸಲು ನಾನು ಬಹುಕಾಲ ಪರಿಯಂತರ ಹೆಣಗಾಡಿದೆ.

“ಪೆತೀತಜೀನೆ” ಕಡಲ ತಳಕ್ಕೆ ಹೋದಂದಿನಿಂದ ನಾವಿಬ್ಬರೂ ಪಾಲುಗಾರರೇ ಆಗಿದ್ದೇವೆ. ಅವನು ಕೊನೆಗೂ ಹೇಳಿದ, “ಅದರೆ ನಿಮ್ಮ ಹೃದಯ ಹಾಗೆಯೇ ಒತ್ತಾಸೆಪಡುತ್ತಿದ್ದರೆ ನಾವು ಕಾಯಿದೆಯಂತೆ ಪಾಲುಗಾರರಾಗೋಣ. ನನಗೆ ಮಾಡಲು ಯಾವ ಕೆಲಸವೂ ಈಗ ಉಳಿದಿಲ್ಲ. ಆದರೂ ನನ್ನ ವೆಚ್ಚ ಬಳಿಕೆ ವಿಪರೀತ. ನಾನು ಕುಡಿಯೋದು, ತಿನ್ನೋದು, ಸೇದಿ ಹೊಗೆ ಹಾರಿಸುವುದು ಎಲ್ಲ ಬಹಳ ವೆಚ್ಚದ್ದು. ನನಗೆ ಗೊತ್ತು, ಬಿಲಿಯಾರ್ಡ ಆಟಕ್ಕಾಗಿ ನಾನು ಬಿಡಿಕಾಸು ತೆರುವದಿಲ್ಲ ಯಾಕಂದರೆ ನಾನು ನಿಮ್ಮ ಮೇಜಿನ ಮೇಲೆ ಆಟ ಆಡುತ್ತೇನೆ; ಆದರೂ ನನ್ನ ಹಣ ಹೋಗುತ್ತದೆ. ಹವಳದ ಒಡ್ಡುಗಳ ಮೇಲೆ ಮೀನ ಹಿಡಿಯುವದು ಬರೇ ಸಿರಿವಂತರ ವಿಲಾಸ. ಗಾಳಿ ಮತ್ತು

ಗಾಳದ ಹುರಿಯ ಬೆಲೆ ದಂಗುಬಡಿಸುವಷ್ಟು ಭಾರಿ ನಿಜ. ನಾವು ಕಾಯಿದೆಯಿಂದ ಮೀನುಗಾರರಾಗಬೇಕು. ನಿಜ, ಅದು ಅವಶ್ಯ, ನನಗೆ ಹಣ ಬೇಕು. ಕಚೇರಿಯಲ್ಲಿಯು ಹಿರಿಯ ಕಾರಕೂನನಿಂದ ನಾನು ಅದನ್ನು ತೆಗೆದುಕೊಳ್ಳುತ್ತೇನೆ."

ಆದ್ದರಿಂದ ಕಾಗದ ಪತ್ರಗಳನ್ನು ಸಿದ್ಧಮಾಡಲಾಯಿತು. ಕರಾರು ಮಾಡಲಾಯಿತು. ಒಂದು ವರ್ಷದ ನಂತರ ನಾನು ದೂರಿಕೊಳ್ಳಲೇಬೇಕಾಗಿ ಬಂತು.

"ಚಾರ್ಲಿ" ನಾನೆಂದೆ "ದುಷ್ಟ ಮುದಿ ಮೋಸಗಾರ ನೀನು. ತೀರ ಕ್ಷುದ್ರ, ಜಿಪುಣ, ಚಿಗಳಿ, ನೆಲದ ಏಡಿ. ನೋಡು ನಮ್ಮ ಎಲ್ಲ ಪಾಲುಗಾರಿಕೆಯ ವ್ಯವಹಾರಗಳಲ್ಲಿ ಈ ವರ್ಷದ ನಿನ್ನ ಪಾಲು ಸಾವಿರಗಟ್ಲೆ ಡಾಲರು. ನಮ್ಮ ಹಿರಿ ಕಾರಕೂನ ಈ ಕಾಗದ ಕೊಟ್ಟಿದ್ದಾನೆ. ಅದು ಹೇಳುವದೇನು ಗೊತ್ತೇ? ಈ ವರ್ಷವಿಡಿ ನೀನು ಪಡಕೊಂಡದ್ದು ಬರೇ ಎಂಬತ್ತೇಳು ಡಾಲರು. ಮತ್ತು ಇಪ್ಪತ್ತು ಸಂಟು."

"ನನಗೇನು ಮತ್ತೆ ಸಲ್ಲತಕ್ಕದ್ದಿದೆಯೇ?" ಆತ ಚಿಂತಾತುರನಾಗಿ ಕೇಳಿದ.

"ನಾನೆಂದೆನಲ್ಲವೆ! ಸಾವಿರ ಸಾವಿರಗಟ್ಟೆ ಡಾಲರು" ನಾ ಹೇಳಿದೆ.

ಅವನ ಮೋರೆ ಬೆಳ್ಳಗಾಯಿತು. ಯಾವುದೊ ಮಿಗಿಲಾದ ಸಮಾಧಾನದ ಭಾವದಿಂದ "ಸರಿ, ಇದು ಒಳ್ಳೆಯದೇ ಆಯಿತು." ಆತ ಅಂದ, "ಹಿರಿ ಕಾರಕೂನ ಆ ರಕಮಿನ ಲೆಖ್ಖ ಸರಿಯಾಗಿ ಇಡುವಂತೆ ನೋಡಿಕೊಳ್ಳಿ. ನನಗೆ ಬೇಕೆನಿಸಿದಾಗ ತೆಗೆದುಕೊಂಡೇನು."

"ಮತ್ತು ಆಗ ಒಂದು ಸೆಂಟು ಕಾಣೆಯಾಗಿರಬಾರದು. ಹಾಗೆ ಕಾಣಿಸಿದರೆ" ಅವನು ಭಯಂಕರವಾಗಿ ಗದ್ದರಿಸಿದ, "ಆ ಕಾರಕೂನನ ಸಂಬಳದಿಂದ ಅದನ್ನು ತುಂಬಿಕೊಡಬೇಕು."

ಹೀಗೆಲ್ಲ ಗದ್ದರಿಸುತ್ತಿರುವಾಗ ಅವನ ಮೃತ್ಯುಪತ್ರ - ನನಗೆ ಇದು ಆನಂತರ ತಿಳಿದುಬಂತು- ಅವನು ಏಕಮೇವ ಉತ್ತರಾಧಿಕಾರಿಯಾಗಿ ನನ್ನನ್ನೇ ನೇಮಿಸಿದ ಮೃತ್ಯುಪತ್ರ - ಅಮೇರಿಕನ್ ವಕೀಲರ ಉಕ್ಕಿನ ಬೀರಿನಲ್ಲಿ ಭದ್ರವಾಗಿದ್ದಿತು.

ಆದರೆ ಕೊನೆ ಬಂತು. ಎಲ್ಲ ಮಾನವೀ ಸಹವಾಸ ಸಂಬಂಧಗಳಿಗೆ ಬರಲೇಬೇಕಲ್ಲ! ಅದು ಸೋಲೊಮನ್ ದ್ವೀಪಗಳಲ್ಲಿ ಒದಗಿ ಬಂತು. ನಮ್ಮ ಬೇತಾಳ ಯೌವನದ ದಿನಗಳಲ್ಲ ಕಡು ಬೇತಾಳ ಕೃತ್ಯಗಳನ್ನು ಮಾಡಿದ ರಂಗ, ಆ ದ್ವೀಪಸಮೂಹ. ಈಗ ಅಲ್ಲಿ ಹೋದುದು ಮುಖ್ಯವಾಗಿ ಸೂಟಿಯ ಸೊಗಸಿಗಾಗಿ ಜೊತೆಗೆ ಅಲ್ಲಿ ಫ್ಲೋರಿಡಾ ದ್ವೀಪದಲ್ಲಿಯ ನಮ್ಮ ಆಸ್ತಿಗಳನ್ನು ನೋಡಿಕೊಂಡು ಬರಲಿಕ್ಕೂ ಮೂಲಿಪಾಸುದೊಳಗಿನ ಮುತ್ತಿನ ಹೆಕ್ಕುವಿಕೆಯ ಶಕ್ಯಾಶಕ್ಯತೆಯ ವಿಚಾರಕ್ಕೂ ಅಹುದು. 'ಸಾವೂ' ಎಂಬಲ್ಲಿ ನಾವು ಲಂಗರ ಊರಿದ್ದೆವು. ಅಲ್ಲಿಯ ವಿಚಿತ್ರ ವಸ್ತುವಿಶೇಷಗಳ ವಿಕ್ರಯಕ್ಕಾಗಿ.

'ಸಾವು' ಶಾರ್ಕ ಮೀನುಗಳಿಂದ ಕಿಕ್ಕಿರಿದ ಸಮುದ್ರ. ಅಲ್ಲಿಯ ಉಣ್ಣೆದಲೆಯ ಮೂಲನಿವಾಸಿಗಳು, ತಮಗೆ ಬೇಕಾದ ಸತ್ತವರ ಕಳೇಬರಗಳನ್ನು ಕಡಲಿನಿಂದಲೇ ಕೊಂಡುಕೊಳ್ಳುತ್ತಿದ್ದರು. ಆದರೆ ಇದರಿಂದ ಆ ಕಡಲಿನ ಶಾರ್ಕ ಮೀನುಗಳು ನಿರುತ್ಸಾಹಗೊಳ್ಳಲಿಲ್ಲ. ಅವು ಹತ್ತಿರದ ನೀರನ್ನು ತಮ್ಮ ನೆಲೆವೀಡಾಗಿ ಮಾಡಿದ್ದವು. ಒಂದು ಪುಟ್ಟ ವಿಪರೀತ ಸರಕು ಹೇರಿದ ಸ್ಥಾನಿಕ ಕೊಂತಲಿನಲ್ಲಿ ಹಡಗಕ್ಕೆ ಬರುವದು ಅಂದು ನನ್ನ ಹಣೆಯಲ್ಲಿ ಬರೆದಿತ್ತು. ಆ ಕೊಂತಲು ನಡುನೀರಿನಲ್ಲಿ ಬುಡಮೇಲಾಯಿತು. ಅದರಲ್ಲಿ ನಾಲ್ಕು ಉಣ್ಣೆದಲೆಯವರೂ ನಾನೂ ಇದ್ದೆವು. ಅಲ್ಲ; ಆ ದೋಣಿಗೆ ಜೋತುಬಿದ್ದಿದ್ದವು. ನಮ್ಮ "ಸ್ಕೂನರು" ನೂರು ಯಾರ್ಡು ದೂರವಿತ್ತು. ಇನ್ನೊಂದು ದೋಣಿಗಾಗಿ ನಾನು ಕೂಗಿದೆ. ಅದಾಗಲೇ ಒಬ್ಬ ಉಣ್ಣೆದಲೆಯ ಮೂಲವಾಸಿ ಬೊಬ್ಬೆಯಿಡಲು ಆರಂಭಿಸಿದ, ದೋಣಿಯ ತುದಿಯನ್ನು ಹಿಡಿದು ಜೋಲುವ ಅವನು, ಆ ದೋಣಿಯ ಆ ಭಾಗವು ಕೂಡಿಯೇ ಹಲವು ಜಾರಿ ನೀರ ಒಳಕ್ಕೆ ಎಳೆಯಲ್ಪಟ್ಟಿದ್ದವು.

ಆಗ ಆತನ ಹಿಡಿತ ದೋಣಿಯ ಮೇಲಿಂದ ಕಳಚಿತು. ಮತ್ತು ಆತ ನೀರೊಳಗೆ ಮಾಯವಾದ. ಒಂದು ಶಾರ್ಕ ಮೀನ ಅವನನ್ನು ಸೆಳೆದೊಯ್ದಿತ್ತು.

ಉಳಿದ ಮೂರು ಮೂಲ ನಿವಾಸಿಗಳು ಆ ಡಬ್ಬು ಬಿದ್ದ ದೋಣಿಯ ಮೇಲೆ ನೀರೊಳಗಿಂದ ಎದ್ದು ಏರಿ ನಿಲ್ಲಲು ಹೆಣಗಾಡಿದರು. ನಾನು ಕೂಗಾಡಿದೆ; ಶಾಪ ಹಾಕಿದೆ. ಹತ್ತಿರದ ಒಬ್ಬನನ್ನು ಗುದ್ದಿದೆ. ಆದರೆ ವ್ಯರ್ಥ. ಅವರು ಕಂಗೆಟ್ಟು ಕುರುಡು ಗಾಬರಿಯಲ್ಲಿದ್ದರು. ಆ ದೋಣಿಯವರಲ್ಲಿ ಒಬ್ಬನನ್ನು ಎತ್ತಿ ಹಿಡಿಯುವದೂ ಕಷ್ಟವಿತ್ತು. ಆ ಮೂವರ ಜಗ್ಗಾಟದಲ್ಲಿ ಆ ದೋಣಿ ತುದಿಮೇಲಾಯಿತು. ಅಡ್ಡ ಹೊರಳಿತು. ಮೂವರೂ ಮತ್ತೆ ನೀರಿಗೆ ನೂಕಲ್ಪಟ್ಟರು.

ನಾನು ಆ ದೋಣಿಯನ್ನು ಬಿಟ್ಟು ಹಡಗದತ್ತ ಈಜಿಹೋಗಹತ್ತಿದನು. ಅಲ್ಲಿಗೆ ತಲ್ಪುವ ಮೊದಲೇ ಹಡಗದಿಂದ ಹೊರಟ ದೋಣಿ ನನ್ನನ್ನು ನಡುವೆಯೇ ಎತ್ತಿಕೊಳ್ಳುವದೆಂದು ತರ್ಕಿಸಿದ್ದೆನು. ಒಬ್ಬ ನಿಗ್ರೋ ನನ್ನ ಜತೆಗೆ ಈಜಿ ಬರಲು ಸಿದ್ಧನಾದ. ನಾವಿಬ್ಬರೂ ಅಕ್ಕಪಕ್ಕದಲ್ಲಿ ಮೌನವಾಗಿ, ಆಗಾಗ್ಗೆ ನೀರಲ್ಲಿ ತಲೆ ತಗ್ಗಿಸಿ ಶಾರ್ಕ ಮೀನುಗಳಿಗಾಗಿ ಸುತ್ತಲೂ ಇಣಿಕಿ ನೋಡುತ್ತ ಈಜತೊಡಗಿದೆವು. ದೋಣಿಯ ಹತ್ತಿರ ಉಳಿದವನ ಕೂಗಾಟದಿಂದ ನಮಗೆ ಗೊತ್ತಾಯಿತು, ಅವನೂ ಶಾರ್ಕಿಗೆ ಸೆರೆಯಾದನೆಂದು. ನಾನು ನೀರಲ್ಲಿ ಇಣಿಕಿ ನೋಡುತ್ತಿದ್ದಾಗಲೇ ಒಂದು ದೊಡ್ಡ ಶಾರ್ಕ ನನ್ನ ಕೆಳಗೆ ನೇರವಾಗಿ ತೇಲಿಬರುವದನ್ನು ಕಂಡೆ. ಅದು ಪೂರ್ತಿ ಹದಿನಾರು ಅಡಿ ಉದ್ದವಿತ್ತು. ನಾನು ಎಲ್ಲವನ್ನೂ ನೋಡಿದೆನು. ನನ್ನೊಡನೆ ಈಜುತ್ತಿದ್ದ ಆ ಉಣ್ಣೆದಲೆಯವನನ್ನೂ ಸೊಂಟಕ್ಕೆ ಓಡಿದು ಎಳೆದೊಯ್ಯಿತು. ಆ ಪಾಪದ ಪ್ರಾಣಿ ಹೋಗೇ ಹೋದ, ತಲೆ, ಹೆಗಲು, ತೋಳುಗಳನ್ನು ನೀರ ಮೇಲೆ ಎತ್ತಿ ಎತ್ತಿ ಎದೆಬಿರಿಯುವಂತೆ ಕಿರುಚುತ್ತ. ನೂರಾರು ಅಡಿ ದೂರದವರಗೂ ಆತ ಹೀಗೆ ಸೆಳದೊಯ್ಯಲ್ಪಟ್ಟ, ಅನಂತರ ನೀರೊಳಗೆ ಜಗ್ಗಿ ಕಾಣದಾದ.

ನಾನು ಹಟದಿಂದ ಮುಂದೆ ಈಜಿದೆ. ಹಿಂಡುತಪ್ಪಿ ಅಲೆಯುವ ಕೊನೆಯ ಶಾರ್ಕ ಅದೊಂದೇ ಇರಬೇಕೆಂದು ಲೆಕ್ಕಹಾಕಿದೆ. ಆದರೆ ಇನ್ನೊ ಂದು ಉಳಿದಿತ್ತು. ನೀರೊಳಗಿನ ನಿಗ್ರೋರ ಮೇಲೆ ಮೊದಲು. ದಾಳಿಮಾಡಿದ್ದೋ ಅಥವಾ ಇನ್ನೆಲ್ಲಾದರೂ ಹೊಟ್ಟೆತುಂಬ ಮೇಯ್ದುಬಂದದ್ದೋ. ಆ ಹೆಮ್ಮೀನು ಯಾವದೆಂದು ನನಗೆ ತಿಳಿಯಲಿಲ್ಲ. ಏನೇ ಇದ್ದರೂ ಅದು ಉಳಿದವುಗಳಂತೆ ಅವಸರದಲ್ಲಿದ್ದಿಲ್ಲ. ನಾನು ಮೊದಲಿನಂತೆ ಭರದಿಂದ ಈಗ ಈಸುತ್ತಿದ್ದಿಲ್ಲ. ಏಕೆಂದರೆ ನನ್ನ ಪರಿಶ್ರಮದ ಬಹುಭಾಗ ಆ ಮೀನಿನ ಸುಳುವು ಹಚ್ಚುವದರಲ್ಲಿಯೇ ವೆಚ್ಚವಾಗುತ್ತಿತ್ತು. ಅದು ಮೊದಲನೆಯ ಹಲ್ಲೆ ಮಾಡುವಾಗ ನಾನು ನೋಡುತ್ತಿದ್ದೆ. ಸುದೈವದಿಂದ ಎರಡೂ ಕೈಗಳನ್ನು ಅದರ ಮೂಗಿನ ಮೇಲೆ ಇಡುವಂತಾಯಿತು. ಅದರ ರಭಸ ನನ್ನನ್ನು ನೀಲ ಕಳಗೆ ನೂಕುವಂತಾದರೂ ನಾನು ಅದನ್ನು ದೂರವಿಡಲು ಶಕ್ಯವಾಯಿತು. ಅದು ಆಚಗೆ ತಿರುಗಿ ಸುತ್ತು ಹಾಕಿ ಮತ್ತೆ ಬರಹತ್ತಿತು. ಎರಡನೆಯ ಸಲವೂ ನಾನು ಅದೇ ತಂತ್ರದಿಂದ ಪಾರಾದೆನು. ಮೂರನೆಯ ಹಲ್ಲೆಯಲ್ಲಿ ಇಬ್ಬರೂ ಗುರಿತಪ್ಪಿದೆವು. ನನ್ನ ಕೈ ಅದರ ಮುಸುಡಿಗೆ ನಿಲುಕುವಷ್ಟರಲ್ಲಿ ಅದು ನುಸುಳಿ ಹೋಯಿತು. ಆದರೆ ಮಳಲಹಾಳೆ (ಸ್ಯಾಂಡ-ಪೇಪರ) ಯಂತಿದ್ದ ಅದರ ಉರುಟು ಮೈದೊಗಲು ನನ್ನ ಒಂದು ಭುಜದ ಚರ್ಮವನ್ನು ಮೊಳಕೈಯಿಂದ ಹೆಗಲ ತನಕ ಸುಲಿದು ಚೆಲ್ಲಿತು. (ಆಗ ನನ್ನ ಮೈಮೇಲೆ ತೋಳಿಲ್ಲದ ಒಳ ಅಂಗಿಯೊಂದು ಮಾತ್ರ ಇತ್ತು.)

ಇಷ್ಟು ಹೊತ್ತಿಗೆ ನನ್ನ ಆಟ ಮುಗಿದಂತಾಯಿತು. ನಾನು ಆಸೆ ಬಿಟ್ಟೆನು. ಹಡಗ ಇನ್ನೂ ಇನ್ನೂರು ಅಡಿ ದೂರವಿತ್ತು. ನನ್ನ ಮೋರೆ ನೀರೊಳಗಿತ್ತು. ಆ ಶಾರ್ಕು ಇನ್ನೊಂದು ಅಭಿಯೋಗಕ್ಕಾಗಿ ಆಯಕಟ್ಟಿಗೆ ಚಲಿಸುತ್ತಿರುವದನ್ನು ನಾನು ನೋಡುತ್ತಿದ್ದೆ. ಅಷ್ಟರಲ್ಲಿ ಒಂದು ಕಂದು ಬಣ್ಣದ ದೇಹ ನಮ್ಮಿಬ್ಬರ ನಡುವೆ ಹಾಯಿತು. ಅದು ಓಟೂ ಆಗಿದ್ದ.

’ಹಡಗದ ಕಡೆ ಜಾರಿ ನನ್ನೊಡೆಯಾ!’ ಆತ ಅಂದನು. ಒಳ್ಳೇ ಗೆಲುವಿನಲ್ಲಿಯೇ ಅಂದನು. ಆ ಪ್ರಸಂಗ ಒಂದು ಮೋಜಿನ ಹೊಂಚೋ ಎಂಬಂತೆ ಅವನ ದನಿಯಿತು. “ನಾನು ಶಾರ್ಕುಗಳನ್ನು ಬಲ್ಲೆ. ಶಾರ್ಕು ನನ್ನ ಸೋದರ.”

ನಾನು ಅವನ ಅಪ್ಪಣೆ ಮನ್ನಿಸಿದೆ. ನಿಧಾನವಾಗಿ ಈಜಿ ಮುಂದಾದೆ. ಓಟೂ ನನ್ನ ಸುತಲೂ ಈಜುತ್ತಿದ್ದ, ನನ್ನ ಮತ್ತು ಶಾರ್ಕನ ನಡುವೆ ನಿಂತು ಅದರ ನುಗ್ಗಾಟ ತಪ್ಪಿಸುತ್ತ ನನಗೆ ಹುರದುಂಬಿಸುತ್ತಿದ್ದ.

“ಮಗ್ಗಲ ಹಗ್ಗ ತೆಗೆದಿದ್ದಾರೆ. ಅವರು ಪಟಗಳನ್ನು ಎತ್ತುತ್ತಿದ್ದಾರೆ.” ಒಂದು ಗಳಿಗೆ ತಡೆದು ಆತ ವಿವರಿಸಿದ. ಮತ್ತು ಶಾರ್ಕಿನ ಇನ್ನೊಂದು ಹಲ್ಲೆಯನ್ನು ತಪ್ಪಿಸಿಕೊಳ್ಳಲು ನೀರಲ್ಲಿ ಮುಳುಗಿ ಮಾಯವಾದ.

ಹಡಗ ಮೂವತ್ತು ಅಡಿಯಷ್ಟು ಇರುವಾಗ ನಾನು ಪೂರ್ತಿ ಮುಗಿದಂತೆಯೇ. ಕೈಕಾಲು ಚಲಿಸುವದೇ ಕಷ್ಟ, ಪ್ರಾಣಸಂಕಟವೆಂದೆನಿಸಿತು. ಹಡಗದಿಂದ ಜನ ನಮ್ಮ ಕಡೆಗೆ ಹಗ್ಗಗಳನ್ನು ಬೀಸುತ್ತಿದ್ದರು. ಆದರೆ ಅವು ಪ್ರತಿ ಸಲವೂ ನಮ್ಮ ಕೈ ತೆಕ್ಕೆಗೂ ಕಡಿಮೆಯಾಗುತ್ತಿದ್ದವು. ಗಿಡ್ಡಬೀಳುತ್ತಿದ್ದುವು. ಆ ಶಾರ್ಕ ಮೀನು ತನಗೆ ನೋವಾಗದಿರುವುದನ್ನು ನೆನೆದು ಹೆಚ್ಚು ದಿಟ್ಟವಾಗಹತ್ತಿತು. ಹಲವು ಸಲ ಅದು ನಮ್ಮನ್ನು ಹಿಡಿದಂತೆಯೇ ಎಂದೆನಿಸುತ್ತಿತ್ತು. ಆದರೆ ಪ್ರತಿ ಸಲವೂ ಒಂದು ನಿಮಿಷ ವಿಲಂಬವೆನ್ನುವಾಗ ಓಟೂ ಅಲ್ಲಿ ಈಜಿ ಬರುತ್ತಿದ್ದ ನಮ್ಮಿಬ್ಬರ ನಡುವೆ. ಓಟೂ ಯಾವ ಗಳಿಗೆಗೂ ತನ್ನನ್ನು ಉಳಿಸಿಕೊಳ್ಳಬಹುದಿತ್ತು. ಆದರೆ ಆತ ನನ್ನನ್ನೇ ಅಂಟಿಕೊಂಡು ಉಳಿದ.

“ನಮಸ್ಕಾರ ಚಾರ್ಲಿ, ನಾನು ಸತ್ತೇ! ನನ್ನದು ಮುಗಿಯಿತು!” ನಾನು ಹೇಗೋ ಉಸುರಲು ಉಬ್ಬಸಪಟ್ಟೆ.

ಕೊನೆಯ ಗಳಿಗೆ ಬಂದಿತೆಂದು ನನಗೆ ತಿಳಿಯಿತು. ಮೂರು ಗಳಿಗೆ ನಾನು ಕೈಕಾಲು ಕೆಳಗೆ ಬಿಟ್ಟು ಕಡಲ ಆಳಕ್ಕೆ ಹೋಗುವವನು!

ಆದರೆ ಓಟೂ ನನ್ನ ಮೊರೆಗೆ ನಕ್ಕು ನುಡಿದ, "ನಾನು ನಿಮಗೆ ಹೊಸ ಯುಕ್ತಿಯೊಂದನ್ನು ಕಾಣಿಸುತ್ತೇನೆ. ಆ ಶಾರ್ಕಿಗೆ ಓಕರಿಕೆ ಬರುವಂತೆ ಮಾಡುತ್ತೇನೆ." ಅವನು ನನ್ನ ಹಿಂಬದಿಗೆ ಸರಿದ. ಅಲ್ಲಿ ಶಾರ್ಕು ನನ್ನೆಡೆಗೆ ಧಾವಿಸಲು ಸಜ್ಜಾಗುತ್ತಿತ್ತು.

"ಸಲ್ಪ, ಇನ್ನೂ ಸ್ವಲ್ಪ ಎಡಕ್ಕೆ" ಆತ ತಡೆದು ಕೂಗಿದ, "ಅಲ್ಲಿ ಒಂದು ಹಗ್ಗವಿದೆ. ಎಡಕ್ಕೆ, ನನ್ನೊಡೆಯಾ. ಎಡಕ್ಕೆ."

ನಾನು ನನ್ನ ಗತಿ ಬದಲಿಸಿ ಕುರುಡು ಕೈ ಬೀಸುತ್ತ ಮುಂದಾದೆ. ಆ ಕಾಲಕ್ಕೆ ನನ್ನ ಪ್ರಜ್ಞೆ ಇತ್ತೋ ಇಲ್ಲವೋ ಎಂಬಂತಾಗಿತ್ತು. ನನ್ನ ಕೈ ಹಗ್ಗದ ಮೇಲೆ ಬಿದ್ದು ಮುಷ್ಟಿ ಬಿಗಿಯುವಷ್ಟರಲ್ಲಿ ಹಡಗದ ಮೇಲಿಂದ ಒಂದು ಬೆರಗಿನ ಕೂಗು ಕೇಳಬಂದಿತು. ನಾನು ಹಿಂದಿರುಗಿ ನೋಡಿದೆ. ಓಟೂನ ಕುರುಹೇ ಇದ್ದಿಲ್ಲ. ಮರುಕ್ಷಣಕ್ಕೆ ಅವನು ನೀರ ಪಾತಳಿಗೆ ಬಂದ. ಅವನ ಎರಡೂ ಕೈಗಳು ಮಣಿಕಟ್ಟಿನಿಂದ ಕಳಚಿಬಿದ್ದಿದ್ದುವು. ಮೋಟು ಮುಂಗೈಗಳಿಂದ ರಕ್ತ ಜೀಕಳಿಸುತ್ತಿತು.

"ಓಟೂss…!" ಆತ ಮೃದುವಾಗಿ ಕರೆದ. ಅವನ ದೃಷ್ಟಿಯಲ್ಲಿ ಅವನ ದನಿಗೆ ದೀಪ್ತಿಯಿತ್ತ ಪ್ರೀತಿ ತುಳುಕುತ್ತಿರುವುದನ್ನು ನಾನು ಕಂಡೆ.

ಆಗೊಮ್ಮೆ, ಆಗಲೇ ಒಮ್ಮೆ, ನಮ್ಮ ಜೀವನದ ಎಲ್ಲ ವರ್ಷಗಳ ಕೊನೆಗೊಮ್ಮೆ ಆತ ನನಗೆ ಆ ಹೆಸರಿನಿಂದ ಕರೆದದ್ದು.

"ಹೋಗಿ ಬರುತ್ತೇನೆ ಓಟೂss..." ಆತ ಕರೆದ.

ಆಗ ಆತ ಕೆಳಗೆ ಸೆಳದೊಯ್ಯಲ್ಪಟ್ಟ; ನಾನು ಮೇಲೆ ಹಡಗಕ್ಕೆ ಸೆಳೆದೆತ್ತಲ್ಪಟ್ಟೆ, ಅಲ್ಲಿ ಕಪ್ತಾನನ ತೋಳುಗಳ ತೆಕ್ಕೆಯಲ್ಲಿ ನಾನು ಮೂರ್ಛೆ ಹೋದೆ.

ಹೀಗೆ ಬಾಳಿ ಹೋದ ಓಟೂ ನನ್ನನ್ನು ಬದುಕಿಸಿ ಮನುಷ್ಯನನ್ನಾಗಿ ಮಾಡಿದವನು, ಕೊನೆಗೂ ನನ್ನನ್ನು ಉಳಿಸಿದವನು. ಒಂದು ಸುಳಿಗಾಳಿಯ ದವಡೆಯಲ್ಲಿ ನಾವು ಕೂಡಿದೆವು, ಒಂದು ಶಾರ್ಕ ಮೀನದ ದವಡೆಯಲ್ಲಿ ಅಗಲಿದೆವು.... ನಡುವೆ ಹದಿನೇಳು ವರ್ಷಗಳ ಗಾಢಮೈತ್ರಿ, ಅಂಥ ಮೈತ್ರಿ ಇಬ್ಬರು ಮನುಷ್ಯರೊಡನೆ- ಅದೂ ಒಬ್ಬ ಕಂದು, ಇನ್ನೊಬ್ಬ ಬಿಳಿಯ ಎಂದೆಂದಿಗೂ ಒದಗಿ ಬಂದಿರಲಾರದು. ಇಷ್ಟೊಂದು ನಾನು ಧೈರ್ಯದಿಂದ ಹೇಳಬಲ್ಲೆ. ಯಹೋವಾ ತನ್ನ ಸಮುನ್ನತ ಸ್ವರ್ಗದ ಪೀಠದಿಂದ ಪ್ರತಿಯೊಂದು ಗುಬ್ಬಿಯೂ ಬೀಳುವುದನ್ನು ನಿರೀಕ್ಷಿಸುತ್ತಿದ್ದರೆ ಅವನ ರಾಜ್ಯದಲ್ಲಿ ಬೋರಾಬೋರಾದ ಒಬ್ಬಾನೊಬ್ಬ ಪಾಷಂಡಿ, ಪಾಮರ ಓಟೂ ಯಾರಿಗೂ ಕಡಿಮೆಯಲ್ಲ, ಕೀಳಲ್ಲ!

## ನಥೆನಿಯಲ್ ಹೊಥೋರ್ನ (೧೮೦೪-೧೮೬೪ )

ಇವನು ತನ್ನ ನಲವತ್ತಾರನೇ ವಯಸ್ಸಿನವರೆಗೂ 'ತಾನು ಅತ್ಯಂತ ಅಜ್ಞಾತ ಸಾಹಿತಿಯಾಗಿದ್ದೆ'ನೆಂದು ಹೇಳಿಕೊಂಡಿದ್ದಾನೆ. ಆ ವರ್ಷ ಆತ ತನ್ನ ರಕ್ತಪತ್ರ (ದಿ ಸ್ಕಾರಲೆಟ್ ಲೆಟರ) ವನ್ನು ಪ್ರಕಟಿಸಿದನು. ಅದಕ್ಕೂ ಮೊದಲು ಅವನು ಕತೆಗಳನ್ನು, ಶಬ್ದ ಚಿತ್ರಗಳನ್ನು ಪ್ರಕಟಿಸಿದ್ದನು. ಅವುಗಳಲ್ಲಿ ಹೆಚ್ಚಾಗಿ ಅನಾಮಧೇಯವಾಗಿ ಪ್ರಕಟವಾಗಿದ್ದವು. ಇವನು ಸೋಫಿಯಾ ಪಿಬೋಡಿ ಎಂಬಾಕೆಯನ್ನು ಮದುವೆಯಾಗಿದ್ದನು. ಮೂರು ವರ್ಷ ಸಾಲೆಯ ಬಂದರದ ಸರ್ವೆ ಅಧಿಕಾರಿಯಾಗಿದ್ದನು. ಸ್ಕಾರಲೆಟ್ ಕಾದಂಬರಿಯೊಡನೆ ಅವನಿಗೆ ಶೀಘ್ರವೂ ಶಾಶ್ವತವೂ ಆದ ಕೀರ್ತಿಯು ಬಂದಿತು. ಅದರ ಬೆನ್ನಿಗೆ ಎರಡು ವರ್ಷಗಳ ನಂತರ ಎಂದಿನಿಂದಲೋ ಮುಂದೂಡಲಾದ ಚಿರವಿಲಂಬಿತವಾದ ಹಳೆ ಜಗತ್ತಿನ ಸಂಚಾರವು ಬಂದಿತು. ಹೊಥೋರ್ನ ಸುಮಾರು ಏಳು ವರ್ಷ ಅಮೇರಿಕೆಯಿಂದ ದೂರ ಉಳಿದನು. ಅವುಗಳಲ್ಲಿ ಮೊದಲು ನಾಲ್ಕು ವರ್ಷ ಲಿವ್ಹರಪೂಲದಲ್ಲಿ ರಾಯಭಾರಿಯಾಗಿದ್ದನು. ಅದು ಸರಕಾರದಲ್ಲಿ ಉತ್ತಮ ಸಂಬಳದ ಹುದ್ದೆಯಾಗಿತ್ತು. ೧೮೬೦ರಲ್ಲಿ ಇಟಲಿಯಲ್ಲಿ ಒಂದೂವರೆ ವರ್ಷ ಕಳೆದುದರ ಫಲವಾಗಿ ಅವನು 'ಶ್ವೇತ ಮೃಗ' (ದ ಮಾರ್ಬಲ್ ಫೋನ) ಎಂಬ ಕಾದಂಬರಿಯನ್ನು ಪ್ರಕಾಶಪಡಿಸಿದನು. ಮುಂದೆ ಅವನ ಆಯುಷ್ಯದ ನಾಲ್ಕು ವರುಷಗಳು ಉಳಿದಿದ್ದವು. ಆದರೆ ಆ ಅವಧಿಯಲ್ಲಿ ಅವನು ಏನನ್ನೂ ಸಾಧಿಸಲಿಲ್ಲ. ಮುಂದೆ ಅಮೇರಿಕೆಯ ಯಾದವೀ ಕಲಹ ಪ್ರಾರಂಭವಾಯಿತು. ಅವನ ಆರೋಗ್ಯವು ಕುಸಿಯಿತು. ಬರವಣಿಗೆಯು ಅವನಿಗೆ ದಣಿವನ್ನೂ ನಿರ್ವೇದವನ್ನೂ ಉಂಟು ಮಾಡಿತು.

ಅವನ ಮರಣದ ನಂತರ ಆಗಿಂದಾಗ ಅವನು ಬಿಟ್ಟುಹೋದ ಬರಹವೆಲ್ಲ ಪ್ರಕಟವಾದವು. (ಅವನ ಪತ್ರಗಳನ್ನೂ ಟಿಪ್ಪಣಿಗಳನ್ನೂ ಬಿಟ್ಟಿಲ್ಲ) ಇವು ಅವನ ಕೀರ್ತಿಗೆ

ಹೆಚ್ಚಿಗೆಯೇನೂ ಸೇರಿಸಲಿಲ್ಲ. ಆದರೂ ಅವು ಅವನ ಅಂತಃಪ್ರಜ್ಞೆಯ ಅಲೌಕಿಕ ಆಳವನ್ನೂ ಕಾಂತಿಯನ್ನೂ ಕಲೆಗಾರಿಕೆಯ ನವಿರಾದ ಗಾಂಭೀರ್ಯವನ್ನೂ ಇನ್ನಷ್ಟು ಸ್ಥಿರಗೊಳಿಸುತ್ತದೆ.

# ಹಿರಿಯಾಸೆಯ ಅತಿಥಿ

ಒಂದು ಸಪ್ಟಂಬರ ರಾತ್ರೆ ನಡುಮನೆಯ ಅಗ್ಗಿಷ್ಟಿಕೆಯ ಸುತ್ತಲೂ ಮನೆಯ ಮಂದಿಯೆಲ್ಲ ಕೂತಿದ್ದರು. ಹಿಂದಿನ ಗುಡ್ಡದ ಕಡಿದಾದ ಮಗ್ಗುಲಿನಿಂದ ಪೈನ ಮರಗಳ ಒಣಕಡ್ಡಿಗಳು ಮುರಿದುಬಿದ್ದ ಹೆಮ್ಮರಗಳ ಚೂರುಗಳು ಹಿಸಿದು ಕುಸಿದು ಕೆಳಕ್ಕುರುಳಿದವು. ಹೊಗೆಗಿಂಡಿಯವರೆಗೂ ಬೆಂಕಿಯು ಅಬ್ಬರದಿಂದ ಧಗಧಗಿಸಿತು. ತನ್ನ ಅಗಲವಾದ ಜ್ವಾಲೆಗಳಿಂದ ಆ ಕೂಠಡಿಯನ್ನು ಬೆಳಗಿತು. ತಂದೆ-ತಾಯಿಗಳ ಮುಖದಲ್ಲಿ ಸಂತೋಷವು ನಲಿಯುತ್ತಿತ್ತು; ಮಕ್ಕಳು ಗಹಗಹಿಸಿ ನಗುತ್ತಿದ್ದರು; ಹಿರಿಯ ಮಗಳು ಹದಿನೇಳರ ಹೊಸಿಲಿನಲ್ಲಿ ಹೆಜ್ಜೆ ಇಟ್ಟ ಆನಂದದ ಪ್ರತಿಮೆಯಾಗಿದ್ದಳು; ಮುದಿ ಅಜ್ಜಿ ಆದಷ್ಟು ಬೆಚ್ಚಗಿನ ಸ್ಥಳದಲ್ಲಿ ಕುಳಿತು ಉಂಡೆನೂಲಿನಿಂದ ಏನನ್ನೋ ಹೊಲಿಯುತ್ತ ಆನಂದದ ಮೂರ್ತಿಯಂತಿದ್ದಳು. ನ್ಯೂ ಇಂಗ್ಲಂಡದಲ್ಲಿಯ ಅತ್ಯಂತ ಮುಪ್ಪಿನ ಉದಾಸೀನವೆನಿಸುವ ಆ ಸ್ಥಳದಲ್ಲಿ ಅವರಿಗೆ 'ಸಂತೋಷ ಏವ ಪುರುಷಸ್ಯ ಪರಂ ನಿಧಾನಂ' ಎಂಬ ಮಹದೌಷಧಿಯು ದೊರೆಯಿತು. ಈ ಮನೆಯವರು ಬೆಳ್ಳಿ ಬೆಟ್ಟಗಳ ಕಣಿವೆಯಲ್ಲಿ ವಾಸಿಸಿದ್ದರು. ಅಲ್ಲಿ ವರ್ಷವೆಲ್ಲ ಕೊರೆಯುವ ಗಾಳಿ ಬೀಸುತ್ತಿರುತ್ತದೆ. ಚಳಿಗಾಲದಲ್ಲಿ ಅದು ಕನಿಕರವಿಲ್ಲದ ಕುಳಿರ್ಗಾಳಿಯೂ ಆಗುತ್ತದೆ. ಅವರ ಗುಡಿಸಲಿಗೆ ತನ್ನ ಹೊಚ್ಚ ಹೊಸ ತೀಕ್ಷ್ಣತೆಯನ್ನು ನೀಡಿ ಆ ಗಾಳಿ ಮುಂಡೆ 'ಸಾಕೊ' ಕೊಳ್ಳದಲ್ಲಿ ಇಳಿಯುತ್ತದೆ. ನಿಜವಾಗಿರಿ ಅವರು ಒಂದು ಶೀತಲ ಸ್ಥಳದಲ್ಲಿ ಅದೂ ಗಂಡಾಂತರದ ಸ್ಥಳದಲ್ಲಿ ವಾಸಿಸುತ್ತಿದ್ದರು; ಏಕೆಂದರೆ ಅವರ ಮನೆಯ ಮೇಲೆ ಒಂದು ತೀರ ಕಡಿದಾದ ಪರ್ವತವು ಗೋಪುರದಂತೆ ಎರಗಿ ನಿಂತಿತ್ತು. ಎಷ್ಟೋ ಸಲ ಅವುಗಳ ಮಗ್ಗಲಗುಂಟ ಕಲ್ಲುಗಳು ಉರುಳಿ ಬಂದು ಮನೆಯ ಹತ್ತರ ಬಿದ್ದು ನಡುರಾತ್ರೆಯಲ್ಲಿ ಮನೆಯವರನ್ನು ದಿಗಿಲುಗೊಳಿಸುತ್ತಿದ್ದವು.

ಹಿರಿಯ ಮಗಳು ಆಗ ತಾನೇ ತಮಾಷೆಯ ಮಾತುಗಳನ್ನಾಡಿದ್ದಳು. ಅದಕ್ಕೆ ಅವರೆಲ್ಲ ಹಿಗ್ಗಿನಿಂದ ತುಳುಕಾಡಿದುದು. ಅದೇ ಸಮಯ ಚಳಿಗಾಳಿ ಕಣಿವೆಯೊಳಗಿಂದ ಬೀಸಿ ಬಂದು ಗುಡಿಸಲು ಮುಂದೆ ತಡೆದಂತೆ ತೋರಿತು-ಮುಂದೆ ಕೊಳ್ಳದೊಳಗೆ ಇಳಿಯುವ ಮೊದಲು ಒಂದು ವಿಲಾಪದ ಹಾಗೂ ಆಕ್ರೋಶದ ದನಿಯೊಂದಿಗೆ ಗುಡಿಸಿಲಿನ ಕದಗಳನ್ನು ಬಡಬಡನೆ ಬಡಿಯಿತು. ಈ ದನಿಯ ಅಪಮಾನ್ಯವೇನೂ ಇಲ್ಲವಾದರೂ ಅದು ಒಳಗಿನವರನ್ನೆಲ್ಲ ಖಿನ್ನಗೊಳಿಸಿತು. ಆದರೆ ದಾರಿಹೋಕನೊಬ್ಬನು ಕದವನ್ನು ಎತಿದ್ದನ್ನು ನೋಡಿದಾಗ ಆ ಕುಟುಂಬಕ್ಕೆ ಆನಂದವಾಯಿತು. ಅವನು ಹತ್ತಿರ ಬಂದರೂ ಆ ಚಳಿಗಾಳಿಯ ಉತ್ಪಾತದ ನಡುವೆ ಅವನ ಹೆಜ್ಜೆಯ ಸದ್ದು ಕೇಳಿರಲಿಲ್ಲ. ಅವನು ಒಳಗೆ ಪ್ರವೇಶಿಸುತ್ತಿರುವಾಗಲೇ ಆ ಗಾಳಿ ಗಟ್ಟಿಯಾಗಿ ರೋದಿಸುತ್ತಾ ಅಲ್ಲಿಂದ ಮರಳಿತು.

ಅಂತಹ ನಿರ್ಜನ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಈ ಗುಡಿಸಿಲಿನ ಜನ ದಿನಾಲೂ ಹೊರಗಿನ ಜಗತ್ತಿನೊಂದಿಗೆ ಸಂಪರ್ಕವಿಟ್ಟುಕೊಂಡಿದ್ದರು. ಆ ಅದ್ಭುತ ರಮ್ಯ ಕಣಿವೆಯ ಒಂದು ದೊಡ್ಡ ಪ್ರವಾಸವಾಹಿನಿ. ಅದರಕೊಳಗಿಂದ ಒಳನಾಡ ವ್ಯಾಪಾರದ ಜೀವರಕ್ತವು ಮೈನ ಮತ್ತು ಅತ್ತ ಪಚ್ಚೆಪರ್ವತ ಮತ್ತು ಸೇಂಟ ಲಾರೆನ್ಸನದಿಯ ದಂಡೆಗಳ ನಡುವೆ ಹರಿದಾಡುತ್ತಿತು. ಆ ಮಾರ್ಗದ ಸಾರಿಗೆ ಸವಾರಿಯಾದ ಕುದುರೆ ಸಾರೋಟು ಯಾವಾಗಲೂ ಆ ಗುಡಿಸಿಲಿನ ಎದುರಿಗೆ ತುಸು ತಡೆಯುತ್ತಿತ್ತು. ಊರುಗೋಲಿನ ಹೊರತು ಬೇರೆ ಸಂಗಾತಿಯಿಲ್ಲದ ಹಾದಿಹೋಕನು ಆ ಪರ್ವತದ ಸೀಳುಗಣಿವೆಯ ನಡುವಿನಿಂದ ಹಾದು ಹೊರಬೀಳುವಷ್ಟರಲ್ಲಿ ಅಲ್ಲಿಯ ಒಂಟಿತನದ ಬೇಸರಿಕೆಯನ್ನು ಹೋಗಲಾಡಿಸುವದಕ್ಕೂ ಕೊಳ್ಳದೊಳಗಿಂದ ಮೂದಲನೇ ಮನೆಯನ್ನು ಸೇರುವದಕ್ಕಿಂತ ಇಲ್ಲಿ ಒಂದೆರಡು ಮಾತುಗಳನ್ನು ವಿನಿಮಯಕ್ಕಾಗಿ ತಡೆದಿದ್ದನು, ಪೋರ್ಟಲಂಡದ ಮಾರುಗಟ್ಟೆಗೆ ಬರಹೋಗುವ ಬಾಡಿಗೆಯ ಕುದುರೆಯ ಒಡೆಯನು ಅಲ್ಲಿ ರಾತ್ರೆಯಲ್ಲಿ ತಂಗುತ್ತಿದ್ದನು. ಅವನು ಅವಿವಾಹಿತನಾಗಿದ್ದರೆ ವಾಡಿಕೆಯ ನಿದ್ರೆ ಹೋಗುವ ವೇಳೆಗಿಂತ ಅರ್ಧ ತಾಸು ಹೆಚ್ಚು ಕುಳಿತು ಗಿರಿಬಾಲೆಯಿಂದ ಒಂದು ಮುತ್ತು

ಪಡೆದೇ ಅಗಲುತ್ತಿದ್ದನು. ಆ ಮನೆ ತೀರ ಹಳೆಯ ಮಾದರಿಯ ಖಾನಾವಳಿಯಂತಿತ್ತು. ಅಲ್ಲಿ ಪ್ರವಾಸಿಯು ವಾಸಗ್ರಾಸಗಳಿಗಾಗಿ ಹಣತೆತ್ತರೂ ಹಣದ ಬೆಲೆಗಿಂತಲೂ ಅಧಿಕವೆನಿಸುವ ಸದಯಾಂತಃಕರಣದ ಸಲಿಗೆಯ ಆದರವನ್ನು ಪಡೆಯುತ್ತಿದ್ದನು. ಆದ್ದರಿಂದ ಹೊರಗಿನ ಮತ್ತು ಒಳಗಿನ ಬಾಗಿಲುಗಳ ನಡುವಿನ ಅಂಕಣದಲ್ಲಿ ಹೆಜ್ಜೆಗಳ ಸದ್ದು ಕೇಳಬಂದೊಡನೆಯೇ ಅಗ್ಗಿಷ್ಟಿಕೆಯ ಸುತ್ತಲೂ ಕುಳಿತ ಆ ಕುಟುಂಬದವರೆಲ್ಲರೂ ಎದ್ದು ತಮ್ಮ ಬಳಗಕ್ಕೆ ಒಳಪಟ್ಟ ಮತ್ತು ತಮ್ಮೊಂದಿಗೆ ಋಣಾನುಬಂಧವುಳ್ಳ ಆಪ್ತಮಿತ್ರರನ್ನು ಕಾಣುವಂತೆ ಸ್ವಾಗತಿಸಿದರು.

ಬಾಗಿಲು ಒಬ್ಬ ತರುಣನಿಂದ ತೆರೆಯಲ್ಪಟ್ಟಿತು. ಅವನ ಮುಖವು ಖಿನ್ನವಾಗಿತ್ತು. ಆ ಭಾವ ಹತಾಶವೃತ್ತಿಯನ್ನೇ ಹೋಲುತ್ತಿತ್ತು. ಕಾಡುದಾರಿಯಲ್ಲಿ ರಾತ್ರೆ ಕವಿಯುವಾಗಿ ಒಂಟಿಯಾಗಿ ಪ್ರಯಾಣ ಮಾಡುವವನ ಮುಖಭಾವದಂತಿತ್ತು. ಆದರೆ ಸ್ನೇಹಪೂರ್ಣವಾದ ಸ್ವಾಗತದಿಂದ ಅವನ ಮುಖಚರ್ಯೆಗೆ ಕಳೆಯೇರಿತ್ತು. ಅವನಿಗಾಗಿ ಒಂದು ಕುರ್ಚಿಯನ್ನೂ ತನ್ನ ಹೊದೆವ ವಸ್ತ್ರದಿಂದ ಆ ಮುದಿ ಅಜ್ಜಿಯಿಂದ ಮೊದಲಾಗಿ ಅವನ ಕಡೆಗೆ ಎತ್ತಿ ಚಾಚಿದ ಬಾಲಕನನ್ನೂ ಆ ತರುಣನ ಹೃದಯವು ಎದುರುಗೊಂಡಿತು. ಹಿರಿಯ ಮಗಳ ಕಟಾಕ್ಷವು ಮುಗುಳುನಗೆಯ ಆ ಅಪರಿಚಿತ ಆಗಂತುಕನನ್ನು ಮುಗ್ಧಗೊಳಿಸಿದವು.

“ಆಹಾ! ಈ ಬೆಂಕಿ ಈಗ ಅಗತ್ಯ ಬೇಕಾದ ವಸ್ತು, ಅದು ಇಂಥ ಪ್ರಸನ್ನವಾದ ಮಂಡಲದ ಸುತ್ತಲೂ ನೆರೆದಿದ್ದಾಗ ನಾನು ಪೂರ್ತಿ ಚಳಿಯಲ್ಲಿ ಕೊರಡಾಗಿ ಬಿಟ್ಟಿದ್ದೇನೆ. ಈ ಕಣಿವೆ ಪ್ರಚಂಡ ತಿದಿಯ ಕೊಳವೆಯಂತೆ ಇದೆ. ಬಾರ್ಟ್‌ಲೆಲ್‌ದಿಂದ ಇಲ್ಲಿಯವರಗೂ ಅದು ನನ್ನ ಮೋರೆಗೆ ಭಯಂಕರವಾದ ಉಬ್ಬರದ ಗಾಳೀ ಬೀಸುತ್ತ ಬಂದಿದೆ.” ಅವನು ನುಡಿದನು.

“ಹಾಗಾದರೆ ನೀವು ವ್ವರ್ಮೌಂಟದ ಕಡೆಗೆ ಹೊರಟಿರುವಿರಿ?” ಮನೆಯ ಯಜಮಾನ ಕೇಳಿದ, ಆ ತರುಣ ಅಭ್ಯಾಗತನ ಹೆಗಲ ಮೇಲಿನ ಒಂದು ಹಗುರವಾದ ಹಾಸಿಗೆಯನ್ನು ತೆಗೆದಿಡಲು ನೆರವಾದನು.

“ಹೌದು, ಬರ್ಲಿಂಗ್ಟನ್ನಿಗೆ; ಮತ್ತು ಅಲ್ಲಿಂದಲೂ ಮುಂದಕ್ಕೆ” ಆತ ಉತ್ತರಿಸಿದ.

“ಈ ರಾತ್ರೆಯೊಳಗೆ ನಾನು ಇವಾನ್‌ಕ್ರೆಪೋರ್ಡಿನಲ್ಲಿ ಇರಬೇಕೆಂದು ಯೋಚಿಸಿದ್ದೆ. ಆದರೆ ಇಂಥ ದಾರಿಯಲ್ಲಿ ಪ್ರಯಾಣಿಕನು ಅಲ್ಲಲ್ಲಿ ವಿರಾಮ ಹೊಂದುತ್ತ ಸಾಗುತ್ತಾನೆ. ಆದರೇನು, ಚೆನ್ನಾಗಿ ಉರಿಯುತ್ತಿರುವ ಈ ಬೆಂಕಿಯನ್ನು ನೋಡಿದಾಗ ಹಾಗೂ ನಿಮ್ಮೆಲ್ಲರ ಉಲ್ಲಾಸದಿಂದ ಅರಳಿದ ಮುಖಗಳನ್ನು ನೋಡಿದಾಗ ಅದು ನನಗಾಗಿಯೇ ಹೊತ್ತಿಸಲ್ಪಟ್ಟಿದೆ, ನೀವೆಲ್ಲ ನನ್ನ ಬರವನ್ನೇ ಹಾರೈಸುತ್ತಿರುವಂತೆ ನನಗನಿಸಿತು. ಆದ್ದರಿಂದ ನಾನು ಇಂದು ನಿಮ್ಮಲ್ಲಿ ತಂಗುತ್ತೇನೆ. ನೀವು ನನ್ನನ್ನು ನಿಮ್ಮವನೆಂದೇ ಭಾವಿಸಿ.”

ಈ ಬಿಚ್ಚು ಮನಸ್ಸಿನ ಆಗಂತುಕನು ತನ್ನ ಕುರ್ಚಿಯನ್ನು ಬೆಂಕಿಯ ಹತ್ತರ ಎಳೆದುಕೊಂಡನೋ ಇಲ್ಲವೋ, ಅಷ್ಟರಲ್ಲಿ ಹೊರಗೆ ಒಂದು ಭಾರವಾದ ಹೆಜ್ಜೆಯ ಸದ್ದಿನಂಥ ಶಬ್ದವು ಕೇಳಿಸಿತು. ಅದು ಪರ್ವತದ ಕಡಿದಾದ ಮಗ್ಗುಲಿನಿಂದ ನುಗ್ಗುತ್ತ ಉದ್ದುದ್ದ ಹೆಜ್ಜೆಹಾಕುತ್ತ ಆ ಗುಡಿಸಲನ್ನು ಹಾಯುವಾಗ ಈಚಿಯಿಂದ ಆಚೆಗೆ ಹಾರಿ ಬಡಿಯುತ್ತಿದ್ದಂತೆ ಭಾಸವಾಯಿತು. ಮನೆಯವರು ಉಸಿರು ತಡೆದು ನಿರೀಕ್ಷಿಸಿದರು. ಆ ಸದ್ದು ಅವರಿಗೆ ತೀರ ಚಿರಪರಿಚಿತ. ಅವರ ಅತಿಥಿ ಸಹಜವಾದ ಭೀತಿಯ ಪ್ರವೃತ್ತಿಯಿಂದಲೇ ಉಸಿರು ಕಟ್ಟಿಕೊಂಡು ನೋಡಿದರು.

“ನಮ್ಮ ಆ ಹಳೆಯ ಗುಡ್ಡ ನಮ್ಮ ಕಡೆಗೆ ಒಂದು ಕಲ್ಲನ್ನು ಎಸೆಯಿತು. ತನ್ನನ್ನು ನಾವೆಲ್ಲಾದರೂ ಮರೆತುಗಿರತೇವೆಂದು.” ಮನೆಯ ಯಜಮಾನ ಸಂಭಾಳಿಸಿಕೊಂಡು ಹೇಳಿದ. “ಆಗೊಮ್ಮೆ ಈಗೊಮ್ಮೆ ಈ ಪರ್ವತರಾಯ ತಲೆದೂಗಿ ಕೆಳಗೆ ಬರುವೆನೆಂದು

ಗದ್ದರಿಸುತ್ತಾನೆ. ಆದರೆ ನಮ್ಮದು ಹಳೆಯ ನೆಂಟುತನ. ಒಟ್ಟಾರೆ ನಾವಿಬ್ಬರೂ ಒಳ್ಳೇ ಒಮ್ಮತದಿಂದ ನಡೆಯುತ್ತಲೇ ಬಂದಿದ್ದೇವೆ. ಆತ ನಿಜವಾಗಿ ಗಟ್ಟಿ ಮನಸ್ಸು ಮಾಡಿ ಕೆಳಗೆ ಬಂದುದೇ ಆದರೆ ನಮಗೆ ಖಾತ್ರಿ ಆಶ್ರಯಸ್ಥಾನ ಸಮೀಪವೇ ಸುರಕ್ಷಿತವಾಗಿದೆ."

ಇಷ್ಟು ಹೊತ್ತಿಗೆ ಆಗಂತುಕನು ಕರಡಿಯ ಮಾಂಸದ, ತನ್ನ ರಾತ್ರಿಯೂಟವನ್ನು ಮುಗಿಸಿರಬೇಕೆಂದು ನಾವು ಭಾವಿಸೋಣ. ತನ್ನ ಸಹಜ ಸರಸ ರೀತಿಯಿಂದ ಆ ಕುಟುಂಬದೊಂದಿಗೆ ಸಮಾನತೆಯ ಭೂಮಿಕೆಯಲ್ಲಿ ತನ್ನನ್ನು ತಂದು ನಿಲ್ಲಿಸಿದನೆಂದು ತಿಳಿಯೋಣ. ಅವರೆಲ್ಲ ತಮ್ಮ ಪರ್ವತ ಪರಿವಾರಕ್ಕೆ ಒಪ್ಪಿದವನೊಬ್ಬನಂತೆ, ಸ್ವೈರವಾಗಿ ಮನಬಿಚ್ಚಿ ಮಾತನಾಡತೊಡಗಿದರು. ಅವನು ಅಭಮಾನಿಯಾದರೂ ಸೌಮ್ಯ ಪ್ರಕೃತಿಯವ- ಸಿರಿವಂತ ಹಿರಿತನದ ಜನರಲ್ಲಿ ಆತ ಬಿಗುಮಾನದ ಅಹಂಮನ್ಯವಾಗಿದ್ದನು. ಆದರೆ ತಗ್ಗಿದ ಗುಡಿಸಲ ಬಾಗಿಲಿಗೆ ತಲೆ ಬಗ್ಗಿಸಲು ಯಾವಾಗಲೂ ಸಿದ್ಧ. ಬಡವನ ಒಲೆಯ ಬಳಿಯಲ್ಲಿ ಮಗನಾಗಲೋ, ತಮ್ಮನಾಗಲೋ ಆತ ಮುಂದು. ಆ ಕಣಿವೆಯ ಮನೆಯಲ್ಲಿ ಭಾವನೆಯ ಸರಳತೆಯ ಕಾವು ದೊರೆತವು. ನ್ಯೂ ಇಂಗ್ಲಂಡದಲ್ಲಿ ವ್ಯಾಪಿಸಿದ್ದ ಬುದ್ಧಿವಂತಿಕೆ ದೊರೆಯಿತು. ಅಲ್ಲಿಯ ನೆಲದ ಮಣ್ಣಿನಲ್ಲಿ ಬರೆದ ಕಾವ್ಯವು ಅವರು ತಮಗೆ ತಿಳಿಯದಂತೆ ಗಿರಿಶಿಖರಗಳಿಂದ ಕಡಿದಾದ ಕಂದರಗಳಿಂದ ತಮ್ಮ ರುದ್ರ ರಮಣೀಯವಾದ ಮನೆಯ ಹೊಸ್ತಿಲಿನಿಂದ ಸಂಗ್ರಹಿಸಿದ್ದು ಅವನಿಗೆ ದೊರೆಯಿತು. ಆತ ದೂರ ಒಂಟಿಯಾಗಿ ಅಲೆದಾಡಿದ್ದನು. ಅವನ ಜೀವಮಾನವೆಲ್ಲ ಒಂದು ಏಕಾಕಿಯಾದ ಶೂನ್ಯ ಪಥವಾಗಿತ್ತು. ಏಕಂದರೆ ತನ್ನ ಸ್ವಭಾವಕ್ಕೆ ಸಹಜವಾದ ಒಂದು ಮೇಲ್ಮಟ್ಟದ ಜಾಗರೂಕತೆಯಿಂದ ಅವನ ಸಂಗಾತಿ ಒಡನಾಡಿಗಳಾಗಬಹುದಾದ ಮಂದಿಯಂದಲೂ ಆತ ದೂರ ಬೇರೆಯಾಗಿ ಉಳಿದಿದ್ದನು. ಆ ಕುಟುಂಬವೂ ಅಷ್ಟು ದಯಾಳುವೂ ಆತಿಥ್ಯಪರವೂ ಆಗಿದ್ದರು. ಹೊರಗಿನ ವಿಶಾಲ ಜಗತ್ತಿನಿಂದ ಅಗಲಿಕೆಯನ್ನೂ ಒಗ್ಗಟ್ಟಿನ ಅರಿವನ್ನೂ ಪಡೆದಿತ್ತು. ಇಂಥ ವೃತ್ತಿಯು ಪ್ರತಿಯೊಂದು ಕುಟುಂಬ ವಲಯದಲ್ಲಿ ಒಂದು ಪವಿತ್ರ ಸ್ಥಾನವನ್ನು ಕಾದಿಡುವದುಂಟು. ಆ ಸ್ಥಾನದತನಕ ಯಾವ ಅತಿಥಿಗೂ ಪ್ರವೇಶವಿರಲಾರದು. ಆದರೆ

ಇಂದು ಸಂಜೆ ಸುಸಂಸ್ಕೃತ ಪರಿಷ್ಕೃತ ಯುವಕನು ಆ ಸರಳ ಸಜ್ಜನ ಗುಡ್ಡಗಾಡು ಜನರ ಮುಂದೆ ತನ್ನ ಹೃದಯಕ್ಕೆ ತೋಡಿಸಿಕೊಳ್ಳುವಂತೆ ಒಂದು ಭವಿಷ್ಯಸೂಚಕ ಸಹಾನುಭೂತಿಯು ಒತ್ತಾಯಪಡಿಸಿತೆನ್ನಬೇಕು. ಅದೇ ಭಾವನೆ ಆ ಜನರಿಗೂ ಅಷ್ಟೇ ಬಿಚ್ಚು ಮನಸಿನ ವಿಶ್ವಾಸದಿಂದ ಆತನಿಗೆ ಪ್ರತ್ಯುತ್ತರ ಕೊಡುವಂತೆ ಬಲವಂತಪಡಿಸಿತು. ಅದು ಹೀಗೆ ಆಗುವದೇ. ಏಕಂದರೆ ಹುಟ್ಟಿಗಿಂತ ಹಣೇಬರಹದ ಬಂಧವು ಹೆಚ್ಚು ಹತ್ತಿರದ ಬಂಧವಲ್ಲವೇ?

ಆ ತರುಣನ ಚಾರಿತ್ರ್ಯದ ರಹಸ್ಯವೆಂದರೆ ಒಂದು ಉನ್ನತವಾದ ತಾತ್ವಿಕವೆನಿಸುವ ಹಿರಿಯಾಸೆ; ಇಲ್ಲವೇ ಒಂದು ಮಹತ್ವಾಕಾಂಕ್ಷೆ. ಆತ ಅವಿಖ್ಯಾತವಾದ ಬಾಳು ಬದುಕುವದು ಅವನಿಗೆ ಸಹನವಾದೀತು. ಆದರೆ ಸತ್ತ ಮೇಲೆ ಮರೆಯಲ್ಪಡುವದು ಸಹ್ಯವಲ್ಲ. ಒತ್ತಾಸೆಯ ಅಭಿಲಾಶೆ ಆಶೆಯಾಗಿ ರೂಪಾಂತರ ಹೊಂದಿತ್ತು; ಮತ್ತು ಚಿರಸಂಚಿತ ಆಶೆಯು ಒಂದು ನಿಶ್ಚಿತತೆಯಾಗಿ ಮಾರ್ಪಟ್ಟಿತ್ತು- ಅದೇನೆಂದರೆ ಈಗ ಆತ ಅಜ್ಞಾತನಾಗಿ ಸಾಗುತ್ತಿದ್ದರೂ ಅವನ ಮಾರ್ಗವನ್ನು ಅವನಿಗೆ ಅದನ್ನು ತುಳಿಯುವಾಗ ತಿಳಿಯದಂತಾದರೂ-ಒಂದು ಭಾಗ್ಯಶ್ರೀಯು ಬೆಳಗುತ್ತಿತ್ತು. ಆದರೆ ಈಗ ವರ್ತಮಾನವಾಗಿದ್ದ ಈ ಮಬ್ಬುಗತ್ತಲೆಯಲ್ಲಿ ಭವಿಷ್ಯವು ಹಿಂದಿರುಗಿ ದಿಟ್ಟಿಸಿ ನೋಡಿದಾಗ ಇತರ ನಿಕೃಷ್ಟ ಶ್ರೇಯಸ್ಸುಗಳು ಕಳೆಗುಂದಿ ಮಾಯವಾಗುತ್ತಿರುವಾಗ ಇನ್ನಿಷ್ಟು ಉಜ್ವಲವಾಗಿ ಬೆಳಗುವ ಅವನ ಹೆಜ್ಜೆಗಳ ಸಮುಜ್ವಲ ಪ್ರಭೆಯನ್ನು ಅದು ಗುರುತಿಸಬಹುದು. -ಯಾರೂ ಗುರುತಿಸದೇ ಹೋದ ಪ್ರತಿಭಾ ಪುರುಷನು ತನ್ನ ತೊಟ್ಟಿಲಿಂದ ಸಮಾಧಿಗೆ ಸಾಗಿದನೆಂದು.

“ಇನ್ನೂ” ಆ ಆಗಂತುಕನು ನುಡಿದ; ಅವನ ಗಲ್ಲಗಳಿಗೆ ಕೆಂಪೇರಿತು. ಕಣ್ಣುಗಳು ಮಿಂಚಿ ಹೊಳೆದವು. “ಇನ್ನೂ ನಾನು ಏನೂ ಮಾಡಿಲ್ಲ. ನನ್ನಿಂದ ಏನೂ ಆಗಿಲ್ಲ. ಈ ಭೂಮಿಯಿಂದ ನಾನು ನಾಳೆ ಮಾಯವಾದರೆ ನಿಮ್ಮಷ್ಟು ಕೂಡ ಇನ್ನಾರೂ ಅರಿತವರು ಇರಲಾರರು. ಅರಿತದ್ದು ಏನು. ’ಸಾಕೋ’ದ ತಪ್ಪಲಿನಿಂದ ಒಬ್ಬ ಹೇಳ

ಹೆಸರಿಲ್ಲದ ಹರೆಯದವನು ಕತ್ತಲು ಕವಿಯುವಾಗ ಬಂದಿದ್ದ; ಆತ ಆ ಸಂಜೆಯಲ್ಲಿ ತನ್ನ ಹೃದಯವನ್ನೇ ತೆರೆದು ತೋಡಿಕೊಂಡಿದ್ದ ಮತ್ತು ಹೊತ್ತು ಮೂಡುವವದರೊಳಗೆ ಕಣಿವೆಯಿಂದ ಹಾದು ಹೋಗಿದ್ದ. —ಮುಂದೆ ಯಾರ ಕಣ್ಣಿಗೂ ಬೀಳಲಿಲ್ಲ - ಇಷ್ಟೇ. ಆ ಸಂಚಾರಿಯು ಎತ್ತ ಕಡೆಗೆ ಹೋದ. – ಆದರೆ ನನ್ನ ಭವಿತವ್ಯವನ್ನು ಸಾಧಿಸಿದ ಹೊರತು ನಾನು ಸಾಯಲಾರೆ. ಅನಂತರ ಸಾವು ಬರಲಿ. ಆತನಕ ನನ್ನ ಸ್ಮಾರಕ ನಾನೇ ಕಟ್ಟಿ ಆಗುವದು!"

ಎಂಥ ಮನೋವಿಕಾರದಲ್ಲಿಯೂ ತಾನಾಗಿ ಸಹಜವಾದ ಭಾವನೆಯ ಹೊನಲು ಚಿಮ್ಮಿ ಹರಿಯುತ್ತಿತ್ತು. ಅದು ಆ ಕುಟುಂಬಕ್ಕೆ ಆ ತರುಣನು ಎಷ್ಟೇ ಪರಕೀಯನಾದರೂ ಆತನನ್ನು ಅರಿತುಕೊಳ್ಳುವುದಕ್ಕೆ ನೆರವು ನೀಡಿತು. ಹಾಸ್ಯಾಸ್ಪದವಾದುದನ್ನು ಅರ್ಥಮಾಡಿಕೊಳ್ಳುವ ಒಂದು ತೀವ್ರ ಸಂವೇದನೆಯು ಇದ್ದುದರಿಂದ ಆ ತರುಣ ತಾನು ಮೋಸದಿಂದ ಅಡ್ಡ ಹಾಯ್ದು ಭಾವಪರವಶತೆಯ ಬಗ್ಗೆ ತಾನೇ ನಾಚಿಕೊಂಡ.

"ನೀನು ನನ್ನನ್ನು ನೋಡಿ ನಗುತ್ತೀಯೆ" ಆತ ಹಿರಿಯ ಹುಡುಗಿಯ ಕೈಯನ್ನು ತನ್ನ ಕೈಯಲ್ಲಿ ಹಿಡಿಯುತ್ತ ನುಡಿದನು. ಮತ್ತು ನಕ್ಕನು "ನನ್ನ ಹಿರಿಯಾಸೆಯ ಹುಚ್ಚು ಹವ್ಯಾಸವನ್ನು ನೀನು ಅರಿತಂತಿದೆ. ಮೌಂಟ ವಾಶಿಂಗಟನ್ ಶಿಖರದ ಮೇಲೆ ಕೇವಲ ಸುತ್ತಲಿನ ಸೀಮೆಯಿಂದ ಜನ ನನ್ನನ್ನು ಕಣ್ಣಿಟ್ಟು ನೋಡಲೆಂದು ಹಿಮದಲ್ಲಿ ಸೆಟೆದುಕೊಂಡು ನಾನು ಸಾಯುವೆನೋ- ಎಂಬಂತೆ ಭಾವಿಸಿರುವಿ. ಏನೇ ಇರಲಿ. ಆ ಶಿಖರ ಮಾನವನ ಮಹಾಪತಿಮೆಗೆ ಉದಾತ್ತವಾದ ಪಾದಪೀಠವಾದೀತು."

"ಈ ಬೆಂಕಿಯ ಬಳಿ ಕುಳಿತಿರುವದು ಲೇಸು" ಆ ಹುಡುಗಿಯು ನಾಚುತ್ತ ಮರುನುಡಿದಳು. "ಯಾರೂ ನಮ್ಮ ಬಗ್ಗೆ ವಿಚಾರಮಾಡದಿದ್ದರೂ ಸರಿ. ಇಲ್ಲಿ ಬೆಚ್ಚಗೆ ಸಮಾಧಾನದಲ್ಲಿ ಸುಖವಾಗಿ ಕುಳಿತಿರುವದು ಲೇಸು..."

"ನನಗೆನಿಸುತ್ತದೆ" ಆಕೆಯ ತಂದೆ ಒಂದು ವಿಚಾರತಂದ್ರಿಯ ತೆಕ್ಕೆಯಿಂದ ಹೊರಬಿದ್ದು ಆಡಿದ. "ಆ ತರುಣನ ಮಾತಿನಲ್ಲಿ ಏನೋ ಸ್ವಾಭಾವಿಕವಾದ ಸತ್ಯಾಂಶವಿದೆ. ನನ್ನ ಮನಸ್ಸು ಆ ಕಡೆಗೆ ಒಲಿದಿದ್ದರೆ ನನಗೂ ಹಾಗೇ ಎನಿಸುತ್ತಿತು. "ಓ! ಹೆಣ್ಣೆ ಈ ಸೋಜಿಗ ಕಂಡೆಯಾ?" ತನ್ನ ಹೆಂಡತಿಯನ್ನು ಉದ್ದೇಶಿಸಿ ಆತ ಮಾತು ಮುಗಿಸಿದ. "ಇವರ ಮಾತುಕತೆ ನನ್ನ ತಲೆಯನ್ನು ಖಂಡಿತವಾಗಿಯೂ ಎಂದೂ ಕೂಡಿ ಬರದ ಸಂಗತಿಗಳ ಕಡೆಗೆ ಓಡಿಸಿದ!"

"ಒಂದು ವೇಳೆ ಅವು ಕೂಡಿ ಬಂದಾವು." ಆ ಹೆಂಡತಿಯೆಂದಳು "ನಮ್ಮ ಗಂಡಸು ವಿದುರವಾದ ಮೇಲೆ ಅವನು ಮಾಡುವನಂದು ವಿಚಾರ ಮಾಡುತ್ತಿದ್ದಾನೆಯೇ?"

"ಶೆ, ಶೆ, ಇಲ್ಲ" ಆತ ಕೂಗಿದ. ದುಷ್ಕಲ್ಪನೆಯನ್ನೇ ತನ್ನ ನಿರ್ಭತ್ಸನೆಯದಾದರೂ ನಿರ್ದಯವಲ್ಲದ ದನಿಯಲ್ಲಿ ನಿರಾಕರಿಸುತ್ತ, "ನಾನು ನಿನ್ನ ಸಾವಿನ ಬಗೆಗೆ ಆಲೋಚಿಸಿದಾಗಲೆಲ್ಲ, ಈಸ್ಥರ ನಿನ್ನ ಸಾವನ್ನು ಕುರಿತು ಆಲೋಚಸುತ್ತೇನೆ. ಆದರೆ ಬಾರ್‌ಟ್ಲೆಟ್‌ನಲ್ಲಿಯೋ ಬೆಥ್ಲೆಹೆಂದಲ್ಲಿಯೋ ಲಿಟ್ಲಟನ್‌ದಲ್ಲಿಯೋ ಬೆಳ್ಳಿಬೆಟ್ಟಗಳ ಸುತ್ತಲಿನ ಚಿಕ್ಕಪಟ್ಟಣ ವಸತಿಯ ಬಳಿಯಲ್ಲಿ ಎಲ್ಲಾದರೂ ನಮಗೊಂದು ಒಳ್ಳೆ ಹೊಲಮನೆ ಇರಬೇಕೆಂದು ನನ್ನ ಇಚ್ಛೆ ಇತ್ತು. ನನ್ನ ನೆರೆಹೊರೆಯವರಲ್ಲಿ ನಾನು ಚನ್ನಾಗಿ ಕಾಣಬೇಕು, ರಾಯರೆಂದು ಕರಿಸಿಕೊಳ್ಳಬೇಕು. ಜನರಲ್ ಕೋರ್ಟಿಗೆ ಪಂಚನಾಗಿ ಒಂದೆರಡು ಬಾರಿಯಾದರೂ ಕಳಿಸಲ್ಪಡಬೇಕು. ಅಲ್ಲಿ ವಕೀಲನಷ್ಟೇ ಹಿತವನ್ನು ಒಬ್ಬ ಸಾದಾ ಪ್ರಾಮಾಣಿಕ ಮನುಷ್ಯನು ಮಾಡಿ ಕಾಣಿಸಬಹುದು. ನಾನು ತೀರ ಹಣ್ಣು ಮುದುಕನಾಗಿ ನೀನೂ ಹಣ್ಣು ಮುದುಕಿಯಾಗಿ ಒಬ್ಬರನ್ನೊಬ್ಬರು ಅಗಲಲೇಬೇಕಾದಾಗ ನಿಮ್ಮನ್ನೆಲ್ಲ ಸುತ್ತಲೂ ಅಳುತ್ತ ಕೂಡ್ರಲು ಬಿಟ್ಟು ನಾನು ಹಾಯಾಗಿ ಸಾಯಬಹುದು. ಹಾಲುಗಲ್ಲಿನಷ್ಟೆ ಪಾಟಿಕಲ್ಲಿನ ಸಮಾಧಿ ನನಗೆ ಸರಿಹೋಗಬಹುದು. ಅದರ ಮೇಲೆ ಮತ್ತೇನಿಲ್ಲ, ನನ್ನ ಹೆಸರು, ಪ್ರಾಯ, ಒಂದು ಪ್ರಾರ್ಥನೆಯ ಸೊಲ್ಲು ಮತ್ತು ನಾನು

ಪ್ರಾಮಾಣಿಕನಂತೆ ಬಾಳಿ ಕ್ರೈಸ್ತನಂತೆ ಸತ್ತೆನೆಂದು ತಿಳಿಸುವ ಒಂದು ವಾಕ್ಯ ಇಷ್ಟಿದ್ದರೆ ಸಾಕು."

"ಅದೇ ನೋಡಿ" ಆಗಂತುಕ ಉದ್ಗರಿಸಿದ. "ಸ್ಮಾರಕವನ್ನು ಬಯಸುವದು, ನಮ್ಮ ಸ್ವಭಾವಧರ್ಮ - ಅದು ಹಾಲುಗಲ್ಲಿನದಿರಲಿ, ಪಾಟಕಲ್ಲಿನದಿರಲಿ, ಶಿಲೆಯ ಸ್ತಂಭವಿರಲಿ ಅಥವಾ ಸಾರ್ವತ್ರಿಕವಾದ ಮಾನವೀ ಹೃದಯದಲ್ಲಿಯ ಶ್ರೇಯೋಮಯವಾದ ಸ್ಮೃತಿಯಾಗಿರಲಿ."

"ಇಂದು ರಾತ್ರಿ ನಾವು ವಿಚಿತ್ರವಾಗಿಬಿಟ್ಟಿದ್ದೇವೆ." ಮನೆಯ ಯಜಮಾನಿಯೆಂದಳು. ಅವಳ ಕಣ್ಣುಗಳಲ್ಲಿ ನೀರು ತುಂಬುತ್ತಿತ್ತು. "ಹೀಗೆ ಮಂದಿಯು ಹುಚ್ಚಾಪಟ್ಟೆ ಹರಿಯುತ್ತಿದ್ದಾಗ ಅದೊಂದು ಅಶುಭದ ಚಿಹ್ನವೆಂದು ಅನ್ನುತ್ತಾರೆ. ಅದೋ ಮಕ್ಕಳ ಸದ್ದು ಕೇಳಿರಿ."

ಎಲ್ಲರೂ ಕಿವಿಗೊಟ್ಟು ಕೇಳಿದರು. ಕಿರಿಯ ಮಕ್ಕಳನ್ನು ಆಚೆ ಕೋಣೆಯಲ್ಲಿ ಮಲಗಿಸಿದ್ದರು. ಆದರೆ ನಡುವಿನ ಬಾಗಿಲು ತೆರದೇ ಇಟ್ಟಿದ್ದರು. ಅವರು ತಮ್ಮತಮ್ಮೊಳಗೆ ಸುಟಿಯಾಗಿ ಮಾತನಾಡುವದು ಹೊರಗೆ ಕೇಳುತ್ತಿತ್ತು. ಪ್ರತಿಯೊಬ್ಬರಿಗೂ ಈ ಅಗ್ಗಿಷ್ಟಿಕೆಯ ಸುತ್ತಲಿದ್ದವರ ಚಾಳಿ ಅಂಟಿದಂತೆ ಕಂಡಿತು. ಆ ಮಕ್ಕಳು ಸ್ವಚ್ಛಂದ ಬಯಕೆಗಳನ್ನು ಆಡಿ ತೋರಿಸುವದರಲ್ಲಿ ಒಬ್ಬರನ್ನೊಬ್ಬರು ಮೀರುತ್ತಿದ್ದರು. ತಾವು ದೊಡ್ಡವರಾದ ಮೇಲೆ ಏನೇನು ಮಾಡಿ ತೋರಿಸುವರೆಂಬ ಬಾಲಿಷ ಯೋಜನೆಗಳವು. ಕೊನೆಗೂ ಒಬ್ಬ ಪುಟ್ಟ ಹುಡುಗ ತನ್ನ ಅಣ್ಣ ಅಕ್ಕಂದಿರಿಗೆ ಹೇಳುವ ಬದಲು ಹೊರಗೆ ಕುಳಿತ ತಾಯಿಯನ್ನು ಕೂಗಿ "ಅಮ್ಮಾ ನನ್ನ ಬಯಕೆ ಏನು ಗೊತ್ತೆ? ಕೇಳು, ಅಪ್ಪ, ನೀನು, ಅಜ್ಜಿ ಮತ್ತು ನಾವೆಲ್ಲರೂ, ಈ ಹೊಸಬರೂ ಕೂಡ ಎದ್ದು ಹೋಗಿ ಫ್ಲೂಮ ಹಳ್ಳದಲ್ಲಿ ನೀರು ಕುಡಿಯಬೇಕು" ಎಂದ.

ಆ ಚಳಿಗಾಳಿಯ ರಾತ್ರಿಯ ಕಗ್ಗತ್ತಲಿನಲ್ಲಿ ಬೆಚ್ಚಗಿನ ಹಾಸಿಗೆಯನ್ನು ಬಿಟ್ಟು, ಒಳ್ಳೇ ಕಾವಿನ ಅಗ್ಗಿಷ್ಟಿಕೆಯ ಹತ್ತಿರದಿಂದ ಎಳೆದೊಯ್ದು ಆ ಫ್ಲೂಮ ಹಳ್ಳದ ದಂಡೆಗೆ ಭೆಟ್ಟಿಕೊಡಲು ಅವರನ್ನು ಎಬ್ಬಿಸುವ ಆ ಪೋರನ ಕಲ್ಪನೆಗೆ ಅವರು ಖೊಳ್ಳನೆ ನಕ್ಕರು. ಆ ಹಳ್ಳವು ಗುಡ್ಡದ ಮಗ್ಗುಲಿನಿಂದ ಕೆಳಗೆ ಕಣಿವೆಯಲ್ಲಿ ಹರಿಯುತ್ತಿತ್ತು. ಆ ಹುಡುಗ ಮಾತು ಮುಗಿಸುವಷ್ಟರಲ್ಲಿ ಒಂದು ಬಂಡಿಯು ಹೊರಗೆ ಹಾದಿಗುಂಟ ಗಡಗಡಿಸುತ್ತ ಬಾಗಿಲ ಮುಂದೆ ಒಂದು ನಿಮಿಷ ನಿಂತಿತು. ಅದರಲ್ಲಿ ಒಬ್ಬಿಬ್ಬರೋ ಮೂವರೋ ಕುಳಿತಂತೆ ಕಂಡಿತು. ಅವರು ಒಂದು ಮೊಳದ ಪದ್ಯವನ್ನು ಅಸಡ್ಡಾಳವಾಗಿ ಹಾಡಿ ಅಪಸ್ವರ ಒಡಕು ದನಿಯು ಆ ಕಣಿವೆಯ ಬಂಡೆಗಳ ನಡುವೆ ಪ್ರತಿಧ್ವನಿಸುತ್ತಿತ್ತು. ಹಾಡುಗಾರರು ತಮ್ಮ ಪ್ರವಾಸವನ್ನು ಮುಂದುವರೆಸಬೇಕೋ ಇಲ್ಲವೇ ರಾತ್ರಿಗಾಗಿ ಇಲ್ಲಿಯೇ ತಂಗಬೇಕೋ ಎಂದು ಅನುಮಾನಿಸುತ್ತಿದ್ದರು.

"ಅದೋ ಅಮ್ಮ" ಆ ಪುಟ್ಟಹುಡುಗ ಮತ್ತೆ ನುಡಿದ "ಆ ಮಂದಿ ನಮ್ಮನ್ನು ಫ್ಲೂಮ ಹೊಳೆಯತನಕ ಕರೆದೊಯ್ಯತ್ತಿದ್ದರು." ಆ ಬಾಲಕನ ಬಾಲಭಾಷೆಯನ್ನು ಕೇಳಿ ಅವರೆಲ್ಲ ಮತ್ತೊಮ್ಮೆ ನಕ್ಕರು. ಆದರೆ ಆಗಲೇ ಹಿರಿಯ ಮಗಳ ಉತ್ಸಾಹದ ಮೇಲೆ ಒಂದು ಚಿಕ್ಕ ಮೋಡ ಹಾಯ್ದು ಹೋದಂತಾಯಿತು. ಆಕೆ ಗಂಭೀರಳಾಗಿ ಬೆಂಕಿಯನ್ನೇ ನೋಡಹತ್ತಿದಳು. ನಿಟ್ಟುಸಿರೋ ಎಂಬಂತೆ ಒಂದು ಶ್ವಾಸವನ್ನೆಳೆದಳು. ಅದನ್ನು ಹತ್ತಿಕ್ಕಲು ಒಂದು ಚಿಕ್ಕ ಹೋರಾಟ ನಡೆದಾಗ್ಯೂ ಆ ಉಸಿರು ಉದ್ದಕ್ಕೆ ಹೊರಟೇಬಿಟ್ಟಿತು. ಕೂಡಲೇ ಹಾರಿಬಿದ್ದು ನಾಚಿಕೊಂಡು ಸುತ್ತಲಿನ ಮಂಡಳಿಯನ್ನು ದಿಟ್ಟಸಿದಳು- ಅವರೇನಾದರೂ ತನ್ನ ಎದೆಯಾಳದಲ್ಲಿ ಇಣಿಕಿ ನೋಡಿದರೋ ಎಂಬಂತೆ ಆಗಂತುಕ ಏನು ಆಲೋಚನೆ ನಡೆಸುತ್ತಿದ್ದಳೆಂದು ಕೇಳಿಯೇ ಬಿಟ್ಟ,

"ಏನಿಲ್ಲ" ಕೆಳಮೋರೆ ಮಾಡಿ ಮುಗುಳುನಗುತ್ತ ನುಡಿದಳಾಕೆ. ಈಗ ತಾನು ಒಂಟಿಯಾಗಿದ್ದಂತೆ ಅವಳಿಗೆ ಅನಿಸಿತು.

“ಹಾಗೋ। ಆಶ್ಚರ್ಯ. ಅನ್ಯರ ಹೃದಯದಲ್ಲಿ ಏನುಂಟೆಂಬುದನ್ನು ಅರಿತುಕೊಳ್ಳುವ ವಿಶೇಷ ಶಕ್ತಿ ನನ್ನಲ್ಲಿದೆ.” ಆತ ತುಸು ಗಂಭೀರವಾಗಿ ಹೇಳಿದ. “ನಿನ್ನ ರಹಸ್ಯವನ್ನು ನಾನು ಬಿಡಿಸಿಹೇಳಲೇ? ಬೆಚ್ಚಗಿನ ಅಗ್ಗಿಷ್ಟಿಕೆಯ ಬಳಿಯಲ್ಲಿ ಒಬ್ಬ ತರುಣಿ ನಡುಗಿದರ ಅದರ ಅರ್ಥವೇನೆಂದು ನಾನು ಬಲ್ಲೆ. ತಾಯಿಯ ಪಕ್ಕದಲ್ಲೇ ಇದ್ದರೂ ಒಂಟಿಯಾಗಿದ್ದೇನೆಂದು ದೂರಿಕೊಂಡಾಗಲೂ ಅದರ ಮರ್ಮವನ್ನು ನಾನು ಬಲ್ಲೆ. ಈ ಭಾವನೆಗಳೇನೆಂಬುದನ್ನು ನಾನು ಹೇಳಿಬಿಡಲೇ?”

“ಅವನ್ನು ಹೇಳಿಬಿಟ್ಟರೆ ಅವೆಂದೂ ಹುಡುಗಿಯ ಮನೋಭಾವನೆಗಳಾಗಿ ಉಳಿಯಲಾರವು” ಆ ಗಿರಿಕನ್ಯೆ ಅವನ ಕಣ್ಣುತಪ್ಪಿಸಿ ಕುಲುಕುಲು ನಗುತ್ತ ಉತ್ತರಿಸಿದಳು.

ಇವೆಲ್ಲ ಹಾಗಿರಲಿ. ಕದಾಚಿತ್ ಅವರಿಬ್ಬರ ಎದೆಯಲ್ಲಿ ಪ್ರೇಮದ ಒಂದು ಅಂಕುರವು ಜಿಗಿಯುತ್ತಿರಬಹುದು. ಆ ಪ್ರೇಮ ನಂದನವನದಲ್ಲಿಯೇ ಅರಳುವಂತಹದಿತ್ತು. ಏಕೆಂದರೆ ಈ ನೆಲದಲ್ಲಿ ಅದು ಮಾಗುವದು ಶಕ್ಯವಿದ್ದಿಲ್ಲ. ಆ ಹೆಣ್ಣು ಅವನಲ್ಲಿದ್ದಂಥ ಸೌಮ್ಯವಾದ ಅಭಿಮಾನವನ್ನೇ ಆರಾಧಿಸುತ್ತಾಳೆ. ಅಂತೆಯೇ ಮಾನಿಯೂ ವಿಚಾರಶೀಲನೂ ಜೊತೆಗೆ ದಯಾಪರನೂ ಆದ ವ್ಯಕ್ತಿಯು ಅವಳಂತಹ ಸರಳ ಮುಗ್ಧತೆಯಿಂದ ಸೆರೆಯಾಳಾಗಿ ಬರುತ್ತಾನೆ. ಆದರೆ ಅವರಿಬ್ಬರೂ ಮಾತನಾಡುತ್ತಿದ್ದಂತೆ ಆ ಮುಗ್ಧೆಯ ಸ್ವಾಭಾವಿಕವಾದ ಕಾಮನೆಗಳನ್ನು ಮೊಗದ ಮೇಲಿನ ಕಾಂತಿಯ ಕಳೆಯುಳ್ಳ ಛಾಯೆಗಳನ್ನು ಅವಳ ಆನಂದ ಬಾಷ್ಪಗಳನ್ನೂ ಅವನು ಅವಲೋಕಿಸುತ್ತಿರುವಾಗಲೇ ಕಣಿವೆಯೊಳಗಿಂದ ಗಾಳಿಯು ಹೆಚ್ಚು ಆಳವಾಗಿ ಶೂನ್ಯವಾದ ಧ್ವನಿಯನ್ನು ಮಾಡುತ್ತ ಬೀಸಿತು. ಆ ಧ್ವನಿಯು ಗಾಳಿಯ ದೆವ್ವಗಳು ಹಾಡಿಕೊಂಡ ಮೇಳದ ಹಾಡಿನ ಸ್ವರದಂತೆ ತೋರಿದವು, ಕುಶಲನಾದ ಆಗಂತುಕನಿಗೆ. ಅಂಥ ದೆವ್ವಗಳು ಹಾಡಿಕೊಂಡ ಮೇಳದ ಹಾಡಿನ ಸ್ವರದಂತೆ ತೋರಿದವು. ಅಂಥ ದೆವ್ವಗಳು ಹಿಂದೆ ಹಳೆಯ ಕೆಂದು ಇಂಡಿಯನ್ನರ ಕಾಲದಲ್ಲಿ ಬೆಟ್ಟಗಳಲ್ಲಿ ವಾಸಮಾಡಿಕೊಂಡಿದ್ದವು. ಮತ್ತು ಈ ಕಡಿದಾದ ಕಲ್ಗೋಡೆಗಳನ್ನೂ ಕಣಿವೆಗಳನ್ನೂ ತಮ್ಮ

ಪವಿತ್ರ ಕ್ಷೇತ್ರಗಳಾಗಿ ಮಾಡಿಕೊಂಡಿದ್ದವು. ಹಾದಿಗುಂಟ ಒಂದು ಸ್ಮಶಾನಯಾತ್ರೆ ಹೊರಟಂತೆ ವಿಲಾಪಧ್ವನಿಯು ಮೊಳಗುತ್ತಿತು. ಸುತ್ತಲಿನ ಮಬ್ಬನ್ನು ದೂರಮಾಡಲು ಮನೆಯವರು ಆ ಅಗ್ಗಿಷ್ಟಿಕೆಯ ಬೆಂಕಿಯಲ್ಲಿ ಪೈನಮರದ ಟೊಂಗೆಗಳನ್ನು ಒಗೆದರು. ಅವುಗಳ ಎಲೆಗಳು ಚಟಪಟಿಸಿ ಉರಿಯತೊಡಗಿದವು; ಜ್ವಾಲೆಗಳು ಎರತೊಡಗಿದವು. ಆ ಬೆಳಕು ಮತ್ತ ಶಾಂತಿ ಮತ್ತು ನಮ್ರ ಸುಖದ ಒಂದು ಸದೃಶ್ಯವನ್ನು ಬೆಳಗಿ ಕಾಣಿಸಿತು. ಅದರ ಸುತ್ತಲೂ ಆ ಬೆಳಕು ಮುದ್ದಿನಿಂದ ಸುಳಿಯಿತು; ಅವರನ್ನೆಲ್ಲ ಮುದ್ದಾಡಿತು. ಅಲ್ಲಿ ಚಿಕ್ಕಮಕ್ಕಳ ಪುಟ್ಟಪುಟ್ಟ ಮೋರೆಗಳಿದ್ದವು. ಅವರವರ ಹಾಸಿಗೆಗಳಿಂದ, ಪಿಳಿಪಿಳಿ ಕಣ್ಣುಬಿಡುತ್ತಿದ್ದವು. ಮತ್ತೆ ಇಲ್ಲಿ ತಂದೆಯ ಬಲುಮೆಯ ಮೈಕಟ್ಟು ತಾಯಿಯ ಸೌಮ್ಯವಾದ ವಿನಮ್ರವಾದ ಎಚ್ಚರಿಕೆಯ ಠೀವಿ, ಹುಬ್ಬೇರಿಸಿದ ಎತ್ತಿದ ಹಣೆಯ ಯುವಕ, ಅದೇ ಅರಳುತ್ತಿದ್ದ ಹುಡುಗ, ಈಗಲೂ ತೀರ ಬೆಚ್ಚಗಿನ ಮೂಲೆಯ ಹೆಣಿಕೆಯ ಗುಂಡು ಸೂಜಿಗಳನ್ನು ಆಡಿಸುತ್ತ ಕುಳಿತ ಮುದಿ ಅಜ್ಜಿ ಎಲ್ಲವೂ ನಿಚ್ಚಳಕವಾಗಿ ಮತ್ತೆ ಬೆಳಗಿದವು. ಆ ವೃದ್ಧೆ ತನ್ನ ಕೆಲಸದಿಂದ ತಲೆಯೆತ್ತಿ, ಬೆರಳುಗಳು ಲಗುಬಗೆಯಾಗಿ ಕೆಲಸ ಮಾಡುತ್ತಿರುವಾಗಲೇ ಮುಂದೆ ಮಾತನಾಡಿದಳು. "ಹರೆಯದವರಂತೆ ಮುದಿಮಂದಿಗೂ ಅವರವೇ ಕಲ್ಪನೆಗಳಿರುವುದುಂಟು. ನೀವು ಯೋಚನೆಮಾಡುತ್ತ ಕುಳಿತಿರಿ. ನನ್ನ ಮನಸ್ಸೂ ಎಲ್ಲೋ ಹರಿದಾಡಲು ತುಡಿಯುತ್ತದೆ. ಸಮಾಧಿಯ ಒಂದೋ ಎರಡೋ ಹೆಜ್ಜೆ ಉಳಿದಿರುವ ನನ್ನಂತಹ ಮುದುಕಿಗೆ ಇಚ್ಛೆಯಾದರೂ ಯಾವುದಿದ್ದೀತು? ಆದರೂ ಮಕ್ಕಳೇ, ಅದನ್ನು ನಿಮಗೆ ಹೇಳಿಬಿಡುವ ತನಕವೂ ಆ ಇಚ್ಛೆ ಪಿಶಾಚಿಯಂತೆ ನನ್ನನ್ನು ಪೀಡಿಸದಿರದು."

"ಅಮ್ಮಾ ಅದೇನು" ಗಂಡ ಹೆಂಡಿರಿಬ್ಬರೂ ಕೂಡಿಯೇ ಕೇಳಿದರು.

ಆಗ ಆ ಮುದುಕಿ ಪರಮಗುಹ್ಯವನ್ನು ಅರುಹುವ ಆವಿರ್ಭಾವದಲ್ಲಿ ಅವರಿಗೆ ಹೇಳಿದಳು. ಆ ಆವಿರ್ಭಾವಕ್ಕೆ ಸುತ್ತಲಿನ ಜನ ಹತ್ತಿರ ಸಾರಿದರು. ತನ್ನ ಶವಸಂಸ್ಕಾರಕ್ಕೆ ಅವಶ್ಯವಿದ್ದ ಎಷ್ಟೋ ವಸ್ತುಗಳನ್ನು ಆಕೆ ಸಿದ್ಧಮಾಡಿಕೊಂಡಿದ್ದಳಂತೆ – ಎಷ್ಟೋ

ವರ್ಷಗಳ ಹಿಂದೆ. ಒಂದು ಲಿನನ್ ಬಟ್ಟೆಯ ಶವಾಚ್ಛಾದನ, ರೇಶಿಮೆಯ ನಿರಿಗೆಯಂಚು ಹೊಲಿದ ಒಂದು ಟೊಪ್ಪಿಗೆ, ಆಕೆಯ ಮದುವೆಯ ದಿನದಿಂದ ಮೊದಲಾಗಿ ಆವರೆಗೆ ಆಕೆ ತೊಟ್ಟಿದ್ದ ಎಲ್ಲ ಉತ್ತಮ ಬಟ್ಟೆಗಳು. ಆದರೆ ಇಂದು ಸಂಜೆ ಒಂದು ಹಳೇ ಮೂಢನಂಬಿಕೆ ಹೇಗೋ ವಿಚಿತ್ರವಾಗಿ ನೆನಪಾಯಿತು. ಆ ನಂಬಿಗೆ ಹೇಳುವದೆಂದರೆ-ಆಕೆಯ ಎಳೆವಯಸ್ಸಿನಲ್ಲಿ ಹಾಗೆಯೇ ನಂಬಲಾಗುತ್ತಿತ್ತು- ಶವದ ಯಾವದೇ ಸಂಗತಿ ನಡೆಯಲು ತಪ್ಪಿದರೆ, ನಿರಿಗೆ ಸರಿಯಾಗಿರದಿದ್ದರೆ, ಟೊಪ್ಪಿಗೆ ಸರಿ ಕೂಡ್ರದಿದ್ದರೆ, ಪೆಟ್ಟಿಗೆಯೊಳಗಿನ ಮಣ್ಣು ಹೆಂಟೆಗಳ ಆ ಶವವು ತಣ್ಣಗಿನ ಕೈಗಳನ್ನು ಚಾಚಿ ಅದನ್ನು ಸರಿಪಡಿಸಲು ಹೆಣಗುತ್ತದೆಯಂತೆ. ಬರಿ ಈ ವಿಚಾರವೇ ಅವಳನ್ನು ಅಳುಕುವಂತೆ ನರಗುಂದುವಂತೆ ಮಾಡಿತು.

“ಹಾಗೆ ಆಡಬೇಡ ಅಜ್ಜಿ” ಹುಡುಗಿ ಗಡಗಡ ನಡುಗಿದಳು.

ಮತ್ತೆ ಮುದುಕಿ ಮುಂದುವರೆದಳು. ಒಂದು ಅಸಾಮಾನ್ಯ ಕಳವಳದಿಂದ ಆದರೆ ತನ್ನ ಮೂರ್ಖತನಕ್ಕೆ ತಾನೇ ವಿಚಿತ್ರವಾಗಿ ನಗುತ್ತ “ನಿಮ್ಮಲ್ಲೊಬ್ಬರು- ಮಕ್ಕಳೇ ಸಮನಾಗಿ ಕೇಳಿರಿ. ನಿಮ್ಮ ಈ ಅಮ್ಮನನ್ನು ಶವದ ಪೆಟ್ಟಿಗೆಯಲ್ಲಿ ಮಲಗಿಸಿದ ಮೇಲೆ, ನಿಮ್ಮಲ್ಲಿ ಒಬ್ಬರು ನನ್ನ ಮೋರೆಗೆ ಕನ್ನಡಿ ಹಿಡಿಯಬೇಕು. ಯಾರಿಗೆ ಗೊತ್ತು? ನಾನು ನನ್ನ ಬಿಂಬವನ್ನು ಎಲ್ಲ ಸರಿಯಾಗಿದೆಯೋ ಎಂದು ಒಮ್ಮೆ ಕನ್ನಡಿಯಲ್ಲಿ ನೋಡಿಕೊಳ್ಳಬಹುದು.”

“ವೃದ್ಧರೂ ತರುಣರೂ ಎಲ್ಲರೂ ಸಮಾಧಿಗಳ ಹಾಗೂ ಸ್ಮಾರಕಗಳ ಕುರಿತು ಕನವರಿಸುತ್ತೇವೆ” ಆಗಂತುಕನು ಪಿಸುಗುಟ್ಟಿದನು. “ನಾವೆ ಮುಳುಗುತ್ತಿರುವಾಗ ನಾವಿಕನಿಗೆ ಏನು ಅನಿಸುವದೋ ಎಂದು ನಾನು ಸೋಜಿಗಪಡುತ್ತೇನೆ. ಅವರು ಆ ವಿಶಾಲವಾದ ಅನಾಮಿಕವಾದ ಮಹಾಸಾಗರದಲ್ಲಿ ಅಜ್ಞಾತವಾಗಿ ಅವಿಖ್ಯಾತವಾಗಿ ಜಲಸಮಾಧಿಸ್ತರಾಗುತ್ತಾರೆ.”

ಒಂದು ಕ್ಷಣ ಆ ಮುದುಕಿಯ ಭಯಾನಕವಾದ ಕಲ್ಪನೆಯು ಅವಳ ಮಾತು ಕೇಳುತ್ತಿರುವವರ ಮನಸ್ಸನ್ನು ತನ್ಮಯಗೊಳಿಸಿತು. ಹೊರಗೆ ರಾತ್ರಿಯ ಕತ್ತಲೆಯಲ್ಲಿ ಒಂದು ಸದ್ದು ಬಿರುಗಾಳಿಯ ಬೀಸಿನಂತೆ ಏರುವ ರಭಸದಲ್ಲಿ ದೊಡ್ಡದಾಯಿತು, ಭಯಾನಕವಾಯಿತು. ಆಗಲೂ ಆ ದುರ್ದೈವ ಆ ದುರ್ದೈವಿ ಗುಂಪಿಗೆ ಅರಿವೇ ಆಗಲಿಲ್ಲ. ಆ ಮನೆ, ಮನೆಯೊಳಗಿನೆಲ್ಲವೂ ಆ ಸುದ್ದಿಗೆ ನಡುಗಿತು. ಭೂಮಿ ಕಂಪಿಸುವಂತೆ ತೋರಿತು- ಆ ಭಯಂಕರ ಸದ್ದುಕೊನೆಗಾಲದ ಕಹಳೆಯ ಮೊಳಗೋ ಎಂಬಂತೆ ಅನಿಸಿತು. ಹಿರಿಯರೂ ಎಳೆಯರೂ ಒಬ್ಬರನೊಬ್ಬರು ಭಯಾನಕ ದೃಷ್ಟಿಯಿಂದ ನೋಡಿಕೊಂಡರು. ಒಂದುಕ್ಷಣ ನಿಸ್ತೇಜ ಭಯಚಕಿತ ದಿಙ್ಮೂಢ ನಿಸ್ತಬ್ಧರಾಗಿ ನಿಂತರು. ಮರುಕ್ಷಣದಲ್ಲಿ ಎಲ್ಲರೂ ಗಟ್ಟಿಯಾಗಿ ಒಮ್ಮೆಲೇ ಕೂಗಿಕೊಂಡರು. “ಜಾರಿತು! ಜಾರಿತು!”

ಆ ಉದ್ಗಾರವು ವಾಚಾಮಗೋಚರವಾದ ದುರಂತ ಅನಾಹುತವನ್ನು ಸೂಚಿಸುವದೇ ಹೊರತು ಬಣ್ಣಿಸಲಾರದು, ಬಲಿಗೊಳಗಾದ ಅವರೆಲ್ಲರೂ ತಮ್ಮ ಆ ಗುಡಿಸಲಿನಿಂದ ಹೊರನುಗ್ಗಿದರು. ಮತ್ತು ತಮಗೆ ಕ್ಷೇಮವೆಂದು ಕಂಡ ಆ ಸ್ಥಳದಲ್ಲಿ ಆಶ್ರಯ ಹುಡುಕಿದರು. ಅವರು ತಮ್ಮನ್ನು ರಕ್ಷಿಸಿಕೊಳ್ಳುವದರ ಬದಲು ಸರ್ವನಾಶದ ಹಾದಿಯಲ್ಲಿಯೇ ನೇರವಾಗಿ ನುಗ್ಗಿದರು, ಪರ್ವತದ ಒಂದು ಭಾಗವೆಲ್ಲ ಕುಸಿದುಬಿದ್ದು ದುರಂತವನ್ನು ತಂದೊಡ್ಡಿತು. ಆ ಮನೆಯನ್ನು ಮುಟ್ಟುವದಕ್ಕಿಂತ ಮೊದಲೇ ಪರ್ವತ ಪ್ರವಾಹವು ಎರಡು ಕವಲು ಒಡೆಯಿತು. ಒಂದು ಕಿಟಕಿಯ ಕದವನ್ನೂ ಅಲುಗಾಡಿಸದೆ ಪರಿಸರದ ಎಲ್ಲ ಪ್ರದೇಶವನ್ನೂ ಆವರಿಸಿ ಹಾದಿಯನ್ನೆಲ್ಲ ಅಡ್ಡಗಟ್ಟಿ ತನ್ನ ದುರ್ನಿರವಾದ ಗತಿಯಲ್ಲಿ ಸಿಕ್ಕ ಪ್ರತಿಯೊಂದನ್ನೂ ನಾಶಮಾಡಿತು. ಸುತ್ತಲಿನ ಪರ್ವತ ಶ್ರೇಣಿಗಳಲ್ಲಿ ಈ ಜಾರು ಬಂಡಿಗಳ ಉತ್ಪಾತದ ಗುಡುಗು ಮೊಳಗಿ ಅಬ್ಬರಿಸಿ ಪಡಿನುಡಿಯ ಸದ್ದು ಅಡಗುವದಕ್ಕಿಂತ ಮೊದಲೇ ಮರಣಾಂತಿಕ ವೇದನೆಗಳನ್ನು ಅನುಭವಿಸಿ ಆ ಪರ್ವತಪಾತಕ್ಕೆ ಆಹುತಿಯಾದ ನರಬಲಿಗಳಿಗೆ ಚಿರಶಾಂತಿ ಲಭಿಸಿತು. ಅವರ ಕಳೇಬರಗಳೂ ಎಂದೂ ಸಿಗಲಿಲ್ಲ.

ಮರುದಿನ ನಸುಕಿಗೆ ತಿಳಿಯಾದ ಹಗುರಾದ ಹೊಗೆ ಆ ಗುಡಿಸಲಿನ ಹೊಗೆಕಿಂಡಿಯೊಳಗಿಂದ ಹೊರಗೆ ಬರುತ್ತಿದ್ದುದು ಕಂಡುಬಂದಿತು. ಆ ಪರ್ವತದ ಮಗ್ಗಲಗುಂಟ ಒಳಗೆ ಬೆಂಕಿ ಇನ್ನೂ ಅಗ್ಗಿಷ್ಟಿಕೆಯಲ್ಲಿ ಕಿಡಿಯಾಡುತ್ತಿತ್ತು. ಕುರ್ಚಿಗಳು ಇನ್ನೂ ವೃತ್ತಾಕಾರವಾಗಿ ನಿಂತಿದ್ದವು- ನೋಡಿದರೆ ಮನೆಯೊಳಗೆ ವಾಸಿಸುವವರು ಈಗತಾನೇ ಹೊರಗಿನ ವಿಧ್ವಂಸವನ್ನು ನೋಡಲು ಹೋಗಿದ್ದು ಈಗಲೇ ಹಿಂದಿರುಗಿ ಬರುವವರಂತಿದ್ದವು-ದೈವಿಕವಾಗಿ ತಮ್ಮನ್ನು ಪಾರುಮಾಡಿದ್ದಕ್ಕಾಗಿ ಭಗವಂತನಿಗೆ ಆಭಾರ ಮನ್ನಣೆಗಳನ್ನು ಸಲ್ಲಿಸಲಿಕ್ಕೆ ಎಲ್ಲರೂ ತಮ್ಮ ತಮ್ಮ ನೆನಪಿನ ಕುರುಹುಗಳನ್ನು ಬೇರೆ ಬೇರೆ ಬಿಟ್ಟುಹೋಗಿದ್ದರು. ಆ ಮೂಲಕ ಪ್ರತಿಯೊಬ್ಬರಿಗಾಗಿ ಒಂದೊಂದು ಕಂಬನಿ ಬಿಡಲು ಕುಟುಂಬದ ಪರಿಚಿತರಿಗೆ ಅನುಕೂಲ ಮಾಡಿಕೊಟ್ಟಂತಿತ್ತು. ಅವರ ಹೆಸರು ಯಾರು ಕೇಳಿಲ್ಲ? ಎಲ್ಲೆಲ್ಲೂ ಆ ಕತೆ ಹೇಳಲಾಗಿದೆ. ಅಲ್ಲವೆ ಅದು ಈ ಪರ್ವತ ಪ್ರಾಂತದ ಹಳೆಯ ಆಖ್ಯಾಯಿಕೆಯಾಗಿ ಎಂದೆಂದಿಗೂ ಉಳಿಯುವದು. ಕವಿಗಳು ಆ ಕುಟುಂಬದ ದುರಂತದ ಹಾಡನ್ನು ಕಟ್ಟಿ ಹಾಡಿದ್ದಾರೆ.

ಆ ಭಯಾನಕ ರಾತ್ರಿಯಲ್ಲಿ ಒಬ್ಬ ಆಗಂತುಕ ಅತಿಥಿಯನ್ನು ಆ ಗುಡಿಸಲಿನಲ್ಲಿ ಸ್ವಾಗತಿಸಿದರೆಂದೂ ಆತ ಆ ಎಲ್ಲ ಮನೆಯವರೊಂದಿಗೆ ಆ ದುರಂತ ಅನಾಹುತದಲ್ಲಿ ಪಾಲುಗಾರನೆಂದೂ ಭಾವಿಸಲು ಎಲ್ಲರಿಗೆ ಸಾಕಷ್ಟು ಆಧಾರಗಳಿದ್ದವು. ಇತರರು ಇಂಥ ಊಹೆಗೆ ಸಾಕಷ್ಟು ಆಧಾರಗಳಿಲ್ಲವೆಂದು ಆ ಮಾತನ್ನೇ ಅಲ್ಲಗಳೆಯುತ್ತಿದ್ದರು. ಅಯ್ಯೋ ಪಾಪ! ಹಿರಿಹುಮ್ಮಸದ ಆ ತರುಣ, ಅವನ ಪಾರ್ಥಿವ ಅಮರತ್ವದ ಕನಸು! ಕೇವಲ ಅಜ್ಞಾತವಾದ ಅವನ ಹೆಸರು ಮತ್ತು ವ್ಯಕ್ತಿತ್ವ ಅದೇ ರೀತಿ ಪಾಪ, ಅವನ ಚರಿತ್ರ, ಬದುಕಿನ ರೀತಿ, ಅವನ ಯೋಜನೆಗಳು -ಅದೊಂದು ಒಡೆಯಲಾರದ ಒಗಟು, ಭೇದಿಸಲಾರದ ಗೂಢರಹಸ್ಯ ಅವನ ಮರಣವೂ ಅಸ್ತಿತ್ವವೂ ಬಿಡಿಸಲಾರದ ಸಮಸ್ಯೆ ಆ ಮರಣಕಾಲದ ದಾರುಣ ವೇದನ ಇನ್ಯಾರಿಗಿತ್ತು?

# ಮಹಾ ಶಿಲಾಮುಖ

ಒಂದು ಸಂಜೆ ಸೂರ್ಯ ಮುಳುಗುವ ಹೊತ್ತಿಗೆ ತಾಯಿಯೂ ಮಗನೂ ತಮ್ಮ ಗುಡಿಸಲಿನ ಬಾಗಿಲಲ್ಲಿ ಮಹಾ ಶಿಲಾಮುಖವನ್ನು ಕುರಿತು ಮಾತನಾಡುತ್ತ ಕುಳಿತಿದ್ದರು. ಅವರು ಕಣ್ಣು ತೆರೆದರೆ ಸಾಕು, ಮೈಲುಗಟ್ಟಲೆ ದೂರದಿಂದ ಬಹು ಸ್ಪಷ್ಟವಾಗಿ ಕಾಣುತ್ತಿತ್ತು. ಅದರ ಚರ್ಯೆಯ ಲಕ್ಷಣಗಳೆಲ್ಲ ಸೂರ್ಯ ಪ್ರಕಾಶದಿಂದ ಉಜ್ವಲವಾಗಿದ್ದವು.

**ಮಹಾ ಶಿಲಾಮುಖವೆಂದರೇನು?**

ಒಂದು ಉನ್ನತ ಪರತ ಪರಿವಾರದ ನಡುವೆ, ಸಾವಿರಾರು ನಿವಾಸಿಗಳನ್ನೊಂಡ ವಿಶಾಲವಾದ ಕಣಿವೆಯೊಂದಿತ್ತು. ಈ ಸಜ್ಜನರಲ್ಲಿ ಕೆಲವರು ಮರದ ಕೊರಡುಗಳಿಂದ ಕಟ್ಟಿದ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಅದರ ಸುತ್ತಲೂ ಕಡಿದಾದ ಕಠಿಣವಾದ ಗುಡ್ಡದೊರೆಗಳಲ್ಲಿ ಕಪ್ಪುಕಾಡು ದಟ್ಟವಾಗಿ ಬೆಳದಿತ್ತು; ಮಿಕ್ಕವರು ಸುಖಕರ ಹೊಲಮನೆಗಳಲ್ಲಿ ಮನೆಮಾಡಿಕೊಂಡಿದ್ದರು. ಮತ್ತು ಮಂದವಾದ ಇಳುಕಲುಗಳ ಮೇಲಿನ ಸಂಪನ್ನವಾದ ಭೂಮಿಯಲ್ಲಿ ಇಲ್ಲವೇ ತಪ್ಪಲು ಸಮತಲ ನೆಲದಲ್ಲಿ ಸಾಗುವಳಿ ಸಾಗಿಸುತ್ತಿದ್ದರು. ಇನ್ನೂ ಕೆಲವರು ಜನಸಾಂದ್ರವಾದ ಹಳ್ಳಿಗಳಲ್ಲಿ ಗುಂಪಾಗಿ ನೆಲೆಸಿದ್ದರು. ಆ ಹಳ್ಳಿಗಳ ನಡುವೆ ಪ್ರವಹಿಸುತ್ತಿರುವ ಒಂದು ದೊಡ್ಡ ಬೆಟ್ಟದ ತೊರೆಯನ್ನು ತಡೆಹಿಡಿದು ಪಳಗಿಸಿ ಅರಳೆಯ ಗಿರಣಿಯನ್ನು ನಡಿಸುವ ಕಾರ್ಯದಲ್ಲಿ ತೊಡಗಿದ್ದರು. ಒಟ್ಟಿನಲ್ಲಿ ಆ ಪ್ರದೇಶದ ನಿವಾಸಿಗಳು ವಿಪುಲರಾಗಿದ್ದು ವಿವಿಧ ಉಪಜೀವಿಕೆಯ ವೃತ್ತಿಯವರಾಗಿದ್ದರು. ಆದರೆ ಆ ಎಲ್ಲ ಜನ ಅಬಾಲವೃದ್ಧರು, ಆ ಹಿರಿಕಲ್ಲ ಮೋರೆಯ ಕುರಿತು ಒಂದು ಬಗೆಯ ಸಲಿಗೆಯುಳ್ಳವರಾಗಿದ್ದರು. ಅವರಲ್ಲಿ ಕೆಲವರಿಗೆ ಈ ಭವ್ಯ

ಪ್ರಾಕೃತಿಕ ಘಟನೆಯನ್ನು ಉಳಿದ ನೆರೆಹೊರೆಯವರಿಗಿಂತ ಹೆಚ್ಚು ಪೂರ್ಣವಾಗಿ ತಿಳಿದುಕೊಳ್ಳುವ ಬುದ್ಧಿವಂತಿಕೆಯಿತ್ತು.

ಆ ಮಹಾ ಶಿಲಾಮುಖವು ಒಂದು ಭವ್ಯ ರಾಜಲೀಲಾ ವಿನೋದ ವೃತ್ತಿಯ ನಿರ್ಮಾಣವಾಗಿತ್ತು. ಅದು ಪರ್ವತದ ಲಂಬವಾದ ಪಾರ್ಶ್ವದ ಮೇಲೆ ಒಟ್ಟಿಗೆ ಬಿದ್ದಿದ್ದ ಪ್ರಚಂಡ ಬಂಡೆಗಳಿಂದ ರಚಿತವಾಗಿತ್ತು. ಯೋಗ್ಯ ಅಂತರದಿಂದ ನೋಡಿದರೆ ಮನುಷ್ಯನ ಮುಖಚರ್ಯೆಯ ರೂಪರೇಖೆಗಳನ್ನು ಸರಿಯಾಗಿ ಹೋಲುವಂತ ಆಗಿತ್ತು. ಒಬ್ಬ ಪ್ರಚಂಡ ದೈತ್ಯನೋ ಘಟೋತ್ಕಚನೋ ತನ್ನದೇ ಪ್ರತಿರೂಪವನ್ನು ಆ ಗಿರಿ ಪಾರ್ಶ್ವದ ಮೇಲೆ ಶಿಲ್ಪಿಸಿದಂತೆ ತೋರುತ್ತಿತ್ತು. ಅಲ್ಲಿ ಹಣೆಯ ಅಗಲವಾದ ಕಮಾನು ಒಂದು ನೂರು ಅಡಿ ಉನ್ನತವಾದ ಬಾಗಿದ ಮೂಗು, ವಿಸ್ತೃತವಾದ ತುಟಿಗಳು, ಅವು ಮಾತನಾಡಿದರೆ ಕೊಳ್ಳದ ಈ ತುದಿಯಿಂದ ಆ ತುದಿಯವರೆಗೂ ಗುಡುಗಿನ ಉಚ್ಚಾರಗಳು ಗಡಗಡಿಸಿ ಉರುಳುತ್ತಿದ್ದವೇನೋ-ಇವೆಲ್ಲ ಒಡಮೂಡಿದ್ದವು. ಪ್ರೇಕ್ಷಕನು ತೀರ ಹತ್ತಿರ ಬಂದರೆ ಈ ದೈತ್ಯ ಮುಖ ಮುದ್ರೆಯ ರೂಪರೇಖೆಗಳು ಮಾಯವಾಗುತ್ತಿದ್ದವೆಂಬುದು ನಿಜ, ಆಗ ಕಂಡುಬರುವದು ಬರೇ ಭಾರ ಭಾರವಾದ ರಾಕ್ಷಸ ಬಂಡೆಗಲ್ಲುಗಳು ಒಂದರ ಮೇಲೊಂದು ಅಸ್ತವ್ಯಸ್ತವಾಗಿ ಹೇರಿನಿಂತವು. ಆದರೆ ಪ್ರೇಕ್ಷಕ ಹೆಜ್ಜೆ ಹಿಂಜರಿಸಿ ಹೋಗುವಂತೆ ಮತ್ತೆ ಆ ಅದ್ಭುತ ಮುಖಚರ್ಯೆ ಮತ್ತೆ ಗೋಚರವಾಗುವದು. ಮತ್ತೂ ದೂರ ಸರಿದಂತೆ ಮತ್ತೂ ನಿಕಟವಾಗಿ ಮನುಷ್ಯನ ಮುಖವನ್ನು ಹೋಲುವಂತೆ ತನ್ನ ಮೂಲದ ದಿವ್ಯತೆಯನ್ನೆಲ್ಲ ಅಚ್ಚಳಿಯದಂತೆ ಕಾಪಾಡಿಕೊಂಡು ಆ ಶಿಲಾಮುಖ ಕಾಣುತ್ತಿತ್ತು. ದೂರದೂರ ಅದು ಅಸ್ಪಷ್ಟವಾದಂತೆ ಮೋಡಗಳು ಹಾಗೂ ಗುಡ್ಡದ ಬಣ್ಣಗೊಂಡ ಉಗಿಯ ಸುರುಳಿಗಳೂ ಗುಂಪುಗುಂಪಾಗಿ ಸುತ್ತಿದಾಗಂತೂ ಆ ಶಿಲಾಮುಖವು ಕೇವಲ ಸಜೀವ ಮುಖವಾಗಿಯೇ ಕಂಗೊಳಿಸುತ್ತಿತ್ತು.

ಆ ಶಿಲಾಮುಖವನ್ನು ನೋಡುತ್ತಿದ್ದಂತೆ ಅಲ್ಲಿಯ ಮಕ್ಕಳು ಗಂಡಸರಾಗಿಯೂ ಹೆಂಗಸರಾಗಿಯೂ ಬೆಳೆಯುವುದು ಒಂದು ಸೌಭಾಗ್ಯವೇ ಆಗಿತ್ತು. ಏಕೆಂದರೆ ಆ

ಮೋರೆಯ ಎಲ್ಲ ಲಕ್ಷಣಗಳೂ ಉದಾತ್ತವಾಗಿದ್ದವು. ಅದರ ಭಾವಮುದ್ರೆ ಒಮ್ಮಲೇ ಭವ್ಯವೂ ಮಧುರವೂ ಆಗಿತ್ತು. ಅದೊಂದು ವಿಶಾಲವಾದ ಸ್ನೇಹದ ಕಾವಿನಿಂದ ಹಿಗ್ಗಿದ ಹೃದಯದ ಪ್ರಭೆಯೇ ಎಲ್ಲ ಮಾನವಕೋಟಿಯನ್ನು ತನ್ನ ಸ್ನೇಹದ ಆಲಿಂಗನದಲ್ಲಿ ಅವಚಿಕೊಂಡು ಇನ್ನೂ ಇತರರಿಗೆ ಅಲ್ಲಿ ಅವಕಾಶವಿಟ್ಟಂತೆ ಭಾಸವಾಗುತ್ತಿತ್ತು. ಆ ಮುಖವನ್ನು ನೋಡುವದು ಒಂದು ಶಿಕ್ಷಣ ಸಂಸ್ಕಾರವಾಗಿತ್ತು. ಎಷ್ಟೋ ಜನಗಳ ಮತದಂತೆ ಕಣಿವೆಯ ಫಲವತ್ತತೆಗೆ ಈ ಭಾಗ್ಯಮುಖದ ಮುದ್ರೆಯು ಅದರ ಮೇಲೆ ಪ್ರಸನ್ನತೆಯೇ ಕಾರಣವಾಗಿತ್ತು.

ನಾವು ಆರಂಭದಲ್ಲಿ ಹೇಳಿದಂತೆ ಆ ತಾಯಿ ಮತ್ತು ಅವಳ ಚಿಕ್ಕಮಗ ತಮ್ಮ ಗುಡಿಸಲ ಬಾಗಿಲಲ್ಲಿ ಕುಳಿತು ಆ ಶಿಲಾಮುಖವನ್ನು ದಿಟ್ಟಿಸುತ್ತ ಆ ಕುರಿತೇ ಮಾತನಾಡುತ್ತಿದ್ದರು. ಆ ಹುಡುಗನ ಹೆಸರು ಅರ್ನೆಸ್ಟ

"ಅಮ್ಮಾ, ಆ ಭದ್ರಾಕಾರದ ದೈತ್ಯ ಮುಖವು ನನ್ನನ್ನು ನೋಡಿ ಮಂದಹಾಸ ಬೀರುತ್ತಿದೆ. ಬಹುಶಃ ಅದು ಮಾತನಾಡಬಹುದೆಂದು ನನ್ನ ಎಣಿಕೆ. ದಯಾಳುವಂತೆ ಕಾಣುವ ಅದರ ಧ್ವನಿಯೂ ಅಷ್ಟೇ ಸೊಗಸಾಗಿರಬೇಕು. ಅದನ್ನೇ ಹೋಲುವ ವ್ಯಕ್ತಿಯೊಬ್ಬನನ್ನು ನೋಡಿದರೆ ನಾನು ಖಂಡಿತವಾಗಿ ಅತನನ್ನು ಮನವಾರೆ ಪ್ರೀತಿಸುವೆನು."

"ಪುರಾತನ ಭವಿಷ್ಯವಾಣಿ ಕೂಡಿ ಬರುವದಾದರೆ"

ತಾಯಿ ಉತ್ತರಿಸಿದಳು, "ಅಂತಹುದೇ ಮೋರೆಯ ಮನುಷ್ಯನನ್ನು ನಾವು ಒಂದಲ್ಲ ಒಂದು ದನ ಸಂಧಿಸಬಹುದು."

"ಭವಿಷ್ಯವಾಣಿ ಎಂದರೇನು?" ಅರ್ನೆಸ್ಟ ಆತುರದಿಂದ ಕೇಳಿದ.

ಆ ತಾಯಿ ಮಗನಿಗೆ ಹೇಳತೊಡಗಿದಳು-ತಾನು ಅರ್ನೆಸ್ಟನಿಗಿಂತಲೂ ಚಿಕ್ಕವಳಿರುವಾಗ ತನ್ನ ತಾಯಿ ಹೇಳಿದ ಕತೆಯನ್ನು ಇನ್ನೂ ಆಗಲಿರುವದರ ಕತೆ. ಅದು

ತುಂಬ ಹಳೆಯ ಕತೆ, ಆ ಕಣಿವೆಯಲ್ಲಿ ಹಿಂದಕ್ಕೆ ನೆಲೆಸಿದ ಆದಿವಾಸಿ ಇಂಡಿಯನ್ನರೂ ತಮ್ಮ ಪೂರ್ವಜರಿಂದ ಅದನ್ನು ಕೇಳಿದ್ದರು. ಆ ಪೂರ್ವಜರಿಗೆ ಬೆಟ್ಟದ ತೊರೆಗಳು ಪಿಸುಗುಟ್ಟು ಮರದ ತುದಿಗಳ ಮರ್ಮರ ಧ್ವನಿಯು ಗೊಣಗುಟ್ಟು ಅದನ್ನು ಹೇಳಿದ್ದವಂದು ಅವರು ನಂಬಿದ್ದರು. ಆ ಕಥೆಯ ಸಾರಾಂಶವೆಂದರೆ ಒಂದಾನೊಂದು ದಿನ ಅಲ್ಲಿಯೇ ಒಂದು ಶಿಶು ಹುಟ್ಟುವದು. ಆತನು ಆ ಕಾಲದ ಸರ್ವಶ್ರೇಷ್ಠನೂ ಅತಿ ಉತ್ತಮನೂ ಆದ ವಿಭೂತಿಯಾಗಲು ಹುಟ್ಟಿಬಂದವನು. ಅವನ ಮುಖಚರ್ಯೆ ಪ್ರಾಯಬದ್ಧ ಅವಸ್ಥೆಯಲ್ಲಿ ಆ ಹಿರಿಕಲ್ಲ ಮೋರೆಯನ್ನೇ ಹೋಲುವದು, ಆ ಹಳೆಯ ಭವಿಷ್ಯವಾಣಿಯಲ್ಲಿ ದೃಢವಾದ ನಂಬಿಕೆಯಿಟ್ಟುಕೊಂಡು ಬಂದ ಹಳೆಯ ಸಂಪ್ರದಾಯದ ಜನರೂ ಹೊಸ ಹರೆಯದವರೂ ಕಡಿಮೆಯಿದ್ದಿಲ್ಲ. ಆದರೆ ಇತರರು ಜಗತ್ತನ್ನು ಹೆಚ್ಚು ಅರಿತವರು ಆ ಮೋರೆಯನ್ನೂ ವಿಭೂತಿಯ ಜನ್ಮವನ್ನೂ ನಿರೀಕ್ಷಿಸಿ ನಿರೀಕ್ಷಿಸಿ ಸೋತುಹೋದರು. ಏಕೆಂದರೆ ಅಂಥ ಮೋರೆಯ ಯಾವ ಮನುಷ್ಯನನ್ನೂ ಅವರು ಕಾಣಲಿಲ್ಲ. ಅಲ್ಲದೆ ನೆರೆಹೊರೆಯವನಿಗಿಂತಲೂ ಹಿರಿಯನಾಗಿ ಹೆಚ್ಚು ಉದಾತ್ತನಾಗಿ ಬೆಳೆದು ಬೆಳಕಿಗೆ ಬಂದ ಯಾವ ಹಿರಿಯನನ್ನೂ ಅವರು ಕಾಣಲಿಲ್ಲ. ಅಂಥವರು ಅದೊಂದು ಕೆಲಸಕ್ಕೆ ಬಾರದ ಕಟ್ಟು ಕತೆಯೆಂದು ತೀರ್ಮಾನಕ್ಕೆ ಬಂದರು ಏನೇ ಇರಲಿ; ಆ ಭವಿಷ್ಯವಾಣಿಯ ಮಹಾಪುರುಷನೂ ಇನ್ನೂ ಕಾಣಿಸಿಕೊಂಡಿದ್ದಿಲ್ಲ.

"ಅಮ್ಮಾ —ಓ ಅಮ್ಮಾ" ಅರ್ನೆಸ್ಟ ಕೈ ಎತ್ತಿ ಚಪ್ಪಾಳೆ ತಟ್ಟುತ್ತ ಉದ್ಗರಿಸಿದ. "ಆತನನ್ನು ನೋಡುವ ತನಕವೂ ನಾನು ಬದುಕಿ ಉಳಿಯುವೆನೆಂದು ಆಶಿಸುತ್ತೇನೆ."

ಅರ್ನೆಸ್ಟನ ತಾಯಿ ಮಮತಾಮಯಿ, ವಿಚಾರಶೀಲೆ ತನ್ನ ಪುಟ್ಟ ಮಗನ ಉದಾರ ಆಸೆಯನ್ನು ನಿರುತ್ಸಾಹಗೊಳಿಸದಿರುವದೇ ಹೆಚ್ಚು ಜಾಣತನದ್ದೆಂದು ಭಾವಿಸಿದಳು. ಆಕೆ ಇಷ್ಟೇ ಅಂದಳು, "ಸರಿ, ನೀನು ನೋಡಲೂಬಹುದು."

ಮತ್ತು ತಾಯಿ ಹೇಳಿದ ಕತೆಯನ್ನು ಅರ್ನೆಸ್ಟ ಎಂದೂ ಮರೆಯಲೇ ಇಲ್ಲ. ಆ ಹಿರಿಯ ಕಲ್ಲು ಮೋರೆಯನ್ನು ಕಂಡಾಗಲೆಲ್ಲ ಆ ಕತೆ ಅವನ ನೆನಪಿನಲ್ಲಿ ಇರುತ್ತಿತ್ತು.

ಅವನು ತನ್ನ ಬಾಲ್ಯವನ್ನು ತಾನು ಹುಟ್ಟಿದ ಆ ಮರದ ಗುಡಿಯಲ್ಲಿಯೇ ಕಳೆದುದು- ತಾಯಿಗೆ ವಿಧೇಯವಾಗಿ ಕರ್ತವ್ಯನಿಷ್ಠನಾಗಿ, ಅವಳ ಅನೇಕ ಕೆಲಸಗಳಲ್ಲಿ ನೆರವು ನೀಡುತ್ತಿದ್ದನು. ಈ ರೀತಿ ಸುಖಿಯಾಗಿ ಆದರೆ ಆಗಾಗ್ಗೆ ಚಿಂತನ ಗಾಂಭೀರ್ಯದಲ್ಲಿ ಕಳೆದ ಬಾಲ್ಯದಿಂದ ಆತ ಒಬ್ಬ ಸೌಮ್ಯ ಶಾಂತ ಯಾರ ಗಮನಕ್ಕೂ ಬಾರದ ಹುಡುಗನಾಗಿ ಬೆಳೆದ. ಗದ್ದೆಗಳಲ್ಲಿ ದುಡಿದು ಅವನು ಬಿಸಿಲಿನಲ್ಲಿ ಕಪ್ಪೇರಿದ್ದನು. ಆದರೆ ಖ್ಯಾತಿವೆತ್ತ ಶಾಲೆಗಳಲ್ಲಿ ಕಲಿತಂಥ ಮಕ್ಕಳಿಗಿಂತ ಹೆಚ್ಚಿನ ಬುದ್ಧಿಯ ಕಳೆಯು ಅವನ ಮುಖ ಬೆಳಗಿತ್ತು. ಆದರೂ ಅರ್ನೆಸ್ಟನಿಗೆ ಅಧ್ಯಾಪಕರಾರೂ ಇದ್ದಿಲ್ಲ. ಇಲ್ಲವೆಂದರೆ ಆ ಹಿರಿಯ ಶಿಲಾಮುಖವೊಂದೇ ಅವನ ಗುರು, ದಿನದ ದುಡಿಮೆ ಮುಗಿದ ಮೇಲೆ ಆತ ಆ ಮುಖದ ಕಡೆಗೆ ತಾಸುಗಟ್ಟಲೆ ಕಣ್ಣಿಟ್ಟು ನೋಡುತ್ತಿದ್ದ. ಆ ವಿಶಾಲ ಮುಖಚರ್ಯೆಯು ತನ್ನನ್ನು ಗುರುತಿಸಿತು. ಪ್ರೋತ್ಸಾಹದ ಹಾಗೂ ಕನಿಕರದ ಮಂದಸ್ಮಿತವನ್ನು ತನ್ನೆಡೆಗೆ ಬೀರಿತು. ತನ್ನ ಶಕ್ತಿ ಭಾವದ ದೃಷ್ಟಿಗೆ ಅದು ಪ್ರತ್ಯುತ್ತರ ನೀಡಿತು– ಎಂದು ಅನಿಸುವವರೆಗೂ ಆತ ಅದನ್ನು ದಿಟ್ಟಿಸುತ್ತಿದ್ದನು. ಇದೊಂದೇ ತಪ್ಪು ವಿಚಾರವೆಂದು ಒಪ್ಪಿಕೊಳ್ಳುವ ಹೊಣೆ ನಾನು ಹೊರಬೇಕಾಗಿಲ್ಲ, ಇಷ್ಟೊಂದು ನಿಜ. ಆ ಮುಖವು ಉಳಿದ ಮಂದಿಯನ್ನೆಲ್ಲ ಹೇಗೋ ಅದಕ್ಕೂ ಹೆಚ್ಚಿನ ಅನುಗ್ರಹದಿಂದ ಅರ್ನೆಸ್ಟನನ್ನು ನೋಡಿರಲಿಕ್ಕಿಲ್ಲ. ಆದರೆ ರಹಸ್ಯವೆಂದರೆ ಲೋಕದ ಇತರ ಜನರು ಪರಿಕಿಸಲಾರದುದನ್ನು ಆ ಮುಖಭಾವದಲ್ಲಿ ತರಳನ ಕೋಮಲವೂ ಶ್ರದ್ಧಾಳುವೂ ಆದ ಸರಳತೆಯು ಕಂಡುಕೊಂಡಿತು. ಹೀಗೆ ಪ್ರೇಮವು ಎಲ್ಲರಿಗೂ ಸಲ್ಲತಕ್ಕದ್ದು ಅವನೊಬ್ಬನದೇ ಸೊತ್ತಾಗಿ ಉಳಿಯಿತು.

ಇದೇ ಸುಮಾರಿಗೆ ಕಣಿವೆಯೊಳಗೆಲ್ಲ ಒಂದು ವದಂತಿ ಹಬ್ಬಿತು. ಯುಗಯುಗಾಂತರಗಳಿಂದ ಬರಲಿರುವನೆಂದು ಹೇಳಲಾಗುತ್ತಿದ್ದ, ಆ ಮಹಾಪರುಷನು ಕೊನೆಗೂ ಒಮ್ಮೆ ಕಂಡುಬಂದಿದ್ದಾನೆಂದು. ಕಂಡುಬಂದುದೇನಂದರೆ ಹಲವು ವರ್ಷಗಳ ಹಿಂದೆಯೇ ಅಲ್ಲಿಂದ ದೇಶಾಂತರಕ್ಕೆ ಹೊರಟುಹೋದ ತರುಣನೊಬ್ಬನು ಒಂದು ಕಡಲ ತಡಿಯ ಬಂದರದಲ್ಲಿ ನೆಲಸಿದ್ದು ಸ್ವಲ್ಪ ಹಣ ಶೇಖರಿಸಿಕೊಂಡು ಅಂಗಡಿಕಾರನಾಗಿ ಅಲ್ಲಿ ಬಂದು ನೆಲಸಿದ್ದನು. ಅವನ ಹೆಸರು

'ಗ್ಯಾದರಗೋಲ್ಡ' (ಅಂದರೆ 'ಸುವರ್ಣಶೇಖರಯ್ಯ' ಎಂದು) ಇದು ಅವನ ನಿಜವಾದ ಹೆಸರೋ ಅಥವಾ ಬದುಕಿನಲ್ಲಿ ಅವನ ಚಟಗಳಿಂದ ಅಥವಾ ಗಳಿಕೆಯ ಗೆಲುವಿನಿಂದ ಅವನಿಗೆ ಅಂಟಿಕೊಂಡು ಬಂದ ಅಡ್ಡ ಹೆಸರೋ ನನಗೆ ತಿಳಿದುಕೊಳ್ಳುವದಾಗಲಿಲ್ಲ. (ಸುವರ್ಣವನ್ನು ಶೇಖರಿಸುತ್ತಿದ್ದನಾದ್ದರಿಂದ ಸುವರ್ಣಶೇಖರನಾದನೋ ಗೊತ್ತಿಲ್ಲ) ಆತ ಒಳ್ಳೇ ಧೂರ್ತನೂ ಚಟುವಟಿಕೆಗಾರನೂ ಆಗಿದ್ದ. ಜತೆಗೆ ವಿಧಿಯ ಅನುಗ್ರಹದಿಂದ ಅವನಲ್ಲಿ ಜಗತ್ತು ಸುದೈವವೆಂದು ಕರೆಯಬಹುದಾದ ಆ ಅಗಮ್ಯವಾದ ಒಂದು ವಿಶೇಷ ಗುಣವೂ ಅವನಲ್ಲಿ ಬೆಳೆದಿತ್ತು. ಆ ಮೂಲಕ ಅವನು ವಪರೀತ ಸಿರಿವಂತನಾದ. ದೊಡ್ಡ ದೊಡ್ಡ ಹಡಗಗಳ ಒಂದು ಪಡೆಗೇ ಅವನು ಒಡೆಯನಾದ. ಈ ಒಬ್ಬ ಮನುಷ್ಯನ ಪರ್ವತಪ್ರಾಯವಾದ ಸಂಪತ್ತಿನ ಸಂಗ್ರಹಕ್ಕೆ ರಾಶಿಯ ಹಿಂದ ರಾಶಿ ತುಂಬಲು ಪ್ರಪಂಚದ ದೇಶಗಳೆಲ್ಲವೂ ಕೂಡಿ ಕೈಕೊಟ್ಟಂತೆ ತಂದಿತು. ಧ್ರುವಪ್ರದೇಶದ ಮಬ್ಬುಗತ್ತಲಿನಲ್ಲಿಯೇ ಚಾಚಿರುವಂತೆ ಕಾಣುವ ಉತ್ತರ ಶೀತ ಪ್ರದೇಶಗಳು ಉಣ್ಣೆ ತುಪ್ಪಳದ ತನ್ನ ಕಾಣಿಕೆಯನ್ನು ಕಳುಹಿಸುತ್ತಿದ್ದವು. ಉಷ್ಣ ಆಫ್ರಿಕೆಯು ಅವನಿಗಾಗಿ ತನ್ನ ಚಿನ್ನದ ಮಳಲನ್ನು ಸೋಯಿಸುತ್ತಿತ್ತು. ಪೂರ್ವವು ವೈಭವದ ಶಾಲುಗಳನ್ನೂ ಮಸಾಲೆಯ ಜೀನಸುಗಳನ್ನೂ ಚಹವನ್ನೂ ರತ್ನಗಳ ದೀಪ್ತಿಯನ್ನೂ ತೋರಮುತ್ತುಗಳ ಬೆಳಗುವ ಶುಭ್ರವಾದ ಕಾಂತಿಯನ್ನೂ ತಂದುಕೊಡುತಿತ್ತು. ಭೂಮಿಗಳಿಗಿಂತ ತಾನು ಹಿಂದುಳಿಯಲೇ ಬಾರದೆಂಬಂತೆ ಸಮುದ್ರವು ತನ್ನ ಪ್ರಚಂಡ ತಿಮಿಂಗಿಲುಗಳನ್ನು ತೆಗೆದೊಪ್ಪಿಸುತ್ತಿತ್ತು- ಶ್ರೀ ಗೆದರಗೋಲ್ಡನು ಅವುಗಳ ಎಣ್ಣೆ ಮಾರಿ ಲಾಭ ಮಾಡಿಕೊಳ್ಳಲೆಂದು. ಮೂಲ ಸರಕು ಏನೇ ಇರಲಿ, ಅವನ ಮುಷ್ಟಿಯಲ್ಲಿ ಆ ಅದು ಚಿನ್ನವಾಗುತ್ತಿತ್ತು. ಹಳೆಯ ಕಟ್ಟು ಕತೆಯ ಮಿಡಾಸ ರಾಜನಂತೆ ಅವನ ಕುರಿತು ಹೇಳಬಹುದಾಗಿತ್ತು. ಅವನು ತನ್ನ ಬೆರಳುಗಳಿಂದ ಯಾವದನ್ನೇ ಮುಟ್ಟಲಿ, ಅದು ಕೂಡಲೇ ಹೊಳೆಯ ಹತ್ತಿ ಹೊಂಬಣ್ಣ ಹೊಂದಿ ಸುವರ್ಣಧಾತುವಾಗಿ ಅಥವಾ ಅದಕ್ಕೂ ಹೆಚ್ಚು ಅವನಿಗನುಕೂಲವಾದ ನಾಣ್ಯಗಳ ರಾಶಿಯಾಗಿ ಮಾರ್ಪಾಡಾಗುತ್ತಿತ್ತು. ಮತ್ತು ಅವನ ಸಂಪತ್ತನ್ನು ಎಣಿಸಲಿಕ್ಕೆ ನೂರು ವರ್ಷಗಳು ಹಿಡಿಯುವಷ್ಟು ಸಿರಿವಂತನಾದ

ಮೇಲೆ ಶ್ರೀ ಗೆದರಗೋಲ್ಡ ಮಹಾಶಯನು ತಾನು ಹುಟ್ಟಿದೂರಾದ ಕಣಿವೆಯನ್ನು ನೆನೆದನು. ಅಲ್ಲಿಗೆ ಮರಳಿ ಹೋಗಿ ತಾನು ಹುಟ್ಟಿದಲ್ಲಿಯೇ ತನ್ನ ಬದುಕಿನ ದಿನಗಳನ್ನು ಕೊನೆಗಾಣಿಸಬೇಕೆಂದು ನಿರ್ಧರಿಸಿದನು. ಈ ಉದ್ದೇಶವಿಟ್ಟುಕೊಂಡು ತನ್ನ ವಿಶಾಲವಾದ ವೈಭವಕ್ಕೆ ಒಪ್ಪುವಂಥ ಒಂದು ಪ್ರಾಸಾದವನ್ನು ಅಲ್ಲಿ ಕಟ್ಟಿಸಲಿಕ್ಕೆ ಆತ ಒಬ್ಬ ಕುಶಲ ವಾಸ್ತುಶಿಲ್ಪಿಯನ್ನು ಕಳುಹಿಸಿದನು.

ನಾನು ಮೇಲೆಯೇ ಹೇಳಿದಂತೆ ಕಣಿವೆಯಲ್ಲಿ ಆ ಮೊದಲೇ ವದಂತಿ ಹಬ್ಬಿತೇನೆಂದರೆ ಅಷ್ಟು ದೀರ್ಘಕಾಲ ವ್ಯರ್ಥವಾಗಿ ಹುಡುಕಾಡಿದ 'ಭವಿಷ್ಯ' ನಿರ್ದಿಷ್ಟ ವ್ಯಕ್ತಿಯು ಗ್ಯಾದರಗೋಲ್ಡನೇ ಸರಿ. ಅವನ ಮುಖಚರ್ಯೆ ಆ ಹಿರಿಕಲ್ಲ ಮೋರೆಗೆ ಪೂರ್ತಿ ಹೋಲುತ್ತಿದೆ. ಈ ಹೋಲಿಕೆ ಅಲ್ಲಗಳೆಯುವದು ಶಕ್ಯವೇ ಇಲ್ಲ. ಅವನ ತಂದೆಯ ಮಳೆಗಾಳಿಯುಂಡು ಜರ್ಜರವಾದ ಹಳೆಯ ಮನೆಯು ನಿಂತ ತಾಣದಲ್ಲಿಯೇ ಮಂತ್ರಮಾಡಿದಂತೆ ಹೊಸ ಭವ್ಯ ಕಟ್ಟಡವು ಎದ್ದು ನಿಲ್ಲುವದನ್ನು ನೋಡಿದ ಮೇಲಂತೂ ಭವಿಷ್ಯ ವರ್ತಮಾನವಾಗುತ್ತಿದೆ ಖಂಡಿತ ಎಂಬುದನ್ನು ಜನ ಬೇಗನೇ ನಂಬಲು ಸಿದ್ಧರಾದರು. ಆ ಕಟ್ಟಡದ ಹೊರಮೈಯು ಚಂದ್ರಕಾಂತ ಶಿಲೆಯಿಂದ ನಿರ್ಮಿತವಾಗಿತು. ಇಷ್ಟು ಬೆಳ್ಳಿ ಬಿಳುಪು ನೋಡನೋಡುತ್ತಲೇ ಅದು ಬಿಸಿಲಿಗೆ ಎಲ್ಲಿ ಕರಗಿಹೋಗುತ್ತದೋ ಎಂದು ಎನಿಸುತ್ತಿತ್ತು. ಶ್ರೀ ಗ್ಯಾದರಗೋಲ್ಡ ಬಾಲ್ಯದ ದಿನಗಳಲ್ಲಿ ಮುಟ್ಟಿದ್ದನ್ನೆಲ್ಲ ಚಿನ್ನ ಮಾಡುವ ಅದ್ಭುತ ಶಕ್ತಿ ಬರುವ ಮುಂಚೆ ಅವನ ಬೆರಳುಗಳು ಹಿಮದ ಮುದ್ದೆಗಳಿಂದ ಕಟ್ಟುತ್ತಿದ್ದ ಆ ಬಡ ಮನೆಗಳು ಕರಗುತ್ತಿದ್ದಿಲ್ಲವೇ? ಆ ಕಟ್ಟಡಕ್ಕೆ ಒಂದು ಅಲಂಕಾರಮಂಡಿತವಾದ ಒಂದು ಮಂಟಪವಿತ್ತು. ಅದಕ್ಕೆ ಎತ್ತರವಾದ ಕಂಬಗಳು, ಅವುಗಳ ಕೆಳಗೆ ಒಂದು ಎತ್ತರವಾದ ಬಾಗಿಲು ಬಾಗಿಲಿಗೆ ಬೆಳ್ಳಿಯ ಗುಂಡುಗಳು ಅಲ್ಲಲ್ಲಿ ಕೂಡಿಸಲಾಗಿತ್ತು. ಆ ಬಾಗಿಲಾದರೂ ಸಮುದ್ರದಾಚೆಯಿಂದ ತರಿಸಲಾದ ವಿವಿಧ ಮರದ ಹಲಗೆಗಳಿಂದ ಮಾಡಿಸಿದ್ದು. ಪ್ರತಿಯೊಂದು ಭವ್ಯ ಕೋಣೆಗೆ ನೆಲದಿಂದ ಅಟ್ಟದವರೆಗೆ ನಿಂತ ಕಿಟಕಿಗಳು; ಆ ಕಿಟಕಿಗೋ ಅಖಂಡ ಒಂದೇ ಹಾಸಿನ ವಿಶಾಲವಾದ ಗಾಜಿನ ಹಾಳೆಯ ಕದಗಳು. ಅವೂ ಎಷ್ಟು ಪಾರದರ್ಶಿಯೆನ್ನುವಿರಿ? ನಿರ್ವಾತ ಆಕಾರಕ್ಕಿಂತಲೂ

ನಿಚ್ಚಳವೂ ಪಾರದರ್ಶಕವೂ ಆಗಿದ್ದವು. ಈ ಪ್ರಾಸಾದದ ಒಳಮನೆಗೆ ಯಾರಿಗೂ ಪ್ರವೇಶವಿದ್ದಿಲ್ಲ. ಆದರೂ ವಿವರ ಹೀಗೆ ವರದಿಯಾಗಿತ್ತು. ಅದರಲ್ಲಿ ತಥ್ಯವಿತ್ತು- ಒಳಮನೆ ಹೊರಮೈಗಿಂತಲೂ ಹೆಚ್ಚು ವೈಭವದ ಬೆಡಗಿನಿಂದ ತುಂಬಿತ್ತು. ಏಕೆಂದರೆ ಮಿಕ್ಕ ಮನೆಗಳಲ್ಲಿ ಕಂಚುಕಬ್ಬಿಣಗಳನ್ನು ಬಳಸುವದಿದ್ದರೆ ಇಲ್ಲಿ ಬೆಳ್ಳಿ ಬಂಗಾರವಿತ್ತು. ಮತ್ತು ಗ್ಯಾದರಗೋಲ್ಡನ ಶಯನಮಂದಿರ ಇನ್ನು ಥಳಕಿನದು. ಸಾಮಾನ್ಯರು ಯಾರೂ ಅಲ್ಲಿ ಕಣ್ಣು ಮುಚ್ಚುವದೇ ಶಕ್ಯವಿದ್ದಿಲ್ಲ. ಆದರೆ ಗ್ಯಾದರಗೋಲ್ಡನಿಗೆ ಅವನ ಐಶ್ವರ್ಯ ಪೂರ್ತಿ ಪಳಗಿಹೋಗಿತ್ತು. ಅದರ ಹೊಳಪು ಅವನ ಕಣ್ಣೆವೆಗಳಲ್ಲಿ ಸೇರುವದು ಖಂಡಿತವೆಂದಾಗಲೇ ಅಂಥಲ್ಲಿ ಆತ ಕಣ್ಣುಗಳನ್ನು ಮುಚ್ಚುತ್ತಿದ್ದನು.

ಸಕಾಲದಲ್ಲಿ ಆ ಪ್ರಾಸಾದ ಕಟ್ಟಿ ಮುಗಿಯಿತು. ಅನಂತರ ಮನೆಯೊಡವೆಗಳನ್ನು ಒದಗಿಸುವವರು ಬಂದರು. ಅವರೊಂದಿಗೆ ಸಡಗರದ ಗೃಹೋಪಸ್ಕರಗಳು ಬಂದವು. ಆನಂತರ ಬಿಳಿಯ ಕರಿಯ ಸೇವಕರ ಒಂದು ಪಡೆಯೇ ಬಂದಿತು. ಅವರು ಗ್ಯಾದರಗೋಲ್ಡನ ಮುಂಗಡ ಸರಂಜಾಮ ಅವನು ತನ್ನ ಶ್ರೀಮದ್ಗಾಂಭೀರ್ಯದಲ್ಲಿ ಸೂರ್ಯಾಸ್ತಕ್ಕೆ ಬಂದು ತಲುಪುವವನಿದ್ದನು. ನಮ್ಮ ಗೆಳೆಯ ಅರ್ನೆಸ್ಟನಿಗಂತೂ ಎದೆಯಾಳವೂ ಕಲಕಿಹೋಗಿತ್ತು. ಕೊನೆಗೂ ವರ್ಷಾನುವರ್ಷ ವಿಲಂಬದ ನಂತರ ಆ ಭವಿಷ್ಯ ವಾಣಿಯ ವಿಭೂತಿ, ಆ ಉದಾತ್ತ ಪುರುಷ, ಆ ಮಹಾಪುರುಷ ಅವನು ಹುಟ್ಟಿದ ಕಣಿವೆಯಲ್ಲಿ ಪ್ರಕಟವಾಗುವವನಿದ್ದ ಹುಡುಗನಾದ ಮಾತ್ರಕ್ಕೆ ಅವನಿಗೆ ಗೊತ್ತಿತ್ತು. ಗ್ಯಾದರಗೋಲ್ಡನು ತನ್ನ ವಿಶಾಲ ಸಂಪತ್ತಿನಿಂದ ಮಂಗಲಕಾರಿಯಾದ ದೇವದೂತನಾಗಿ ಆ ಹಿರಿಯ ಕಲ್ಲ ಮೊಗದ ಮೇಲಿನ ಕಿರುನಗೆಯಷ್ಟೇ ಪ್ರಶಸ್ತವೂ ಕಲ್ಯಾಣಕಾರಿಯೂ ಆಗಿ ಮನುಷ್ಯ ವ್ಯವಹಾರಗಳ ಮೇಲೆ ಪ್ರಭುತ್ವವನ್ನು ವಹಿಸುವಂತೆ ಮಾರ್ಪಡಲು ಸಾವಿರ ರೀತಿಗಳಿದ್ದವು. ಶ್ರದ್ಧೆ ಮತ್ತು ಆಸೆಗಳಿಂದ ತುಂಬಿದ ಅರ್ನೆಸ್ಟ, ಮಂದಿ ನಿಜವೆಂದು ಹೇಳಿದ್ದನ್ನು ಕುರಿತು ಸಂದೇಹಪಡಲಿಲ್ಲ, ತಾನು ಈಗ ಪರ್ವತಪಾರ್ಶ್ವದ ಅದ್ಭುತ ಮುಖವಾಡದ ಜೀವಂತ ಹೋಲಿಕೆಯನ್ನು ನೋಡಲಿರುವೆನೆಂಬುದನ್ನು ಶಂಕಿಸಲಿಲ್ಲ. ಆ ಹುಡುಗ

ಕಣಿವೆಯುದ್ದಕ್ಕೂ ದೃಷ್ಟಿಹಾಯಿಸಿ ತನ್ನ ನೋಟಕ್ಕೆ ಶಿಲಾಮುಖ ಪ್ರತಿಯಾಗಿ ದಯಾದೃಷ್ಟಿಯಿಂದ ನೋಡುತ್ತಿದೆಯೆಂದು ಎಂದಿನಂತೆ ಭಾವಿಸುತ್ತಿರುವಾಗಲೇ ಸುತ್ತು ಬಳಸಿ ಬರುವ ಹಾದಿಯಲ್ಲಿ ವೇಗದಿಂದ ಸಮೀಪಿಸುತ್ತಿರುವ. ಗಾಲಿಗಳ ಸದ್ದು ಕೇಳಿಬಂದಿತು.

"ಇದೋ, ಬಂದೇಬಿಟ್ಟರು" ಆಗಮನವನ್ನು ನೋಡಲು ನೆರೆದ ಜನರ ಗುಂಪು ಕೂಗಿತು. "ಇಗೋ ಘನವಂತ ಗ್ಯಾದರಗೋಲ್ಡ ಇಲ್ಲಿಗೇ ಬಂದರು!"

ನಾಲ್ಕು ಕುದುರೆಗಳು ಎಳೆಯುವ ಒಂದು ಸಾರೋಟು ಮಾರ್ಗದ ಮೂಲೆಗೆ ಸರಿದು ನಿಂತಿತು. ಅದರೊಳಗೆ ಕಿಟಕಿಯೊಳಗಿಂದ ಸ್ವಲ್ಪ ಹೊರಗೆ ಚಾಚಿದ ಆ ಮುದಿ ಮನುಷ್ಯನ ಮುಖಾಕೃತಿಯು ಗೋಚರಿಸಿತು. ಅವನ ಮೈದೊಗಲು ಅವನ ಮಿಡಾಸ ಮುಟ್ಟಿನ ಕೈಯೋ ಬಂಗಾರವಾಗಿದೆಯೋ ಎನ್ನುವಷ್ಟು ಹಳದಿಯಾಗಿತ್ತು! ಅವನಿಗೆ ತಗ್ಗಾದ ಹಣೆ ಮತ್ತು ಚಿಕ್ಕ ತೀಕ್ಷ್ಣ ಕಣ್ಣುಗಳೂ ಅವುಗಳ ಸುತ್ತಲೂ ಅಸಂಖ್ಯ ನೆರಿಗೆ ಗೆರೆಗಳ ಗಂಟು; ಬಹಳ ತೆಳ್ಳಗಿನ ತುಟಿಗಳು-ಅವುಗಳನ್ನು ಬಲವಾಗಿ ಒತ್ತಿಹಿಡಿದು ಅವನು ಇನ್ನಿಷ್ಟು ತೆಳ್ಳಗಾಗಿ ಮಾಡಿದ್ದನು.

"ಈತನು ಆ ಹಿರಿಕಲ್ಲ ಮೋರೆಯ ಸಾಕ್ಷಾತ್ ಪ್ರತಿರೂಪವೇ "ಜನ ಕೂಗಿತು. "ನಿಜ ನಿಜ. ಹಳೆಯ ಭವಿಷ್ಯವಾಣಿ ನಿಜವಾಯಿತು. ಕೊನೆಗೂ ನಮ್ಮ ಮಹಾಪುರುಷನು ಬಂದೇ ಬಂದನು."

'ಅವರು ಆಡಿಕೊಳ್ಳುತ್ತಿದ್ದ ರೂಪಸಾದೃಶ್ಯ ಇಲ್ಲ ಇದೆಯೆಂದೇ ಪತ್ಯಕ್ಷ ನಂಬಿದರಲ್ಲ' ಎಂಬುದಾಗಿ ಅರ್ನೆಸ್ಟನು ದಿಗ್ಭ್ರಮೆಗೊಂಡನು. ಹಾದಿಯ ಪಕ್ಕದಲ್ಲಿ ಒಬ್ಬಾಕೆ ತಿರುಕುಳಿ ಮುದಿಹೆಂಗಸು, ಅವಳ ಎರಡು ಚಿಕ್ಕಮಕ್ಕಳು ಎಲ್ಲೋ ದೂರದ ಪರಸ್ಥಳದಿಂದ ಬಿಕ್ಕೆಗಾಗಿ ಬಂದವರು ನಿಂತಿದ್ದರು. ಸಾರೋಟಿನ ಚಕ್ರಗಳು ಮುಂದಕ್ಕೆ ಉರುಳುತ್ತಿದ್ದಂತೆ ಅವರು ತಮ್ಮ ಕೈಯೆತ್ತಿ ಚಾಚಿ ಕನಿಕರದ ದನಿಯೆತ್ತಿ ಕೂಗಿದರು. ತೀರ

ದೈನ್ಯತೆಯಿಂದ ಧರ್ಮಬೇಡುತ್ತ ಒಂದು ಹಳದಿ ನಖಪಂಜರವು-ಅಷ್ಟೆಲ್ಲ ಸಂಪತ್ತನ್ನು ಒಟ್ಟುಹಾಕಿದ್ದು ಅದೇ ನಖಪಂಜರ ಸಾರೋಟಿನ ಕಿಡಕಿಯೊಳಗಿಂದ ಹೊರಗೆ ಇಣಕಿ ಕೆಲವು ತಾಮ್ರದ ನಾಣ್ಯಗಳನ್ನು ಹೊರಗೆ ಚಲ್ಲಿತು. ಆ ಮಹಾಪುರುಷನ ಹೆಸರು ಗ್ಯಾದರಗೋಲ್ಡ (ಸುವರ್ಣಶೇಖರಯ್ಯ) ಎಂದಿದ್ದರೂ ಆತನಿಗೆ ಸ್ಕ್ಯಾಟರಕೊಪ್ಪರ (ತಾಮ್ರತೂರಯ್ಯ) ಎಂದು ಸಹಜವಾಗಿ ಅಡ್ಡ ಹೆಸರಿಡಬಹುದೇನೋ ಎಂಬಂತೆ ತೋರಿತು. ಆದರೂ ಮನಃಪೂರ್ವಕವಾಗಿ ಕೂಗಿ ಎಂದಿನಷ್ಟೇ ಶ್ರದ್ಧೆಯನ್ನು ಪ್ರಕಟಿಸುತ್ತ ಜನ ಘೋಷಿಸಿತು-

“ಆ ಹಿರಿಕಲ್ಲ ಮೋರೆಯ ಪ್ರತ್ಯಕ್ಷ ಪ್ರತಿಬಿಂಬ ಇವರು!”

ಅರ್ನೆಸ್ಟ ಖಿನ್ನನಾಗಿ ದಾರುಣಳಾಗಿ ಸುಕ್ಕುಗಟ್ಟಿದ ಆಕೆಯ ಮುಖದಿಂದ ತನ್ನ ದೃಷ್ಟಿಯನ್ನು ಬೇರೆಡೆಗೆ ಹೊರಳಿಸಿದ. ಅಲ್ಲಿ ಕಣಿವೆಯ ನೇರಕ್ಕೆ ದಟ್ಟವಾಗುತ್ತಿರುವ ಮಂಜಿನ ನಡುವೆ ಕೊನೆಯ ಸೂರ್ಯ ಕಿರಣಗಳಿಂದ ಕಾಂತಿಗೊಂಡ ಆ ಭವ್ಯ ದಿವ್ಯ ಮುಖಲಕ್ಷಣಗಳನ್ನು ಅವನ ಆತ್ಮದ ಮೇಲೆ ಮುದ್ರೆಯೊತ್ತಿದ ಆ ಶಿಲಾಮುಖದ ಮುದ್ರೆಯನ್ನೂ ಆತ ಸ್ಪಷ್ಟವಾಗಿ ಕಂಡುಕೊಂಡ. ಅದರ ನೋಟ ಅವನನ್ನು ಹುರಿದುಂಬಿಸಿತು. ಆ ಸಂಭಾವಿತ ತುಟಿಗಳು ಏನೆನ್ನುವಂತೆ ತೋರಿತು?

“ಆತ ಬರುವನು! ಹೆದರಬೇಡ ಅರ್ನೆಸ್ಟ. ಆ ಮನುಷ್ಯ ಬರುವನು!”

ವರ್ಷಗಳು ಉರುಳಿದವು. ಅರ್ನೆಷ್ಟ ಹುಡುಗನಾಗಿ ಉಳಿಯಲಿಲ್ಲ. ಈಗ ಅವನು ಯುವಕನಾಗಿದ್ದನು. ಆ ತಪ್ಪಲ ಇತರ ನಿವಾಸಿಗಳ ಗಮನ ಆತ ಸೆಳೆದುಕೊಂಡಿದ್ದು ಕಡಿಮೆಯೇ; ಏಕೆಂದರೆ ಅವನ ಬದುಕಿನಲ್ಲಿ ವಿಶೇಷವಾಗಿ ಗುರುತಿಸುವಂತಹದೇನೂ ಕಾಣಲಿಲ್ಲ, ಕಂಡರೆ ಆ ವಿಶೇಷವಿಷ್ಟೇ – ದಿನದ ದುಡಿಮೆ ಮುಗಿಯಿತೆಂದರೆ ಆತ ದೂರ ಹೋಗಿ ಆ ಹಿರಿಕಲ್ಲ ಮೋರೆಯನ್ನು ದಿಟ್ಟಿಸಿ ಧ್ಯಾನಿಸುತ್ತಿದ್ದನು. ಅವರ ಕಲ್ಪನೆಯಂತೆ ಅದೊಂದು ಹುಚ್ಚು ಚಾಳಿ ಖಂಡಿತ. ಆದರೆ

ಅವನಿಗೆ ಕ್ಷಮ್ಯ ಏಕೆಂದರೆ ಅರ್ನೆಸ್ಟ ಉದ್ಯೋಗಶೀಲ, ದಯಾವಂತ, ನೆರೆಹೊರೆಯವರಿಗೆ ನೆರವಾಗುವ ಅಂತಃಕರುಣಿ, ಮತ್ತು ಅದೊಂದು ಚಾಳಿಯ ಚಟ ತೀರಿಸಿಕೊಳ್ಳುತ್ತಿದ್ದರೂ ತನ್ನ ಕರ್ತವ್ಯವನ್ನು ಉಪೇಕ್ಷಿಸುವವನಲ್ಲ, ಆ ಹಿರಿಕಲ್ಲ ಮೋರೆ ಅವನಿಗೆ ಗುರುವಾಗಿದೆ ಎಂಬ ಮಾತು ಅವರಿಗೆ ಗೊತ್ತಿದ್ದಿಲ್ಲ. ಅದರಲ್ಲಿ ವ್ಯಕ್ತವಾದ ಭಾವನೆಗಳು ಅವನ ಹೃದಯವನ್ನು ವಿಶಾಲಗೊಳಿಸಿ ಇತರ ಹೃದಯಗಳಿಗಿಂತ ವ್ಯಾಪಕವೂ ಗಂಭೀರವೂ ಆದ ಸಹಾನುಭೂತಿಯಿಂದ ತುಂಬವವೆಂಬುವದೂ ಅವರು ತಿಳಿಯರು. ಪುಸ್ತಕಗಳಿಂದ ಕಲಿಯಬಹುದಾದುದಕ್ಕಿಂತ ಹೆಚ್ಚು ಒಳಿತಾದ ಜಾಣ್ಮೆಯು ಅಲ್ಲಿಂದ ಬರಬಲ್ಲದು; ಇತರ ಮಾನವ ಜೀವನಗಳ ಭಗ್ನಮುಖದ ಮಾದರಿಗಿಂತ ಭವ್ಯ ಮುಖದಿಂದ ಹೆಚ್ಚು ಉತ್ತಮವಾದ ಜೀವನವನ್ನು ರೂಪಿಸಲು ಬರುವದು-ಎಂಬುದನ್ನೂ ಅವರು ಅರಿಯರು. ಅರ್ನೆಸ್ಟನಿಗೂ ತನಗೆ ಸಹಜವಾಗಿಯೇ ಹೊಮ್ಮಿಬರುವ ವಿಚಾರಗಳೂ ಸ್ನೇಹಭಾವನೆಗಳೂ ಹೊಲಗಳಲ್ಲಿ ಇರಲಿ, ನಡುಮನೆಯ ಅಗ್ಗಿಷ್ಟಿಕೆಯ ಹತ್ತಿರವಿರಲಿ, ಎಲ್ಲೇ ಆತ ತನ್ನಷ್ಟಕ್ಕೆ ತಾನೇ ಚಿಂತಿಸುತ್ತಿರಲಿ, ಇತರ ಜನರು ಅವನೊಂದಿಗೆ ಅನುಭವಿಸುವ ಅಂಥ ವಿಕಾರಗಳಿಗಿಂತ ಹೆಚ್ಚಿನ ಎತ್ತರದ ಮಟ್ಟದವರಾಗಿದ್ದುದು ಹೇಗೆ ಎಂಬ ಬಗೆಗೂ ಗೊತ್ತಿದ್ದಿಲ್ಲ. ಸರಳಜೀವಿಯಾದ ಆತ-ಮೊದಲು ತಾಯಿ ಆ ಹಳೆಯ ಭವಿಷ್ಯವಾಣಿಯನ್ನು ಅರುಹಿದಾಗ ಇದ್ದಂತೆಯೇ ಸರಳ-ಕಣಿವೆಯ ಮೇಲಿಂದ ಪ್ರಸನ್ನವಾಗಿ ಕಳೆ ಬೀರುವ ಆ ಸೋಜಿಗದ ಮುಖಚರ್ಯೆಯನ್ನು ನೋಡುತ್ತಿದ್ದ ಮತ್ತು ಅದರ ಮಾನವೀ ಪ್ರತಿರೂಪವನ್ನು ಕಾಣಿಸಿಕೊಳ್ಳಲು ಇನ್ನೂ ಇಷ್ಟು ಕಾಲ ಹರಣಮಾಡಬೇಕೆಂದು ತಾನೂ ಸೋಜಿಗಪಡುತ್ತಿದ್ದನು.

ಇಷ್ಟರಲ್ಲಿ ಬಡ ಗ್ಯಾದರಗೋಲ್ಡನು ಮಣ್ಣುಪಾಲಾದನು. ಮತ್ತು ಅವನ ಕತೆಯ ತೀರ ವಿಚಿತ್ರ ಅಂಶವೆಂದರೆ ಅವನ ಸಂಪತ್ತು, ಅವನ ಅಸ್ತಿತ್ವದ್ದೇ ತನುವೂ ಮನವೂ ಆದ ಸಂಪತ್ತು, ಅವನ ಸಾವಿನ ಮುಂಚಿತವಾಗಿಯೇ ಮಾಯವಾಗಿತ್ತು! ಮುದುಡಿ ಸುಕ್ಕಾಗಿ ನಿರಿಗೆ ಬಿದ್ದ ಹಳದಿಯ ತೊಗಲಿನ ಹೊಡಿಕೆಯಡಿಗೆ ಅವನ ಸಜೀವ ಅಸ್ಥಿಪಂಜರವೊಂದೇ ಹಿಂದುಳಿದಿತ್ತು. ಅವನ ಬಂಗಾರ ಕರಗಿ ಬರಿದಾದಂದಿನಿಂದ

ಒಂದು ಸಂಗತಿಯನ್ನು ಎಲ್ಲರೂ ಒಪ್ಪಿಕೊಂಡಾಯಿತು. ಆ ದಿವಾಳಿ ತೆಗೆದ ವರ್ತಕನ ಅಂದಗೇಡಿ ಮುಖಚರ್ಯೆ, ಮತ್ತು ಪರ್ವತಪಾರ್ಶ್ವದ ರಾಜಠೀವಿಯ ಮುಖಮುದ್ರೆ ಇವೆರಡರ ನಡುವೆ ಕೊನೆಗೆ ಅಂಥ ಯಾವ ವಿಶೇಷ ಹೋಲಿಕೆಯಿಲ್ಲವೆಂದು. ಆದ್ದರಿಂದ ಮಂದಿ ಆತನ ಜೀವಮಾನದಲ್ಲಿಯೇ ಅವನನ್ನು ಗೌರವಿಸುವದು ಕಟ್ಟಾಯಿತು. ಸತ್ತಮೇಲಂತೂ ಅವನನ್ನು ಮರೆತೇ ಬಿಟ್ಟರು. ಎಂದಾದರೊಮ್ಮೆ ಅವನ ನೆನಪು ಎತ್ತಲಾಗುತ್ತಿತ್ತು. ಆದರೆ ಅದು ಅವನ ಅಷ್ಟೈಶ್ವರ್ಯದ ಪ್ರಾಸಾದವನ್ನು ಕುರಿತಾಗಿ. ಅದನ್ನು ಎಂದೋ ಒಂದು ಹೋಟೆಲಾಗಿ ಮಾರ್ಪಾಡಿಸಲಾಗಿತ್ತು. ಪ್ರತಿ ಬೇಸಿಗೆಗೆ ಹಿರಿಕಲ್ಲ ಮೋರೆಯ ಆ ಪ್ರಾಕೃತಿಕ ಚಮತ್ಕಾರವನ್ನು ನೋಡಲಿಕ್ಕೆ ಹಿಂಡುಗಟ್ಟಿ ಬರುತ್ತಿರುವ ಆ ಪರಸ್ಥಳೀಯರಿಗೆ ವಾಸ್ತವ್ಯ ಒದಗಿಸಿ ಕೊಡಲು ಬಗೆ ಶ್ರೀ ಗ್ಯಾದರಗೋಲ್ಡ ಪದಚ್ಯುತನಾಗಿ ಕತ್ತಲೆಯಲ್ಲಿ ಒಗೆಯಲ್ಪಟ್ಟುದರಿಂದ ಭವಿಷ್ಯವಾಣಿ ನಿರ್ದೇಶಿಸಿದ ಮಹಾಪುರುಷನು. ಇನ್ನೂ ಬರಬೇಕಾಗಿತ್ತು.

ಈಗ ಇನ್ನೊಂದು ಸಂಗತಿ ಸಂಘಟಿಸಿತು. ಅದೇ ಕಣಿವೆಯಲ್ಲಿ ಹುಟ್ಟಿಬೆಳೆದ ಹುಡುಗನೊಬ್ಬನು ಹಲವು ವರ್ಷಗಳ ಹಿಂದೆ ಸಿಪಾಯಿಯಾಗಿ ದಂಡಿನಲ್ಲಿ ಸೇರಿದ್ದನು. ಬಹಳಷ್ಟು ಘೋರ ಹೋರಾಟಗಳ ನಂತರ ಆತ ಈಗ ಖ್ಯಾತಿವೆತ್ತ ಸೇನಾಧಿಪತಿಯಾಗಿದ್ದನು. ಇತಿಹಾಸದಲ್ಲಿ ಹೇಗೂ ಕರೆಯಲ್ಪಡಲಿ, ದಂಡಿನ ಪಾಳೆಯಗಳಲ್ಲಿ ಕಾಳಗದ ಕಣದಲ್ಲಿ ಮುದಿ 'ಬ್ಲಡ್ ಎಂಡ್ ಥಂಡರ' (ನೆತ್ತರ, ಗುಡುಗು) ಎಂದು ಅಡ್ಡ ಹೆಸರಿಂದಲೇ ಪರಿಚಿತನಿದ್ದನು. ಈ ಯುದ್ಧದ ಜರ್ಜರ ವೃದ್ಧಯೋಧನು ಗಾಯಗಳಿಂದಲೂ ಮುಪ್ಪಿನಿಂದಲೂ ದುರ್ಬಲನಾಗಿ ಸೈನಿಕ ಜೀವನದ ಕೋಲಾಹಲಕ್ಕೆ ದಣಿದು ಬೇಸತ್ತು ಸದಾ ಕಾಲವೂ ಕಿವಿಯಲ್ಲಿ ಮೊಳಗುತ್ತಿದ್ದ ಕಹಳೆಯ ಸದ್ದಿಗೂ ನಗಾರೆಯ ಗುದ್ದಿಗೂ ಕಿವುಡಾಗಿ ಸೋತು ಇತ್ತೀಚೆಗೆ ತನ್ನ ಹುಟ್ಟಿದೂರಾದ ಕಣಿವೆಗೆ ಮರಳುವ ಮನೀಷೆಯನ್ನು ವ್ಯಕ್ತಪಡಿಸಿದನು-ತಾನು ಹಿಂದೊಮ್ಮೆ ಬಿಟ್ಟು ಹೋದ ವಿಶ್ರಾಂತಿ ಮನಃಶಾಂತಿಗಳನ್ನು ಅಲ್ಲಿ ಮತ್ತೆ ಕಂಡುಕೊಳ್ಳುವ ಆಸೆಯಿಂದ ಅಲ್ಲಿಯ ನಿವಾಸಿಗಳೂ ಅವನ ನೆರೆಹೊರೆಯವರೂ ಅವರ ಬೆಳೆದ ಮಕ್ಕಳೂ ಆ ಯುದ್ಧ ವೃದ್ಧ

ವಿಖ್ಯಾತ ಯೋಧನನ್ನು ಒಂದು ತೋಫಿನ ವಂದನೆ ಮತ್ತು ಸಾರ್ವಜನಿಕ ಮೇಜವಾನಿಯೊಂದಿಗೆ ಸ್ವಾಗತಿಸುವದನ್ನು ನಿಶ್ಚಯಿಸಿದರು. ಅದಕ್ಕೂ ಹೆಚ್ಚಾಗಿ ಒಪ್ಪಿಕೊಂಡರೇಕೆಂದರೆ ಆ ಹಿರಿಕಲ್ಲ ಮೋರೆಯ ಪ್ರತಿರೂಪವು ಈ ಬಾರಿ ನಿಜವಾಗಿಯೂ ಕಾಣಿಸಿಕೊಂಡಿತು. ಆ ವೃದ್ಧ ಬ್ಲಡ್ ಎಂಡ್ ಥಂಡರ ಸಾಹೇಬನ ಹಸ್ತಕನೊಬ್ಬನು ಆ ಕಣಿವೆಯೊಳಗಿಂದ ಪ್ರವಾಸ ಮಾಡುತ್ತ ಈ ರೂಪಸಾದೃಶ್ಯದಿಂದ ಚಕಿತನಾದನೆಂದು ಹೇಳಲಾಗುತ್ತಿತ್ತು. ಅದೂ ಅಲ್ಲದೇ ಆ ಸೇನಾಪತಿಯ ಹಳೆಯ ಗೆಳೆಯರೂ ಓರಿಗೆಯಲ್ಲಿ ಶಾಲೆ ಓದಿದವರೂ ಈ ಬಗ್ಗೆ ಆಣೆಹೊತ್ತು ಪ್ರಮಾಣಿಸಲು ಸಿದ್ಧರಿದ್ದರು-ಆ ಸೇನಾಪತಿಯು ಹುಡುಗನಿದ್ದಂದಿನಿಂದಲೂ ಆ ರಾಜಮುದ್ರೆಯ ಮುಖಕ್ಕೆ ಹೋಲುವ ಚರ್ಯೆಯವನಿದ್ದನು; ಆದರೆ ಈ ವಿಚಾರ ಆಗ ಅವರ ಗಮನಕ್ಕೆ ಬಂದೇ ಇರಲಿಲ್ಲ. ಆದ್ದರಿಂದ ಕಣಿವೆಯಲ್ಲೆಲ್ಲ ಆ ಕುರಿತು ಉತ್ಸುಕತೆಯ ಸಂಭ್ರಮವೂ ವಿಪರೀತವೆದ್ದಿತು. ವರ್ಷಗಟ್ಟಲೆ ಆ ಶಿಲಾಮುಖದತ್ತ ಕಣ್ಣೆತ್ತಿ ನೋಡುವ ವಿಚಾರವನ್ನೇ ಮಾಡದ ಅನೇಕ ಮಂದಿ ಈಗ ಬ್ಲಡ್ ಎಂಡ್ ಥಂಡರ ದೊರೆ ವಾಸ್ತವಿಕವಾಗಿ ಹೇಗೆ ಕಾಣಿಸುತ್ತಾನೆಂಬುದನ್ನು ಅರಿತುಕೊಳ್ಳಲಿಕ್ಕಾಗಿ ಅದನ್ನು ದಿಟ್ಟಿಸುತ್ತಾ ಕಾಲ ಕಳೆಯಲಾರಂಭಿಸಿದರು.

ಆ ದೊಡ್ಡ ಉತ್ಸವದ ದಿನ ಅರ್ನೆಸ್ಟನೂ ಇತರ ಎಲ್ಲ ಜನರೊಂದಿಗೆ ತನ್ನ ಎಲ್ಲ ಕೆಲಸವನ್ನು ಬದಿಗಿರಿಸಿ ಆ ಗ್ರಾಮೀಣ ವನಭೋಜನ ಸಮಾರಂಭ ನಡೆಯುವ ಸ್ಥಳಕ್ಕೆ ನಡೆದನು. ಆತ ಸಮೀಪಿಸುತ್ತಿದ್ದಂತೆ ಪೂಜ್ಯ 'ಬೆಟಲ್ ಬ್ಲಾಸ್ಟ' ಪಾದ್ರಿಗಳ ಕಂಠನಾದವು ಕೇಳಿಸಿತು; ಮುಂದೆ ಬಡಿಸಿದ್ದ ಒಳ್ಳೇ ಪದಾರ್ಥಗಳ ಮೇಲೆ ದೇವರ ಅನುಗ್ರಹವನ್ನು ಯಾಚಿಸುತ್ತ, ಯಾರ ಪ್ರೀತ್ಯರ್ಥ ಸಮಾರಂಭ ನಡೆದಿತ್ತೋ ಆ ಖ್ಯಾತಿವೆತ್ತ ಶಾಂತಿಮಿತ್ರನನ್ನು ಆಶೀರ್ವದಿಸುತ್ತ ಆ ಕಂಠ ಮೊಳಗುತ್ತಿತ್ತು. ಕಾಡಿನ ಒಂದು ಬಯಲು ಸ್ಥಳದಲ್ಲಿ ಮೇಜವಾನಿಯ ಮೇಜುಗಳನ್ನು ಮಂಡಿಸಲಾಗಿತ್ತು. ಸುತ್ತಲೂ ವೃಕ್ಷಗಳ ವಲಯವಿತ್ತು. ಆದರೆ ಪೂರ್ವದ ನಿಟ್ಟಿಗೆ ಒಂದು ದ್ವಾರ ತೆರೆದಂತೆ ದೂರದವರೆಗೆ ತೆರವು ಇತ್ತು. ದೂರದ ಹಿರಿಕಲ್ಲ ಮೋರೆಯ ದರ್ಶನವಾಗುವಂತಿತ್ತು. ಸೇನಾಪತಿಯು ಕುಳಿತ

ಖುರ್ಚಿಯು ಅವನ ವಾಶಿಂಗಟನ್ನದ ಮನೆಯಿಂದ ನೆನಪಿಗಾಗಿ ತಂದುದಾಗಿತ್ತು. ಅದರ ಮೇಲುಗಡೆ ಹಚ್ಚ ಹಸಿರು ಟೊಂಗೆಗಳ ಒಂದು ಕಮಾನು ಕಟ್ಟಲಾಗಿತ್ತು. ಅದರಲ್ಲಿ ಲಾರೆಲ್ ಮಂಜರಿಗಳನ್ನೂ ಹೆಣೆದಿದ್ದರು. ಅದರಡಿಯಲ್ಲಿ ಯಾವ ಧ್ವಜದಡಿಯಲ್ಲಿ ಆತ ವಿಜಯಿಯಾಗಿದ್ದನೋ ಆ ರಾಷ್ಟದ ಧ್ವಜ ಇಡಲಾಗಿತ್ತು. ನಮ್ಮ ಗೆಳೆಯ ಅರ್ನೆಸ್ಟ ಅಂದಿನ ಆ ವಿಖ್ಯಾತಿ ಅತಿಥಿಯ ಇಟುಕು ನೋಟವನ್ನಾದರೂ ಪಡೆಯುವ ಕುತೂಹಲದಿಂದ ತುದಿಗಾಲ ಮೇಲೆ ನೆಗೆದಾಡಹತ್ತಿದನು. ಮೇಜುಗಳ ಸುತ್ತಲೂ ಸಮಾರಂಭದ ಆರಂಭದ ಉಪಚಾರ ಭಾಷಣಗಳನ್ನು ಅವುಗಳಿಗೆ ಸೇನಾಪತಿಯ ತುಟಿಗಳಿಂದ ಉದುರಬಹುದಾದ ಉತ್ತರಗಳನ್ನು ಕೇಳಲಿಕ್ಕೆ ದೊಡ್ಡ ಜನಸಂದಣಿ ಕಿಕ್ಕಿರಿದಿತ್ತು. ಸಂರಕ್ಷಣೆಯ ಕಾರ್ಯನಿರಹಿಸುತ್ತಿದ್ದ ಸ್ವಯಂಸೇವಕ ದಲವು ಆ ಸಂದಣಿಯೊಳಗೆ ವಿಶೇಷ ಸೌಮ್ಯವಾಗಿ ಸುಮ್ಮನೇ ನಿಂತವರನ್ನು ನಿರ್ದಯರಾಗಿ ತಮ್ಮ ಸಂಗೀನುಗಳಿಂದ ತಿವಿಯುತ್ತಿದ್ದರು- ಬಂದೋಬಸ್ತಿಗಾಗಿ, ಅರ್ನೆಸ್ಟನು ಮೇಲೆ ಹಾಯ್ದು ಬೀಳುವ ಸ್ವಭಾವದವನಿದ್ದಿಲ್ಲ, ಆದ್ದರಿಂದ ಅವನು ಹಿನ್ನೆಲೆಗೆ ನೂಕಲ್ಪಟ್ಟನು. ಅಲ್ಲಿಂದ ಬ್ಲಡ್ ಎಂಡ್ ಥಂಡರ್ ಸಾಹೇಬನ ಮುಖಚರ್ಯೆಯನ್ನು ಕಾಣಬಹುದಾದ ಸಂಭವ, ಯುದ್ಧರಂಗದಲ್ಲಿ ಅದು ಪ್ರಕಾಶಮಾನವಾಗಿ ವಿರಾಜಿಸುತ್ತಿದ್ದರೆ ಎಷ್ಟೋ, ಅದಕ್ಕಿಂತ ಹೆಚ್ಚಿಗೆ ಇದ್ದಿಲ್ಲ. ಈ ನಿರಾಶೆಯನ್ನು ಹೋಗಲಾಡಿಸಿ ಸಮಾಧಾನ ಪಡೆಯುವದಕ್ಕಾಗಿ ಆತ ಹಿರಿಕಲ್ಲ ಮೋರೆಯ ಕಡೆಗೆ ನೋಡಿದನು. ಅದು ಆ ಬೆಟ್ಟದ ಸೀಳು ದಾರಿಯಾಚೆಯಿಂದ ಈತನ ಕಡೆಗೆ ನಂಬಿಕೆಯ ಚಿರನೆನಪಿನ ಗೆಳೆಯನಂತೆ ನೋಡಿ ನಕ್ಕಿತು. ಆ ನಡುವೆ ಆತ ಬೇರೆ ಬೇರೆ ಮಂದಿ ಟೀಕೆ ಟಿಪ್ಪಣಿ ನಡಿಸುತ್ತಿದ್ದುದನ್ನು ಕೇಳಲು ಅನುವಾಯಿತು. ಅವರು ಅಂದಿನ ನಾಯಕನ ಮೋರೆಯನ್ನು ಆ ಪರ್ವತಪಾರ್ಶ್ವದಲ್ಲಿ ಉದ್ಭವಿಸಿದ ಮುಖದೊಂದಿಗೆ ಹೋಲಿಸಿ ನೋಡುತ್ತಿದ್ದರು.

"ಇದು ಅದೇ ಮೋರೆ ಕೂದಲೆಳೆಯೂ ಕಡಿಮೆಯಿಲ್ಲ" ಒಬ್ಬ ಅಂದು ಹಿಗ್ಗಿನಲ್ಲಿ ಹಾರಿಯೇ ಬಿಟ್ಟ,

“ಇದು ಸತ್ಯ. ಆಶ್ಚರ್ಯಕರ ಸಾಮ್ಯ ನೋಡಿ?” ಇನ್ನೊಬ್ಬ ಉತ್ತರಿಸಿದ.

“ಸಾಮ್ಯವೆಲ್ಲಿ ಬಂತು ಸ್ವಾಮೀ? ನಾನೆನ್ನುತ್ತೇನೆ ಅದು ಬ್ಲಡ್ ಥಂಡರ ಸಾಹೇಬನ ಮೋರೆಯೇ, ಒಂದು ರಾಕ್ಷಸ ರಾಹುಗನ್ನಡಿಯಲ್ಲಿ ಪಡಿ ಮೂಡಿದೆ.” ಮತ್ತೊಬ್ಬ ಮಾತು ಮುಂದುವರಿಸಿದ, “ಮತ್ತೆ ಏಕಾಗಬಾರದು? ಈ ಸಾಹೇಬರು ಈಗಿನ ಅಥವಾ ಯಾವುದೇ ಕಾಲದ ಅತ್ಯುನ್ನತ ಪುರುಷನೆಂಬುದರಲ್ಲಿ ಸಂದೇಹವೇ ಇಲ್ಲ.”

ನಂತರ ಆ ಮೂವರು ಒಂದು ಕೂಗನ್ನೆಬ್ಬಿಸಿದರು. ಆ ಕೂಗು ಕೂಡಿದ ಜನಸಂದಣಿಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು; ಸಾವಿರಾರು ಗಂಟಲುಗಳಿಂದ ಒಮ್ಮೆಲೇ ಗರ್ಜನೆಯನ್ನು ಹೊಮ್ಮಿಸಿತು. ಆ ಗರ್ಜನೆ ಮೈಲುಗಟ್ಟಲೆ ದೂರ ಪರ್ವತಾಂತರಗಳಲ್ಲಿ ಪಡಿನುಡಿಯುತ್ತ ಹಬ್ಬಿತು. ಆ ಹಿರಿಕಲ್ಲ ಮೋರೆಯು ತನ್ನ ಗುಡುಗಿನ ಉಸಿರನ್ನು ಆ ಅಬ್ಬರದಲ್ಲಿ ಬೆರೆಯಿಸಿರಲೂಬಹುದು. ಇವೆಲ್ಲ ಟೀಕೆ ಟಿಪ್ಪಣಿ, ಇವೆಲ್ಲ ಉತ್ಸಾಹ ಸಂಭ್ರಮ ನಮ್ಮ ಗೆಳೆಯನನ್ನು ಇನ್ನಿಷ್ಟು ಕುತೂಹಲಿಯನ್ನಾಗಿ ಮಾಡಿಸಿತು. ಈಗಲೂ ಆ ಪರ್ವತಮುಖಕ್ಕೆ ಮಾನವೀರೂಪ ದೊರೆಯುವಂತಾಯಿತೆಂಬ ಬಗೆಗೆ ಶಂಕಿಸುವ ವಿಚಾರವೇ ಅವನಿಗೆ ಬರಲಿಲ್ಲ. ಒಂದು ಮಾತು ನಿಜ, ಈ ಚಿರಾಕಾಂಕ್ಷಿತ ವ್ಯಕ್ತಿಯು ಒಬ್ಬ ಶಾಂತಿಪ್ರಿಯನಾಗಿ ವಿವೇಕವಾಣಿಯನ್ನೇ ಆಡುತ್ತ ಮಂದಿಯನ್ನು ಸುಖಿಯಾಗಿ ಮಾಡುವಂಥ ಸಾತ್ವಿಕನಿರಬಹುದೆಂದು ಅರ್ನೆಸ್ಟ ಕಲ್ಪಿಸಿದ್ದನು. ಆದರೆ ರೂಢಿಗತವಾದ ದೃಷ್ಟಿ ವೈಶಾಲ್ಯದಿಂದ ತನ್ನ ಸರಳ ಭಾವಕ್ಕೆ ಸರಿಯಾಗಿ ಆತ ಭಾವಿಸಿದ್ದೇನೆಂದರೆ, ಮಾನವ ಕೋಟಿಯನ್ನು ಅನುಗ್ರಹಿಸಲು ಈಶ್ವರೀ ಸಂಕೇತವು ತನ್ನದೇ ಆದ ಉಪಾಯವನ್ನು ಯೋಚಿಸುವದು. ಅದರ ಘನವಾದ ಉದ್ದೇಶವನ್ನು ಒಬ್ಬ ಯೋಧನೂ ಒಂದು ರಕ್ತರಂಜಿತ ಖಡ್ಗವೂ ಸಾಧಿಸಬೇಕೆಂದು ಅದು ಯೋಜಿಸಬಹುದು-ಅದರ ಅಚಿಂತ್ಯವಾದ ವಿವೇಕಕ್ಕೆ ಹಾಗೆ ಮಾಡುವದು ಯೋಗ್ಯವೆಂದು ಕಂಡರೆ.

"ಸೇನಾಧಿಪತಿಗಳು, ಸೇನಾಧಿಪತಿಗಳು" ಎಂಬ ಕೂಗೆದ್ದಿತು. "ಸುಮ್ಮನಿರಿ, ಸದ್ದು ವೃದ್ಧ ಬ್ಲಡ್ ಎಂಡ ಥಂಡರ ಸಾಹೇಬರು ಮಾತನಾಡಲಿಕ್ಕಿದ್ದಾರೆ ಕೇಳಿರಿ."

ಹಾಗೆಯೇ ಆಗಿತ್ತು. ಮೇಜವಾನಿಯ ಹಾಸು ತೆಗೆಯಲಾಗಿತ್ತು. ಸೇನಾಪತಿಯ ಆರೋಗ್ಯಾಭಿಷ್ಟರ ಪಾನೋಪಚಾರವೂ ಮುಗಿದಿತ್ತು. ಹರ್ಷೋದ್ಗಾರದ ಸದ್ದಿನ ನಡುವೆ ಸಭೆಯ ಆಭಾರಮನ್ನಿಸಲು ಆತ ಎದ್ದು ನಿಂತಿದ್ದ. ಅರ್ನೆಸ್ಟ ಆಗ ಆತನನ್ನು ನೋಡಿದ. ಅಲ್ಲಿ ಆತ ನಿಂತಿದ್ದ ಆ ಸಮುದಾಯದ ಹೆಗಲ ಎತ್ತರಕ್ಕೆ ಎರಡು ಹೊಳೆಯುವ ಭುಜಬಾವುಲಿಗಳ ಹಾಗೂ ಕಸೂತಿ ಕೆಲಸದ ಕೊರಳ ಪಟ್ಟಿಯ ಮೇಲೆ ಹಸಿರು ತೋರಣದ ಕೆಳಗಡೆ ಹಣೆಯ ಮೇಲೆ ಆ ಧ್ವಜ ಚೆಲ್ಲಿದ ನೆರಳಿನಲ್ಲಿ ಅಲ್ಲಿಯೇ ಅದೇ ದೃಷ್ಟಿಕ್ಷೇಪದಲ್ಲಿ ಕಂಡುಬರುವಂತೆ ಆ ಬೆಟ್ಟದ ಸೀಳುದಾರಿಯಾಚೆಗೆ ಹಿರಿಕಲ್ಲ ಮೋರೆಯೂ ನಿಂತಿತ್ತು. ಮತ್ತೆ ಆ ಜನ ಜಂಗುಳಿ ಪ್ರಮಾಣ ಮಾಡಿ ಹೇಳುವಂತೆ ಅವರಿಬ್ಬರಲ್ಲಿ ಹೋಲಿಕೆಯಿತ್ತೇ? ಅಕಟಕಟಾ, ಅರ್ನೆಸ್ಟ ಏನೇನೂ ಗುರುತಿಸಲಾರದೇ ಹೋದ, ಅವನು ಕಂಡದ್ದು ಒಂದು ಯುದ್ಧ ಜರ್ಜರಿತ ಗಾಳಿಬಿಸಿಲಿಗೆ ಗಾಸಿಯಾದ ಶಕ್ತಿಸಂಪನ್ನವಾದ ಮುಖಮುದ್ರ ಉಕ್ಕಿನ ಛಲವನ್ನು ವ್ಯಕ್ತಮಾಡುವಂತಹದು. ಆದರೆ ಆ ಸೌಮ್ಯ ವಿಚಾರವಂತಿಕೆ, ಆ ಆಳವೂ ವಿಶಾಲವೂ ಆದ ಸಹಾನುಭೂತಿ, ಬ್ಲಡ್ ಎಂಡ ಥಂಡರ ದೊರೆಯ ಮೋರೆಯಲ್ಲಿ ಪೂರಾ ಲೋಪವಾಗಿತ್ತು. ಆ ಶಿಲಾಮುಖವು ಇಂಥ ಉಗ್ರ ಅಧಿಕಾರದ ಆವಿರ್ಭಾವವನ್ನು ವಹಿಸಿದರೂ ಈ ಸಾತ್ವಿಕ ಲಕ್ಷಣಗಳು ಅದನ್ನು ಮೃದುಗೊಳಿಸುತ್ತಿದ್ದವು.

"ಭವಿಷ್ಯವಾಣಿಯ ಮನುಷ್ಯ ಈತನಲ್ಲ" ಅರ್ನೆಸ್ಟ ತನ್ನೊಳಗೆ ನಿಡುಸುಯ್ದನು. ಆ ಜನಸಂದಣಿಯಿಂದ ಹೊರಗೆ ದಾರಿಮಾಡಿಕೊಂಡು ಬರುತ್ತ "ಮತ್ತೆ ಜಗತ್ತು ದಾರಿಕಾಯಬೇಕೆ?" ಎಂದುಕೊಂಡನು.

ಆ ದೂರದ ಪರ್ವತಪಾರ್ಶ್ವದ ಸುತ್ತ ಮಂಜು ಮುಗಿಲು ಮುತ್ತಿದ್ದವು. ಆ ಹಿರಿಕಲ್ಲ ಮೋರೆಯ ರುದ್ರವೂ ಭವ್ಯವೂ ಆದ ಮುಖಚರ್ಯೆಯು ಕಂಡು ಬಂದಿತು -

ರುದ್ರಾದರೂ ಭದ್ರ, ಶುಭಕಾರಿ. ಒಬ್ಬ ಮಹಾಕಾಯ ದೇವದೂತನು ಅಲ್ಲಿ ಗುಡ್ಡಗಳಲ್ಲಿ ಕುಳಿತು ಸ್ವರ್ಣಪಾಟಲ ವರ್ಣರಂಜಿತವಾದ ಮೇಘಾಂಬರಗಳನ್ನು ತೊಟ್ಟುಕೊಳ್ಳುತ್ತಿದ್ದನೋ ಎನ್ನುವಂತಿತ್ತು. ನೋಡುತ್ತಿದ್ದಂತೆ ಅರ್ನೆಸ್ಟನಿಗೆ ನಂಬುವದೇ ಕಷ್ಟವಾಯಿತು. ಆದರೆ ಆ ಮುಖವು ತುಟಿ ಅಲುಗಿಸದಿದ್ದರೂ ಮಂದಹಾಸದ ಪ್ರಭೆಯು ಮುಖಮಂಡಲವನ್ನಲ್ಲ ಬೆಳಗಿತು. ತನ್ನ ಮತ್ತು ಮೂರ್ತಿಯ ನಡುವೆ ತೇಲಿ ಬಂದ ಆವಿಯಲ್ಲಿ ಪಡುವಲದ ನಿಸಿಲು ಬಿದ್ದುದರಿಂದ ಹೀಗೆ ತೋರಿರಲೂಬಹುದು. ಆದಾಗ್ಯೂ ಎಂದಿನಂತೆಯೇ ಆ ಅದ್ಭುತ ಮಿತ್ರನ ಆವಿರ್ಭಾವವು ಅರ್ನೆಸ್ಟನನ್ನು ಮತ್ತೆ ಹಿಂದೆಂದಿಗೂ ಅನುಭವಿಸದ ಆಶಾವಾದಿಯನ್ನಾಗಿ ಮಾಡಿತು.

“ಹೆದರಬೇಡ ಅರ್ನೆಸ್ಟ” ಅವನ ಎದೆ ನುಡಿಯಿತು ಆ ಶಿಲಾಮುಖವೇ ಪಿಸುಗುಟ್ಟಂತೆ “ಹೆದರಬೇಡ ಅರ್ನೆಸ್ಟ, ಬಂದೇ ಬರುವನು ಆತ ಬಂದೇ ಬರುವನು.”

ಇನ್ನೂ ಹಲವು ವರ್ಷಗಳು ಭರದಿಂದ ಶಾಂತವಾಗಿ ಸಾಗಿಹೋದವು. ಅರ್ನೆಸ್ಟ ಆಗಲೂ ತನ್ನ ಹುಟ್ಟಿದೆಡೆಯಾದ ಆ ಕಣಿವೆಯಲ್ಲಿಯೇ ಇದ್ದ, ಈಗ ಆತ ನಡುಹರೆಯದ ಗಂಡಸು. ಕಣ್ಣಿಗೆ ಕಾಣದ ರೀತಿಯಲ್ಲಿ ಅವನು ಜನರಿಗೆ ಹೆಚ್ಚು ಹೆಚ್ಚು ಪರಿಚಿತನಾಗಿದ್ದನು. ಹಿಂದಿನಂತೆ ಈಗಲೂ ತನ್ನ ರೊಟ್ಟಿಗಾಗಿ ರಟ್ಟೆ ಮುರಿದು ದುಡಿಯುತ್ತಿದ್ದ ತನ್ನ ಬದುಕಿನ ಹೆಚ್ಚಿನ ಹಾಗೂ ಅಚ್ಚುಮೆಚ್ಚಿನ ಜಾವಗಳನ್ನು ಮಾನವಕೋಟಿಯ ಮಿಗಿಲಾದ ಒಳಿತಿನ ಅಲೌಕಿಕವಾದ ಆಶೆಗಳಿಗೆ ವೆಚ್ಚಮಾಡಿದ್ದ. ಈ ಕುರಿತು ಆತ ದೇವತೆಗಳೊಂದಿಗೆ ಮಾತನಾಡುತ್ತಿದ್ದಂತೆ ಅನಿಸುತ್ತಿತ್ತು. ಮತ್ತು ಆ ಮೂಲಕ ಅವರಿಂದ ಏನೋ ಒಂದು ತಿಳುವಳಿಕೆಯ, ಸುವಿವೇಕದ ಅಂಶವನ್ನು ಅವನು ಅರಗಿಸಿಕೊಂಡಂತೆ ಕಾಣುತ್ತಿತ್ತು. ಅವನ ದಿನದಿನದ ಬಾಳು ಶಾಂತವಾದ ಒಳ್ಳೇ ವಿಚಾರಪೂರ್ಣವಾದ, ಕಲ್ಯಾಣಕಾರ್ಯದ ಪ್ರವಾಹವಾಗಿ ಹರಿಯುತ್ತಿತ್ತು. ಅದು ತನ್ನ ಗತಿಯ ಸುತ್ತಲೂ ಒಂದು ಹಸಿರು ವಲಯವನ್ನು ಉಂಟುಮಾಡಿತ್ತು. ಆ ಪ್ರವಾಹದಲ್ಲಿ ಆ ವಲಯದಲ್ಲಿ ಅವನ ತಿಳುವಳಿಕೆಯು ತಿಳಿಯಾಗಿ ಮೂಡಿತ್ತು. ಈ ಮನುಷ್ಯ ಹೀನ ದೀನನಾಗಿ

ಬದುಕುತ್ತಿದ್ದರೂ ದಿನದಿನವೂ ಬದುಕಿದ್ದ ಮೂಲಕ ಲೋಕವು ಹಚ್ಚು ಹೆಚ್ಚು ಒಳಿತಾಗದ ಒಂದೂ ದಿನವೂ ಇದ್ದಿಲ್ಲ. ಅವನು ತನ್ನ ದಾರಿಯಿಂದ ಅಡ್ಡಸರಿದು ಹೆಜ್ಜೆ ಇಡುತ್ತಿರಲಿಲ್ಲ. ಆದರೂ ತನ್ನ ನೆರೆಯವನಿಗೆ ಒಂದು ಅನುಗ್ರಹ ತಲುಪಿಸುತ್ತಿದ್ದ ಅನೈಚ್ಛಿಕವಾಗಿ ಆತ ಧರ್ಮಪ್ರಸಾರಕನಾಗಿದ್ದ ಅವನ ವಿಚಾರದ ಆರ್ಜವವೂ ಪಾವಿತ್ರ್ಯವೂ ವ್ಯಕ್ತವಾಗುವ ರೀತಿಯಲ್ಲಿಯೇ ಅವನ ಕೈಯಿಂದ ಎಸಗುವ ಸದ್ದಿಲ್ಲದ ಸತ್ಕೃತಿಯ ರೂಪವನ್ನು ತಾಳಿದ್ದವು. ಅವೇ ಅವನ ಮಾತಿನಲ್ಲಿಯೂ ಹರಿಯುತ್ತಿದ್ದವು. ಕೇಳಿದವರ ಬಾಳನ್ನು ರೂಪಿಸುವ ಸಂಸ್ಕಾರಗೊಳಿಸುವ ಸತ್ಯವನ್ನು ಅವನು ಆಡುತ್ತಿದ್ದನು, ಅವನ ಶ್ರೋತೃಗಳಿಗೆ ಅರ್ನೆಸ್ಟನು- ತನ್ನ ನೆರೆಹೊರೆಯ ಸರಿದೊರೆಯ ಗೆಳೆಯನು- ಸಾಮಾನ್ಯರನ್ನು ಮೀರುವ ಮನುಷ್ಯನೆಂಬ ಸಂಶಯ ಕೂಡ ಬರಲಿಲ್ಲ. ಅರ್ನೆಸ್ಟನಿಗಂತೂ ಆ ವಿಚಾರ ಸುಳಿದೇ ಇಲ್ಲ, ಆದರೂ ಹಳ್ಳದ ಜುಳು ಜುಳು ದನಿಯಂತೆ ಅನಿವಾರ್ಯವಾಗಿ ಅವನ ಮುಖದಿಂದ ಬೇರೆ ಯಾವ ಮಾನವನ ತುಟಿಗಳು ಆಡದಿದ್ದ ವಿಚಾರಗಳು ಹೊರಸೂಸುತ್ತಿದ್ದವು.

ಮಂದಿಯ ಮನಸ್ಸು ತಣ್ಣಗಾಗಲು ಸ್ವಲ್ಪ ಸಮಯ ದೊರೆತ ಮೇಲೆ 'ಬ್ಲಡ್ ಎಂಡ ಥಂಡರ' ಸೇನಾಪತಿಯ ಉಗ್ರ ಮುಖಮುದ್ರೆಗೂ, ಗುಡ್ಡ ದೋರೆಯ ಆ ಪ್ರಸನ್ನ ಮುಖಕ್ಕೂ ಹೋಲಿಕೆಯಿತ್ತೆಂದು ಭಾವಿಸುವ ತಮ್ಮ ಪ್ರಮಾದವನ್ನು ಅವರು ಒಪ್ಪಿಕೊಂಡರು. ಆದರೆ ಈಗ ಮತ್ತೆ ವೃತ್ತಪತ್ರಿಕೆಗಳಲ್ಲಿ ಅನೇಕ ವರದಿಗಳೂ 'ಪ್ಯಾರಾ'ಗಳೂ ಬರೆದು ಬರತೊಡಗಿದವು. ಯಾವನೋ ಒಬ್ಬ ಪ್ರಮುಖ ಮುತ್ಸದ್ದಿಯ ವಿಶಾಲ ಸ್ಕಂಧಗಳ ಮೇಲೆ ಆ ಶಿಲಾಮುಖದ ಪ್ರತಿರೂಪ ಅವತರಿಸಿದೆಯೆಂದು ಅವನೂ ಗೆದರಗೋಲ್ಡ ಹಾಗೂ ಬ್ಲಡ್ ಎಡ್ ಥಂಡರ್‌ನಂತೆಯೇ ಅದೇ ಕಣಿವೆಯಲ್ಲಿ ಹುಟ್ಟಿದ್ದು ಜೀವನದ ಆರಂಭದ ದಿನಗಳಲ್ಲಿಯೇ ದೇಶಾಂತರಕ್ಕೆ ಹೋಗಿ ಕಾಯದೆ ಮತ್ತು ರಾಜಕಾರಣಗಳ ವ್ಯವಸಾಯಕ್ಕೆ ತೊಡಗಿದ್ದನು. ಆ ಶ್ರೀಮಂತನ ಸಂಪತ್ತು ಮತ್ತು ಸೈನಿಕನ ಕತ್ತಿ ಇವುಗಳ ಬದಲು ಇವನಲ್ಲಿ ಚುರುಕಾದ ನಾಲಿಗೆಯಿತ್ತು. ಮತ್ತೆ ಅವೆರಡನ್ನು ಒಟ್ಟು ಹಾಕಿದರೂ ಇದು ಬಲಿಷ್ಠವಾಗಿತ್ತು. ಅವನ ವಾಗ್ಮಿತೆ ಅಷ್ಟು ಅದ್ಭುತವಿತ್ತು. ಅವನು

ಯಾವ ವಿಷಯವನ್ನೇ ಆಡಲೇ ಆಯ್ದುಕೊಳ್ಳಲಿ ಅವನಲ್ಲಿ ನಂಬಿಕೆ ಇಡದಿರುವದು ಕೇಳುವವರಿಗೆ ಅಸಾಧ್ಯವಾಗಿ ಬಿಡುತ್ತಿತು. ತಪ್ಪು ಸರಿಯಾಗಿ ಕಾಣುತ್ತಿತ್ತು. ಸರಿ ತಪ್ಪಾಗಿ ಕಾಣುತಿತ್ತು. ಏಕೆಂದರೆ ಅವನು ಮನಸ್ಸು ಮಾಡಿದರೆ ತನ್ನ ಶ್ವಾಸಮಾತ್ರದಿಂದ ಒಂದು ಬೆಳಕಿನ ಮಂಜುಕಟ್ಟಿ ಪ್ರಕೃತಿಯ ದಿನಪ್ರಭೆಯನ್ನು ಮಬ್ಬಾಗಿ ಮಾಡಿ ಕಾಣಿಸುತ್ತಿದ್ದನು. ಅವನ ನಾಲಿಗೆ ನಿಜವಾಗಿಯೂ ಒಂದು ಇಂದ್ರಜಾಲದ ಉಪಕರಣ. ಕೆಲವೊಮ್ಮೆ ಅದು ಸಿಡಿಲಿನಂತೆ ಗುಡುಗುತ್ತಿತ್ತು ಕೆಲವೊಮ್ಮೆ ಅತಿ ಇಂಪಾದ ಹಾಡಿನಂತೆ ಮಧುರವಾಗುತ್ತಿತ್ತು. ಅದು ಯುದ್ಧದ ಕಹಳೆಯಾಗಿತ್ತು. ಶಾಂತಿಯ ಗೀತವಾಗಿತ್ತು. ಅದರಲ್ಲಿ ಆಶಯವೇನೂ ಇರದಾಗ ಕೂಡ ಹೃದಯವಿದ್ದಂತೆ ತೋರುತ್ತಿತ್ತು. ಸತ್ಯವೆಂದರೆ ಅವನೊಬ್ಬ ಅದ್ಭುತ ವ್ಯಕ್ತಿ ಮತ್ತು ಅವನ ನಾಲಿಗೆಯು ಮಿಕ್ಕೆಲ್ಲ ಕಲ್ಪಿಸಬಹುದಾದ ಯಶಸನ್ನು ಸಾಧಿಸಿಕೊಟ್ಟ ನಂತರ — ರಾಜ್ಯಗಳ ಸಭಾಭವನಗಳಲ್ಲಿ ರಾಜರ, ಸತ್ತಾಧಿಕಾರಿಗಳ ಆಸ್ಥಾನದಲ್ಲಿ ಅದು ಕೇಳಿಸಿದ ನಂತರ ಕರಾವಳಿಯಿಂದ ಕರಾವಳಿಗೆ ಕೂಗುವ ಒಂಟಿ ಕಂಠವೆಂದು ಅವನ ಕೀರ್ತಿ ಜಗತ್ತು ತುಂಬೆಲ್ಲ ಹಬ್ಬಿಸಿದ ನಂತರ ಅದು ಕೊನೆಗೂ ಅವನ ದೇಶಬಾಂಧವರಿಗೆ ಅವನನ್ನು ಅಧ್ಯಕ್ಷ ಪಟ್ಟಕ್ಕೆ ಚುನಾಯಿಸಲು ಪ್ರೇರೇಪಿಸಿತು. ಈ ಮೊದಲೇ ಆತ ಖ್ಯಾತಿವಂತನಾಗಲು ಆರಂಭವಾಗುತ್ತಿದ್ದಾಗಲೇ ಅವನ ಪ್ರಶಂಸಕರು ಅವನಲ್ಲಿಯೂ ಹಿರಿಕಲ್ಲ ಮೋರೆಯಲ್ಲಿಯೂ ಸರಿಹೋಲಿಕೆಯನ್ನು ಕಂಡುಹಿಡಿದಿದ್ದರು. ಆ ಹೋಲಿಕೆಯಿಂದ ಅವರು ಇಷ್ಟು ಚಕಿತರಾದರು. ಅವನ ರಾಜಕೀಯ ಆಶೋತ್ತರಗಳಿಗೆ ಮಿಗಿಲಾದ ಅನುಕೂಲರೂಪವನ್ನು ಈ ಹೆಸರು ಕೊಡುವದೆಂದು ಭಾವಿಸಲಾಗಿತ್ತು. ಕ್ರೈಸ್ತ ಜಗದ್ಗುರು ಪೋಪ ಪದವಿಗೆ ಹೇಗೋ ಅಧ್ಯಕ್ಷಪದಕ್ಕೂ ತನ್ನಿಂದ ಹೊರತಾದ ಇನ್ನೊಂದು ನಾಮಕರಣವನ್ನು ಪಡೆದ ಹೊರತು ಯಾರೂ ಏರಿದ್ದು ಇಲ್ಲ.

ಅವನ ಮಿತ್ರರು ಅವನನ್ನು ಅಧ್ಯಕ್ಷಪಟ್ಟಕ್ಕೇರಿಸಲು ಶಕ್ಯವಿದ್ದಷ್ಟು ಶ್ರಮಿಸುತ್ತಿದ್ದಾಗ ಈ ಶಿಲಾಮುಖನು ತನ್ನ ಜನ್ಮಭೂಮಿಯಾದ ಕಣಿವೆಗೆ ಭೇಟಿಕೊಡಲು ಹೊರಟನು. ನಿಜವಾಗಿಯೂ ಅವನ ಉದ್ದೇಶ ತನ್ನ ನಾಗರಿಕ ಬಾಂಧವರ ಕೈ ಕುಲುಕಿ

ಬರುವದರ ಹೊರತು ಬೇರೇನೂ ಇದ್ದಿಲ್ಲ, ಚಿಂತೆಪಟ್ಟೂ ಇದ್ದಿಲ್ಲ. ಅಲ್ಲದೇ ಆ ಪ್ರದೇಶದಲ್ಲಿಯ ತನ್ನ ಸಂಚಾರ ಪರಿಣಾಮ ಚುನಾವಣೆಯ ಮೊದಲೇ ಏನಾಗಬಹುದೆಂದು ಆತ ಚಿಂತಿಸಿಯೂ ಇದ್ದಿಲ್ಲ. ಚಿಂತೆಪಟ್ಟೂ ಇದ್ದಿಲ್ಲ. ಇದು ಸ್ವತಃ ಸಿದ್ಧ ಆ ಸುವಿಖ್ಯಾತ ಮುತ್ಸದ್ದಿಯ ಸ್ವಾಗತಕ್ಕಾಗಿ ವೈಭವಯುತವಾದ ಸಿದ್ಧತೆಗಳನ್ನು ಮಾಡಲಾಯಿತು. ರಾಜ್ಯದ ಸರಹದ್ದಿನಲ್ಲಿಯೇ ಅವನನ್ನು ಇದಿರುಗೊಳ್ಳುವದಕ್ಕಾಗಿ ಅಶ್ವಾರೋಹಿಗಳ ಒಂದು ದಲವು ಹೊರಟಿತು. ಜನ ತಮ್ಮ ಕೆಲಸ ಬೊಗಸೆಗಳನ್ನು ಬಿಟ್ಟು ದಾರಿಯುದ್ದಕ್ಕೂ ನಿಂತರು- ಅವನು ಹಾದುಹೋಗುವಾಗ ನೋಡುವಾಗ ದಾರಿಯಲ್ಲಿ ಅರ್ನೆಸ್ಟನೂ ಇದ್ದ. ಒಂದಕ್ಕಿಂತ ಹೆಚ್ಚುಸಲ ನಿರಾಶೆಪಟ್ಟರೂ ಅವನದು ಅಷ್ಟು ಆಶಾವಾದಿಯೂ ಶ್ರದ್ಧಾಳುವೂ ಆದ ಸ್ವಭಾವ ಒಳಿತೆಂದು ಚೆಲುವೆಂದು ಕಂಡ ಯಾವುದೇ ಸಂಗತಿಯನ್ನು ನಂಬಲು ಯಾವಾಗಲೂ ಸಿದ್ಧ. ಅವನ ಹೃದಯ ಯಾವಾಗಲೂ ತೆರದೇ ಇತ್ತು–ಮೇಲಿನಿಂದ ಬರಲಿದ್ದ ಭಗವಾದನುಗ್ರಹವನ್ನು ಬಂದಾಗ ಹಿಡಿಯಲಿಕ್ಕೆ ಆದ್ದರಿಂದ ಈ ಸಲವೂ ಎಂದಿನಷ್ಟೇ ಹಿಗ್ಗಿನಿಂದ ಆತ ಹಿರಿಕಲ್ಲ ಮೋರೆಯ ಈ ಹೊಸ ಹೋಲಿಕೆಯನ್ನು ನೋಡ ಹೋದನು.

ಅಶ್ವದಲ ಖುರಪುಟಗಳ ಕಡಕಡಾಟದೊಡನೆ ಧೂಳಿನ ಕಾರ್ಮುಗಿಲು ಎಬ್ಬಿಸುತ್ತ ಪುಟಿಯುತ್ತ ಬಂದಿತು. ಆ ಕೆಂದೂಳಿಯ ಪ್ರಚಂಡ ಮೋಡವು ಇಷ್ಟು ದಟ್ಟವಾಗಿ ಎತ್ತರವಾಗಿ ಎದ್ದಿತು. ಗುಡ್ಡದೋರೆಯ ಕಲ್ಲಮೋರೆಯನ್ನು ಅದು ಅರ್ನೆಸ್ಟನ ಕಣ್ಣಿನಿಂದ ಸಂಪೂರ್ಣ ಮುಚ್ಚುಮರೆಮಾಡಿತು. ನೆರೆಕರೆಯ ಎಲ್ಲ ಗಣ್ಯವ್ಯಕ್ತಿಗಳು ಇಲ್ಲಿ ಕುದುರೆಯೇರಿ ಬಂದಿದ್ದರು. ಸಮವಸ್ತ್ರ ಧರಿಸಿದ ಲಷ್ಕರೀ ಅಧಿಕಾರಿಗಳು, ಕಾಂಗ್ರೆಸ್ ಸದಸ್ಕರು ಆ ಪರಗಣೆಯ ಶರೀಫ ಪತ್ರಿಕೆಗಳ ಸಂಪಾದಕರು ಅನೇಕ ರೈತರೂ ತಮ್ಮ ತಮ್ಮ ತಟ್ಟುಗಳನ್ನೇರಿ ಬಂದಿದ್ದರು ತಮ್ಮ ರವಿವಾರದ ಹಬ್ಬದ ಕೋಟನ್ನೇರಿಸಿಕೊಂಡು. ಅದು ನಿಜವಾಗಿಯೂ ಒಂದು ಸಮುಜ್ವಲ ದೃಶ್ಯ ವಿಶೇಷತಃ ಹಲವಾರು ಪತಾಕೆಗಳು ಆ ಅಶ್ವದಲದ ಮೇಲೆ ಓಲಾಡುತ್ತಿದ್ದಾಗ. ಅವುಗಳಲ್ಲಿ ಹಲವುಗಳ ಮೇಲೆ ಅವಿಖ್ಯಾತ ಮುತ್ಸದ್ದಿಯ ಹಾಗೂ ಹಿರಿಕಲ್ಲ ಮೋರೆಯ ವರ್ಣಚಿತ್ರಗಳು ಸಹೋದರನಂತೆ

ಒಂದನ್ನೊಂದು ನೋಡಿ ನಗುತ್ತಿದ್ದಂತೆ- ಅದೂ ಮನೆಸಲಿಗೆಯಿಂದ -ಕಂಡವು. ಆ ಚಿತ್ರಗಳನ್ನು ನಂಬುವುದಾದರೆ ಅವುಗಳ ಅನ್ಯೋನ್ಯ ಸಾದೃಶ್ಯವು ಆಶ್ಚರ್ಯಕರವಿತ್ತೆಂದು ಒಪ್ಪಲೇಬೇಕು. ಇನ್ನೊಂದು ವಿವರವನ್ನು ನಾವು ಮರೆಯಲಾಗದು. ತನ್ನ 'ದಿಗ್ವಿಜಯಿ' ಯಾದ ತೂರ್ಯಸ್ವನಗಳಿಂದ ಗಿರಿಗಹ್ವರಗಳನ್ನು ಮೊಳಗಿ ಮಾರ್ನುಡಿಯುವಂತೆ ಮಾಡುವ ವಾದ್ಯಮೇಳವು ಒಂದು ಏರ್ಪಟ್ಟಿತ್ತು. ಜೀವದಾಳವನ್ನೇ ಕಲಕುವ ಗಾಳಿಗೂ ಹಗುರಾದ ಆಲಾಪಗಳು ಆ ಪರ್ವತದವರು ಜಾರುಗಳಿಂದ ಒಮ್ಮೆಲೇ ಹೊಮ್ಮಿಹಚ್ಚಿದವು. ಆ ಕಣಿವೆಯ ಪ್ರತಿ ಮೂಲೆಮೂಲೆಯೂ ಆ ವಿಖ್ಯಾತ ಅಭ್ಯಾಗತನನ್ನು ಸ್ವಾಗತಿಸಲು ಅಂದು ದನಿಪಡೆದಂತೆ ಅನಿಸಿತು. ಆದರೆ ಎಲ್ಲಕ್ಕೂ ಹೆಚ್ಚಿನ ಪರಿಣಾಮ ಆ ದೂರದ ಪರ್ವತ ಪಾರ್ಶ್ವವು ಆ ಸಂಗೀತವನ್ನು ಪ್ರತಿಕ್ಷೇಪಿಸಿದಾಗ ಕೇಳಿತು. ಆಗ ಆ ಮಹಾಮುಖವೇ ಕೊನೆಗೊಮ್ಮೆ ಭವಿಷ್ಯವಾಣಿ ಬರೆದ ಮಹಾಪುರುಷನೆಂದು ಒಪ್ಪಿಕೊಂಡಂತೆ ಆ ಗೆಲುವಿನ ಗೀತದ ಮೇಳವನ್ನು ತಾನೇ ಹಾಡಿ ಹಿಗ್ಗಿಸುವಂತೆ ತೋರಿತು.

ಇದೆಲ್ಲ ಆಗುವಾಗ ಜನಸ್ತೋಮ ತಮ್ಮ ಟೊಪ್ಪಿಗೆಯನ್ನು ತೂರಾಡುತ್ತಿದ್ದರು, ಹರ್ಷದಿಂದ ಕೂಗಾಡುತ್ತಿದ್ದರು. ಅವರ ಉತ್ಸಾಹದ ಸಂಸರ್ಗದಿಂದ ಅರ್ನೆಸ್ಟನ ಹೃದಯವೂ ಉದ್ದೀಪಿತವಾಯಿತು. ಅವನು ತನ್ನ ಹ್ಯಾಟನ್ನು ಹಾರಿಸಿ ಎಲ್ಲಕ್ಕೂ ದೊಡ್ಡ ದನಿಯಲ್ಲಿ ಕೂಗುವವರನ್ನು ಸರಿಗಟ್ಟುವ ದನಿಯಲ್ಲಿ ಕೂಗಿದನು. “ಮಹಾ ಪುರುಷನಿಗೆ ಜಯವಾಗಲಿ, ವೃದ್ಧ ಶಿಲಾಮುಖನಿಗೆ ಜಯವಾಗಲಿ”. ಆದರೆ ಆಗಲೂ ಅವನು ವೃದ್ಧನನ್ನು ನೋಡಿದ್ದಿಲ್ಲ.

“ಇಕೋ, ಇಕೋ, ಇಲ್ಲಿ ನೋಡಿ ಅವನನ್ನು!” ಅರ್ನೆಸ್ಟನ ಹತ್ತಿರ ನಿಂತವರ ಕೂಗಿದರು. “ಅಕೋ ಆ ವೃದ್ಧ ಶಿಲಾಮುಖವನ್ನು ನೋಡಿ. ಅತ್ತ ಗುಡ್ಡದ ಹಳೆಯ ಮನುಷ್ಯನನ್ನು ನೋಡಿ” ಅವರಿಬ್ಬರೂ ಯಮಳರಂತೆ ಕಾಣುತ್ತಾರೋ ನೋಡಿ.”

ಇವೆಲ್ಲ ಹರ್ಷ ಸಂಭ್ರಮದ ಸಜ್ಜಿಕೆಯ ನಡುವೆ ನಾಲ್ಕು ಬಿಳಿ ಕುದುರೆಗಳಿಂದ ಎಳೆಯಲ್ಪಟ್ಟ ಒಂದು ಬೋಳುಗಾಡಿ ಬಂದಿತು. ಮತ್ತು ಆ ಗಾಡಿಯಲ್ಲಿ ತನ್ನ ದೊಡ್ಡ ದಪ್ಪ ತಲೆಯನ್ನು ಬೋಳು ಬಿಟ್ಟು ಆ ವೃದ್ಧ ಶಿಲಾಮುಖನೆಂದು ಖ್ಯಾತಿವೆತ್ತ ಮುತ್ಸದ್ದಿಯೇ ಕೂತಿದ್ದನು.

"ಒಪ್ಪಿಕೋ, ಕೊನೆಗೂ ಒಮ್ಮೆ ಹಿರಿಕಲ್ಲ ಮೋರೆಯ ಸರಿಪಾಟಿ ಬಂದಂತಾಯಿತೆಂದು ಒಪ್ಪಿಕೋ." ಅರ್ನೆಸ್ಟನ ನೆರೆಯವನೊಬ್ಬ ಅವನಿಗೆ ಅಂದನು.

ಈಗ ಒಂದು ಸಂಗತಿ ಒಪ್ಪಿಕೊಳ್ಳಲೇಬೇಕು. ಗಾಡಿಯಿಂದ ನಗುತ್ತ ತಲೆಬಾಗುತ್ತಿರುವಾಗ ಆ ಮುಖಚರ್ಯೆಯ ಮೊದಲ ನೋಟಕ್ಕೆ ಆ ಮುಖದಲ್ಲಿಯೂ ಗುಡ್ಡದೋರೆಯ ನಿತ್ಯ ಪರಿಚಯದ ಕಲ್ಲಮೋರೆಯಲ್ಲಿಯೂ ಸೌಮ್ಯವಿರಬೇಕೆಂದು ಅರ್ನೆಸ್ಟನೂ ಕಲ್ಪಿಸಿದ, ಅಗಲ ಗಾತ್ರದ ಆ ಹಣೆಯ ಅದರ ಎತ್ತರವು ಇತರ ಮುಖ ಲಕ್ಷಣಗಳು ಒಂದು ದೈತ್ಯ ಶಿಲ್ಪದ ಮಾದರಿಯಲ್ಲಿ ಒಳ್ಳೇ ಬಿರುಸಿನಿಂದ ಕಡೆದು ಮಾಡಿದಂತೆ ಕಂಡಿತು. ಆದರೆ ಆ ಅರಸು ತೂಕ ಆ ಪರ್ವತ ಮುಖವನ್ನು ಬೆಳಗಿದ ಅದರ ಭಾರವಾದ ದೃಶ್ಯವನ್ನು ಒಂದು ಚೈತನ್ಯ ಶಕ್ತಿಯಾಗಿ ಸೂಕ್ಷ್ಮವಾಗಿ ಮಾರ್ಪಡಿಸಿದ ಆ ದಿವ್ಯ ಸಹಾನುಭೂತಿಯ ಭವ್ಯ ಆವಿಷ್ಕಾರವು ಇಲ್ಲಿ ಹುಡುಕುವದು ವ್ಯರ್ಥವಾಗಿತ್ತು. ಏನೋ ಒಂದು ತತ್ವ ಮೂಲದಲ್ಲಿಯೇ ಇದ್ದಿಲ್ಲ; ಇಲ್ಲವೇ ಕಳೆದುಹೋಗಿತ್ತು. ಆದ್ದರಿಂದ ಅದ್ಭುತ ಪ್ರತಿಭಾಶಕ್ತಿಯ ಮುತ್ಸದ್ದಿಯ ಆಳವಾದ ಕಣ್ಣುಗಳಲ್ಲಿ ಸೋತಭಾವದ ಕಾವಳ ಕವಿದಂತಿತ್ತು. ತನ್ನ ಆಟಿಕೆಗಳ ಬಳಕೆಯನ್ನು ಮೀರಿ ಬೆಳೆದ ಬಾಲಕನಂತೆ ಪ್ರಚಂಡ ಕರ್ತೃತ್ವ ಶಕ್ತಿಯಿದ್ದೂ ಅಲ್ಪವಾದ ಗುರಿಗಳುಳ್ಳ ಉನ್ನತ ಕಾರ್ಯಸಾಧನೆ ಮಾಡಿಯೂ ಶೂನ್ಯವೂ ಅಂಧಕವೂ ಅನಿಸುವ ಮನುಷ್ಯನಂತೆ ಏಕೆಂದರೆ ಹಿರಿದಾದ ಕಾರ್ಯಸಾಧನೆಗೆ ಯಾವದೇ ಘನವಾದ ಉದ್ದೇಶವು ಒಂದು ವಾಸ್ತವತೆಯನ್ನು ಕೊಟ್ಟಿದ್ದಿಲ್ಲ.

ಆದರೂ ಅರ್ನೆಸ್ಟನ ನೆರೆಯವನು ತನ್ನ ಮೊಳಕೈಯಿಂದ ಅವನ ಪಕ್ಕದಲ್ಲಿ ತಿವಿಯುತ್ತಿದ್ದನು. ಎತ್ತರಕ್ಕಾಗಿ ಬಲವಂತಪಡಿಸುತ್ತಿದ್ದನು.

"ಒಪ್ಪಿಕೋ, ಒಪ್ಪಿಕೋ. ಈ ಮನುಷ್ಯ ಆ ಗುಡ್ಡದ ಹಳೆಯ ಮನುಷ್ಯನ ಥೇಟು ತದ್ರೂಪವಲ್ಲವೇ?"

"ಅಲ್ಲ" ಅರ್ನೆಸ್ಟ ಹಟಾತ್ತಾಗಿ ಹೇಳಿಬಿಟ್ಟ "ನನಗೆ ಯಾವ ತದ್ರೂಪವೂ ಗೋಚರಿಸುವುದಿಲ್ಲ."

"ಹಾಗಾದರೆ, ಆ ಹಿರಿಕಲ್ಪ ಮೋರೆಯದೇ ದುರ್ದೈವವದು" ಎಂದು ನೆರೆಯವನು ನುಡಿದು ವೃದ್ಧ ಶಿಲಾಮುಖ ಸಾಹೇಬನ ಹೆಸರೆತ್ತಿ ಒಂದು ಜಯಘೋಷ ಕೂಗಿದನು.

ಆದರೆ ಅರ್ನೆಸ್ಟ ಖಿನ್ನವಾಗಿ ಪೂರಾ ಹತಾಶೆಯಿಂದ ಹಿಂದಿರುಗಿ ದೂರ ಸರಿದನು. ಇದು ಅತ್ಯಂತ ಅವನ ಉದ್ವೇಗಕರ ನಿರಾಶೆಗಳಲ್ಲಿ ಒಂದು. ಭವಿಷ್ಯವಾಣಿಯ ಆಶೋತ್ತರಗಳನ್ನು ಪೂರೈಸಬಲ್ಲ ಒಬ್ಬ ಮನುಷ್ಯನು ಕಣ್ಣಿಗೆ ಬಿದ್ದಿದ್ದನು. ಆದರೆ ಆ ಮನುಷ್ಯನಿಗೆ ಹಾಗೆ; ರೂಪಗೊಳ್ಳುವ ಸಂಕಲ್ಪ ಮಾಡದೇ ಹೋದನು. ಈ ನಡುವೆ ಅಶ್ವದಲ ಗುಡಿಪತಾಕೆಗಳು ವಾದ್ಯವಾಲಗ, ಕಹಳೆ ಕೊಂಬುಗಳು ಅವನ ಮುಂಗಡ ಹಾದುಹೋದವು. ಕೂಗಾಡುವ ಜನಸ್ತೋಮ ಹಿಂಬಾಲಿಸಿತು. ತುಳಿದೆದ್ದ ಧೂಳಿ ತಳಕ್ಕೆ ಇಳಿಯಲು ಬಿಟ್ಟು ಆ ಹಿರಿಕಲ್ಲ ಮೋರೆ ಮತ್ತೆ ಕಾಣಿಸಿಕೊಂಡಿತು. ತನ್ನ ಶತಮಾನಗಳ ಮೈನಿರಿಯಿಂದ ಮತ್ತೆ ಬೆಳಗಿತು.

"ಇಕೋ, ಇಲ್ಲಿದ್ದೇನೆ ನಾನು ಅರ್ನೆಸ್ಟ" ಆ ಅನುಗ್ರಹಪೂರ್ಣವಾದ ತುಟಿಗಳು ಅಂದಂತೆ ಅನಿಸಿತು. "ನಿನಗಿಂತ ಹೆಚ್ಚು ಉದ್ದ ನಾನು ಕಾದಿದ್ದೇನೆ. ಆದರೂ ದಣಿದಿಲ್ಲ, ಹೆದರಬೇಡ. ಆ ಮನುಷ್ಯ ಬರುವನು."

ಹೆಜ್ಜೆಯ ಮೇಲೆ ಹೆಜ್ಜೆಯಿಕ್ಕುವ ವರ್ಷಗಳು ಮುಂತೆರಳಿದವು. ಅವು ಈಗ ನರೆಗೂದಲು ತಂದವು. ಅರ್ನೆಸ್ಟನ ತಲೆಯ ಮೇಲೆ ಅಲ್ಲಲ್ಲಿ ಹರಡಿದವು. ಅವನ ಹಣೆಯ ಮೇಲೆ ಹಿರಿಮೆಯ ನಿರಿಗೆಗಳನ್ನು ಹಬ್ಬಿಸಿದವು. ಗಲ್ಲದ ಮಡಿಕೆಗಳನ್ನು ಬರೆದವು. ಅವನೀಗ ವಯಸ್ಸಾದ ವ್ಯಕ್ತಿ ಆದರೆ ಆ ವಯಸ್ಸು ವ್ಯರ್ಥವಾಗಿ ಕಳೆದಿಲ್ಲ. ಅವನ ತಲೆಯ ಮೇಲಿನ ನರೆಗೂದಲಿಗಿಂತ ತರೆಯೊಳಗಿನ ಪ್ರಾಜ್ಞ ಪ್ರೌಢಿಮೆಯ ವಿಚಾರ ಹೆಚ್ಚು ಗೌರವದ್ದು. ಅವನ ಮುಖದ ಮುದುಡು ಮಡಿಕಳ ಕಾಲನು ಕೊರೆದಿದ್ದ ಶಿಲಾಲಿಪಿಯಾಗಿತ್ತು. ಆ ಲಿಪಿಯಲ್ಲಿ ಅವನ ಬಾಳಿನಲ್ಲಿ ಸತ್ವ ಪರೀಕ್ಷೆಗೆ ಇಳಿದ ಪ್ರಾಜ್ಞತೆಯ ಗಾದೆಗಳು ಬರೆಯಲಾಗಿದ್ದವು. ಈಗ ಅರ್ನೆಸ್ಟ ಅಜ್ಞಾತ ವ್ಯಕ್ತಿಯಾಗಿ ಉಳಿದಿದ್ದಿಲ್ಲ, ಎಷ್ಟೆಲ್ಲ ಜನ ಹುಡುಕುವ ಖ್ಯಾತಿಯು ಹುಡುಕಾಡದೇ ಹಂಬಲಿಸಿದೆ. ಅವನೆಡೆಗೆ ನಡೆದು ಬಂದಿತ್ತು. ಅವನು ಹುಟ್ಟಿ ಬದುಕುತ್ತಿದ್ದ ಆ ಕೊಳ್ಳದ ಹೊರಗೆ ವಿಶಾಲವಾದ ಜಗತ್ತಿನಲ್ಲಿ ಅವನ ಪರಿಚಯವನ್ನು ಅದು ಹಬ್ಬಿಸಿತ್ತು. ಕಾಲೇಜುಗಳ ಪ್ರಾಧ್ಯಾಪಕರು ನಗರಗಳ ಕಾರ್ಯಕರ್ತರೂ ಕೂಡ ಅರ್ನೆಸ್ಟನನ್ನು ಕಂಡು ಮಾತಾಡಿಸಲು ಬರುತ್ತಿದ್ದರು. ಏಕೆಂದರೆ ಒಂದು ವಾರ್ತೆ ಬಿತ್ತರಿಸಿ ಹೋಗಿತ್ತು. ಈ ಸರಳಜೀವಿ ಒಕ್ಕಲಿಗನಲ್ಲಿ ಯಾರಲ್ಲಿಯೂ ಇರದಂಥ ವಿಚಾರಗಳಿದ್ದವು. ಆ ವಿಚಾರಗಳು ಪುಸ್ತಕಗಳಿಂದ ಬಂದವಲ್ಲ. ಹಚ್ಚಿನ ಎತ್ತರ ಗಾಂಭೀರ್ಯದಿಂದ ಒಂದು ಶಾಂತವೂ ಪರಿಚಿತವೂ ಆದ ಅರಸು ತೂಕದಿಂದ ದೇವತೆಗಳೊಂದಿಗೆ ದಿನನಿತ್ಯದ ಗೆಳೆಯರಂತೆ ಆತ ಮಾತನಾಡುತ್ತಿದ್ದನೋ ಎಂಬಂತೆ ಜ್ಞಾನಿಯೋ ಮುತ್ಸದ್ದಿಯೋ ಪರೋಪಕಾರಿಯೋ ಯಾರೇ ಇರಲಿ ಅರ್ನೆಸ್ಟನು ಬಂದ ಅತಿಥಿಗಳನ್ನು ಸಾಮ್ಯ ಕಳಕಳಿಯಿಂದ ಸ್ವಾಗತಿಸುತ್ತಿದ್ದನು. ಈ ಕಳಕಳಿ ಬಾಲ್ಯದಿಂದಲೇ ಅವನ ಶೀಲವಾಗಿತ್ತು. ಮತ್ತು ಅವರ ಇಲ್ಲವೇ ತನ್ನ ಹೃದಯದಲ್ಲಿ ಅತಿ ಆಳದಲ್ಲಿ ಹುದುಗಿದ್ದ ಇಲ್ಲವೇ ಅತಿ ಮೇಲಕ್ಕೆ ಬಂದಿದ್ದ ಯಾವ ವಿಚಾರವಾಗಿಯೂ ಅವರೊಡನೆ ಮುಚ್ಚುಮರೆಯಿಲ್ಲದೇ ಮಾತನಾಡುತ್ತಿದ್ದನು. ಅವನಿಗೆ ತಿಳಿಯದಂತೆ ಸಂಧ್ಯಾರಾಗದ ಮಂದ ಕಾಂತಿಯಂತೆ ಅವರ ಮೇಲೆ ಬೆಳಗುತ್ತಿತ್ತು. ಅಂಥ ಸಂವಾದಗಳ ಭಾವಪೂರ್ಣತೆಯಿಂದ ಚಿಂತನಪರರಾದ ಅತಿಥಿಗಳು ಅವನಿಂದ ಬೀಳ್ಕೊಂಡು

ಹೊರಬೀಳುತ್ತಿದ್ದರು. ಮತ್ತು ಕಣಿವೆ ದಾರಿಯಿಂದ ಹಾಯುವಾಗ ಆ ಹಿರಿಕಲ್ಲ ಮೋರೆಯ ಕಡೆಗೆ ಕಣ್ಣೆತ್ತಿ ನೋಡಲು ನಿಲ್ಲುತ್ತಿದ್ದರು ಮತ್ತು ಅದು ಯಾವುದೋ ಮನುಷ್ಯ ಚರ್ಯೆಯಲ್ಲಿ ಅದರ ಸರಿಹೋಲಿಕೆ ತಾವು ನೋಡಿದಂತೆ ಅವರಿಗೆ ಅನಿಸುತ್ತಿತ್ತು. ಆದರೆ ಅದು ಎಲ್ಲಿ ಎಂಬುದು ಮಾತ್ರ ಅವರಿಗೆ ನೆನಪಾಗುತ್ತಿದ್ದಿಲ್ಲ.

ಅರ್ನೆಸ್ಟನು ಬಳಿದು ದೊಡ್ಡವನಾಗುತ್ತಿದ್ದಾಗ ಬೆಳೆದು ಮುದುಕನಾಗುತ್ತಿದ್ದಾಗ ಕೊಡುಗೈಯ ದೈವವು ಈ ಭೂಮಿಗೆ ಒಬ್ಬ ಹೊಸ ಕವಿಯನ್ನು ಕರುಣಿಸಿತು. ಅವನೂ ಈ ಕಣಿವೆಯಲ್ಲಿಯೇ ಹುಟ್ಟಿದವನು. ಅದರೆ ತನ್ನ ಬಾಳಿನ ಬಹುಭಾಗವನ್ನು ಆ ಅದ್ಭುತ ರಮಣೀಯ ಪ್ರದೇಶದಿಂದ ದೂರ ನಗರಗಳ ಸಂದಣಿಗೊಂದುಗಳ ಗಲಭೆಯಲ್ಲಿ ತನ್ನ ಮಧುರ ಗೀತವನ್ನು ತೋಡಿಕೊಳ್ಳುತ್ತ ಕಳೆದಿದ್ದನು. ಆದರೆ ಆಗಾಗ್ಗೆ ಅವನಿಗೆ ಚಿಕ್ಕಂದಿನಲ್ಲಿ ಚಿರಪರಿಚಿತವಾದ ಪರ್ವತಗಳು ತಮ್ಮ ಹಿಮಶಿಖರಗಳನ್ನು ಅವನ ಕವಿತೆಯ ವಿಶಾಲ ವಾತಾವರಣದಲ್ಲಿ ತಲೆಯೆತ್ತುತ್ತಿದ್ದವು. ಆ ಹಿರಿಕಲ್ಲ ಮೋರೆಯನ್ನು ಆತ ಮರೆತಿಲ್ಲ. ಅದರ ಮೇಲೆ ಆತ ಒಂದು ಸ್ತೋತ್ರವನ್ನೇ ರಚಿಸಿದ್ದನು. ಆ ಸ್ತೋತ್ರ ಆ ಮುಖವೇ ತನ್ನ ಭವ್ಯ ತುಟಿಗಳಿಂದ ಉಚ್ಚರಿಸುವಷ್ಟು ಶ್ರೀಯುತವಾಗಿತ್ತು. ಈ ಪ್ರತಿಭಾಮಯ ಪುರುಷನು ಸ್ವರ್ಗದಿಂದಲೇ ಅದ್ಭುತ ಶಕ್ತಿಗಳಿಂದ ಕೂಡಿ ಅವತರಿಸಿದ್ದನೆಂದು ನಾವು ಹೇಳಬಹುದು. ಅವನು ಒಂದು ಪರ್ವತವನ್ನು ಕುರಿತು ಹಾಡಿದರೆ ಮಾನವಕೋಟಿಯೆಲ್ಲ ಅಲ್ಲಿ ಪ್ರತ್ಯಕ್ಷ ಹಿಂದೆ ಕಂಡಿದ್ದಕ್ಕಿಂತ ಮಿಗಿಲಾದ ಮಹಿಮೆಯ ಶೋಭೆಯು ಅವರ ಎದೆಯ ಮೇಲೆ ಚಾಚಿದ್ದು ಇಲ್ಲವೇ ಅದರ ಶಿಖರಕ್ಕೆ ಏರಿದ್ದು ನೋಡುತ್ತಿದ್ದರು. ಅವನ ಕಾವ್ಯವಸ್ತು ಒಂದು ಸುಂದರ ಸರೋವರವಾಗಿದ್ದರೆ ಅದರ ಮೇಲೆ ಇನ್ನು ಮುಂದೆ ಇನ್ನು ಮುಂದೆ ಇನ್ನು ಮುಂದೆ ಚಿರತರವಾಗಿ ಬೆಳಗುವಂಥ ಒಂದು ದಿವ್ಯಸ್ಮಿತವು ಬೀಸಿದಂತೆ ಆಗುತ್ತಿತ್ತು. ಅದರ ಭಯಾನಕ ಅಂತರಾಳದ ಆಳವಾದ ಪ್ರಚಂಡತೆಯ ಎತ್ತರಕ್ಕೆ ಉಕ್ಕೇರಿ ಬರುವಂತೆ ಅನಿಸುತ್ತಿತ್ತು. ಆ ಹಾಡಿನ ಭಾವನೆಯಿಂದ ಉದ್ರೇಕಗೊಂಡಿತೋ ಎಂಬಂತೆ! ಹೀಗೆ ಆ ಕವಿಯು ತನ್ನ ಕಟಾಕ್ಷವನ್ನು ಅನುಗ್ರಹಿಸಿದ ಗಳಿಗೆಯಿಂದ ಜಗತ್ತು ಬೇರೆಯಾಗಿ ಹಚ್ಚು ಇಳಿತಾಗಿ

ತೋರಡಿಸುತ್ತಿತು. ಸೃಷ್ಟಿಕರ್ತನು ತನ್ನ ಕೃತಿಗೆ ಕೊನೆಯ ಕಲಾಸ್ಪರ್ಶವೆಂದು ಅವರನ್ನು ದಯಪಾಲಿಸಿದ್ದನು. ಈ ಕವಿಯು ಬಂದು ವಿವೇಚಿಸಿ ವಿಶದಪಡಿಸಿ ಪೂರ್ಣಗೊಳಿಸಿದ ಹೊರತು ಸೃಷ್ಟಿಯ ಸಮಾಪ್ತಿಯಾಗುತ್ತಿದ್ದಿಲ್ಲ.

ಅವನ ಮನುಷ್ಯ ಬಾಂಧವರು ಅವನ ಕವಿತೆಯ ವಿಷಯ ಯಾವಾಗಲೂ ಪರಿಣಾಮವು ಅಷ್ಟೇ ಉನ್ನತವೂ ಸುಂದರವೂ ಆಗುತ್ತಿತ್ತು. ಬದುಕಿನ ಸಾಮಾನ್ಯ ಧೂಳಿಯ ಲೇಪದಿಂದ ಮಲಿನರಾದ ನರನಾರಿಯರು ಅವನ ದಿನದ ದಾರಿಯಲ್ಲಿ ಹಾಯ್ದಾಗ ಒಂದು ಶಿಶುವು ಆ ಹಾದಿಯಲ್ಲಿ ಆಡುತ್ತಿದ್ದಾಗ ಅವನು ತನ್ನ ಕಾವ್ಯ ನಿಷ್ಠೆಯ ತಂತ್ರಾವೃತ್ತಿಯಲ್ಲಿ ಅವರನ್ನು ಅವಲೋಕಿಸಿದರೆ ಸಾಕು, ಅವರು ಉದಾತ್ತ ಶೋಭೆಯನ್ನು ತಾಳುತ್ತಿದ್ದರು. ಅವರನ್ನು ಒಂದು ದಿವ್ಯ ಬಾಂಧವ್ಯದಲ್ಲಿ ಬಳಸಿ ಸುತ್ತುವ ಮಹಾಶೃಂಖಲೆಯ ಚಿನ್ನದ ಕೊಂಡಿಗಳನ್ನು ಆತ ವ್ಯಕ್ತಪಡಿಸುತ್ತಿದ್ದನು. ಅವರ ದಿವ್ಯಯೋನಿಯ ಗುಪ್ತ ಗುರುತುಗಳನ್ನು ಪ್ರಕಟಮಾಡಿ ಆ ಬಾಂದವ್ಯದ ಗೌರವಕ್ಕೆ ಅವರು ಅರ್ಹರಾಗುವಂತೆ ಮಾಡುತ್ತಿದ್ದನು. ಇನ್ನು ಇಂಥ ಪ್ರಕೃತಿಯ ಎಲ್ಲ ಸೌಂದರ್ಯವು ಗೌರವ ಗಾಂಭೀರ್ಯವೂ ಆ ಕವಿಯ ಕಲ್ಪನಾ ವಿಲಾಸದಲ್ಲಿಯೇ ಇರುತ್ತಿತ್ತೆಂದು ಸಾಧಿಸಿ ತಮ್ಮ ತೀರ್ಮಾನಗಳ ತಿಳುವಳಿಕೆಯ ತೂಕವನ್ನು ತೋರಿಸುವವರೂ ಕೆಲವರು ಇದ್ದರು. ಅಂಥವರು ತಮ್ಮಮಟ್ಟಿಗೆ ಬೇಕಷ್ಟು ಆಡಿಕೊಳ್ಳಿಲಿ ನಿಸರ್ಗವು ಅಂಥವರನ್ನು ತೀರ ತಿರಸ್ಕಾರದ ಒಂದು ಕಟುವಾದ ಔದಾರ್ಯದಲ್ಲಿ ಎಲ್ಲ ಹಂದಿಗಳನ್ನು ಉಂಟು ಮಾಡಿದ ಮೇಲೆ ಉಳಿದ ಹೊಲಸು ದ್ರವ್ಯವನ್ನು ಮೆತ್ತಿ ಮಾಡಿರಬೇಕು. ಮಿಕ್ಕ ಎಲ್ಲ ವಸ್ತುಗಳ ಮಟ್ಟಿಗೆ ಕವಿಯ ಆದರ್ಶವೇ ನಿತ್ಯ ಸತ್ಯವಾಗಿತ್ತು.

ಈ ಕವಿಯ ಹಾಡುಗಳು ಅರ್ನೆಸ್ಟನ ಕೈಗೆ ಬಂದವು. ತನ್ನ ವಾಡಿಕೆಯ ದುಡಿಮೆಯ ನಂತರ ತನ್ನ ಗುಡಿಸಲಿನ ಬಾಗಿಲಿನ ಕಾಲ್ಮಣೆಯ ಮೇಲೆ ಕುಳಿತು ಅವನು ಅವುಗಳನ್ನು ಓದಿದನು. ಅಲ್ಲಿಯೇ ಆತ ಜೀವಾವಧಿಯೆಲ್ಲ ಆ ಹಿರಿಕಲ್ಲ ಮೋರೆಯನ್ನು ದಿಟ್ಟಿಸುತ್ತ ತನ್ನ ವಿಶ್ರಾಂತಿಯನ್ನು ವಿಚಾರದಿಂದ ತುಂಬಿದ್ದನು. ಈಗ ಆ ಕವಿಯ

ಸೊಲ್ಲುಗಳನ್ನು ಓದುತ್ತಿದ್ದಂತೆ ಅವನ ಆತ್ಮವು ಒಳಒಳಗೆ ಪುಲಕಿತವಾಯಿತು. ತನ್ನ ಮೇಲೆ ಕೃಪಾಕಟಾಕ್ಷ ಬೆಳಗುತ್ತಿದ್ದ ಆ ಮಹಾ ಮುಖದತ್ತ ಆತ ಕಣ್ಣು ಎತ್ತಿದನು.

"ಓ! ರಾಜಗಾಂಭೀರ್ಯ ಮಿತ್ರನೇ" ಆತ ಪಿಸುಗುಟ್ಟಿದನು. "ಈ ಕವಿಯು ನಿನಗೆ ಹೋಲಲು ಯೋಗ್ಯವಲ್ಲವೇ?" ಆ ಮುಖ ಮುಗುಳುನಗೆ ನಕ್ಕಂತೆ ಕಂಡಿತು. ಆದರೆ ಒಂದು ಶಬ್ದವನ್ನೂ ಆಡಲಿಲ್ಲ.

ಅದೇ ಸಮಯ ಇನ್ನೊಂದು ಸಂಗತಿ ಒದಗಿ ಬಂದಿತ್ತು. ಆ ಕವಿಯು ಬಹುದೂರ ವಾಸಿಸುತ್ತಿದ್ದರೂ ಅರ್ನೆಸ್ಟನ ಬಗೆಗೆ ಕೇಳಿದ್ದನು. ಇಷ್ಟೇ ಅಲ್ಲ, ಅವನ ಶೀಲ ಚಾರಿತ್ರಗಳ ಕುರಿತು ತುಂಬ ವಿಚಾರ ಮಾಡಿದ್ದನು. ಬಾಳಿನ ಉದಾತ್ತ ಸರಳತೆಯ ಕೈಗೆ ಕೈ ಇಟ್ಟು ಯಾರ ಅಶಿಕ್ಷಿತ ಜ್ಞಾನವು ಹೆಜ್ಜೆ ಇಡುತ್ತಿತ್ತೋ ಅಂಥ ಮನುಷ್ಯನನ್ನು ನೋಡುವದಕ್ಕಿಂತ ಹೆಚ್ಚಿನದನ್ನು ಆತ ಬೇರೆ ಬಯಸಲಿಲ್ಲ. ಆದ್ದರಿಂದ ಒಂದು ಬೇಸಿಗೆಯ ಮುಂಜಾನೆ ಆತ ರೈಲಿನಿಂದ ಪ್ರಯಾಣ ಬೆಳೆಸಿ ಇಳಿಹೊತ್ತಿಗೆ ಅರ್ನೆಸ್ಟನ ಗುಡಿಸಲಿನಿಂದ ಅನತಿ ದೂರದಲ್ಲಿ ಬಂಡಿಯಿಂದ ಇಳಿದನು. ಹಿಂದೆ ಗ್ಯಾದರ ಗೋಲ್ಡನ ಪ್ರಾಸಾದವಾಗಿದ್ದ ಆ ಭವ್ಯ ಹೋಟೆಲ್ ಹತ್ತಿರವೇ ಇತ್ತು. ಆದರೆ ಕವಿಯು ಕಂಕುಳಲ್ಲಿ ಕ್ಯಾನವಾಸ ಬ್ಯಾಗನ್ನು ಅವಚಿಕೊಂಡು ಅರ್ನೆಸ್ಟ ಎಲ್ಲಿ ವಾಸಿಸುವನೆಂದು ಕೂಡಲೇ ಕೇಳಿದನು. ಮತ್ತು ಅವನ ಅತಿಥಿಯಾಗಲೆಂದು ನಿರ್ಧರಿಸಿದನು.

ಬಾಗಿಲನ್ನು ಸಮೀಪಿಸುತ್ತಿದ್ದಂತೆ ಆ ವೃದ್ಧ ಸಾತ್ವಿಕ ಜೀವಿಯು ಕೈಯಲ್ಲಿ ಒಂದು ಪುಸ್ತಕವನ್ನು ಹಿಡಿದು ಅಲ್ಲಿಯೇ ಕೂತಿದ್ದನ್ನು ಆತ ಕಂಡನು. ಆತ ಒಮ್ಮೆ ಪುಸ್ತಕವನ್ನು ಓದುತ್ತಿದ್ದನು. ಒಮ್ಮೆ ಓದಿದೆಡೆಯಲ್ಲಿ ಪುಟಗಳ ನಡುವೆ ಬೆರಳಿಟ್ಟು ಅ ಹಿರಿಕಲ್ಲ ಮೋರೆಯನ್ನು ಪ್ರೀತಿಯಿಂದ ನೋಡುತ್ತಿದ್ದನು.

"ನಮಸ್ಕಾರ ಸ್ವಾಮೀ" ಕವಿಯು ಅಂದ "ಒಬ್ಬ ಪ್ರವಾಸಿಗನಿಗೆ ರಾತ್ರಿಯ ಮಟ್ಟಿಗೆ ತಂಗಲು ಕೊಡುವಿರಾ?"

“ಓ ಮನಃಪೂರ್ವಕವಾಗಿ” ಅರ್ನೆಸ್ಟ ಅಂದು ನಕ್ಕನು. “ನನಗೆ ಅನಿಸುತ್ತದೆ. ಆ ಹಿರಿಕಲ್ಲ ಮೋರೆಯ ಒಬ್ಬ ಆಗಂತುಕನ ಮೋರೆಯನ್ನು ಇಷ್ಟು ಸತ್ಕಾರ ಪೂರ್ಣವಾಗಿ ಈ ಮೊದಲು ನೋಡಿದ್ದಿಲ್ಲ.”

ಕವಿ ಅವನೊಡನೆ ಆ ಕಾಲ್ಮಣೆಯ ಮೇಲೆ ಕೂತನು. ಅವನೂ ಅರ್ನೆಸ್ಟನೂ ಕೂಡಿ ಮಾಡನಾಡತೂಡಗಿದರು.

ಅತ್ಯಂತ ಬುದ್ಧಿವಂತ ವಾಕ್ಪಟುಗಳಾದ ಮಾತಿನ ಮಲ್ಲರೊಂದಿಗೆ ಕವಿ ಸಂಭಾಷಣೆ ನಡೆಸಿದ್ದುಂಟು. ಆದರೆ ಅರ್ನೆಸ್ಟನಂಥವನೊಂದಿಗೆ ಸಂಭಾಷಿಸಿರಲಿಲ್ಲ, ಇವನ ವಿಚಾರಗಳೂ ಭಾವನೆಗಳೂ ಅಷ್ಟು ಸ್ವಾಭಾವಿಕ ಸ್ವಚ್ಛಂದತೆಯಿಂದ ಉಕ್ಕಿ ಹರಿಯುತ್ತಿದ್ದವು. ತನ್ನ ಸರಳ ಮಾತಿನಿಂದ ಇವನು ಬರಯ ಹಲವು ಸಲ ಹೇಳಿದ್ದಂತೆ ದೇವತೆಗಳು ಇವನೊಂದಿಗೆ ಹೊಲದಲ್ಲಿ ಜೊತೆಯಾಗಿ ದುಡಿದಿರಬೇಕು. ಇವನೊಡನೆ ಮನೆಯ ಅಗ್ಗಿಷ್ಟಿಕೆಯ ಪಕ್ಕದಲ್ಲಿ ಕೂತಿರಬೇಕು. ಅವನೊಡನೆ ಗೆಳೆಯರೊಂದಿಗೆ ಗೆಳೆಯನಂತೆ ಒಡನಾಡಿ ವಾಸಿಸಿರಬೇಕು. ಅವರ ವಿಚಾರಗಳ ಮಹೋನ್ನತಿಯನ್ನು ಹೀರಿಕೊಂಡು ತನ್ನ ಬಳಕೆಯ ಸರಳವೂ ಮಧುರವೂ ನಮ್ರವೂ ಆದ ಮಾತುಗಳಲ್ಲಿ ತುಂಬಿರಬೇಕು. ಕವಿಗೆ ಹಾಗೆ ತೋರಿತು. ಇತ್ತ ಅರ್ನೆಸ್ಟನೋ ಆ ಕವಿ ತನ್ನ ಮನಸ್ಸಿನಿಂದ ಹೊರಹೊಮ್ಮಿಸುವ ಸಜೀವ ಉತ್ಪ್ರೇಕ್ಷೆಗಳಿಂದ ಸ್ಫೂರ್ತಿಯನ್ನೂ ಕ್ಷೋಭೆಯನ್ನೂ ಪಡೆದನು. ಆ ವಿವಿಧ ಜೀವಂತ ಭಾವನಾ ತರಂಗಗಳು ಅವನ ಗುಡಿಸಲನ್ನೇ ಆವರಿಸಿ ಆನಂದವನ್ನುಂಟುಮಾಡಿದವು. ಅವರಿಬ್ಬರಿಗೆ ಸಹಾನುಭೂತಿಗಳು ಒಬ್ಬೊಬ್ಬರೇ ಒಂಟಿಯಾಗಿ ಸಾಧಿಸಲು ಸಾಧ್ಯವಾಗದ ಹೆಚ್ಚಿನ ಗಹನವಾದ ಭಾವವನ್ನು ಇಬ್ಬರಿಗೂ ಬೋಧಿಸಿದವು. ಅವರ ಮನಸ್ಸುಗಳು ಒಂದೇ ಶ್ರುತಿಗೆ ಮಿಡಿದವು. ಅವರಲ್ಲಿ ಯಾರೊಬ್ಬನೂ ಬೇರೆಯಾಗಿ ತನ್ನದೇ ಎಂದು ಅನ್ನಲಾರದಂಥ ಆನಂದ ಗೀತವನ್ನು ನುಡಿಸಿದವು. ಆ ಗೀತದಲ್ಲಿ ಯಾರೊಬ್ಬನೂ ಬೇರೆಯಾಗಿ ತನ್ನದೇ ಎಂದು ಅನ್ನಲಾರದಂಥ ಆನಂದ ಗೀತವನ್ನು ನುಡಿಸಿದವು. ಆ ಗೀತದಲ್ಲಿ ಯಾರೊಬ್ಬನೂ ತನ್ನ

ಅಂಶವೇನೆಂದು, ಎಷ್ಟೆಂದು ವಿಂಗಡಿಸುವದು ಶಕ್ಯವಿದ್ದಿಲ್ಲ. ಅವರಿಬ್ಬರೂ ಕೈ ಕೈ ಹಿಡಿದು ಬಹು ದೂರ ಅವರಿಗೆ ಅಸ್ಪಷ್ಟವಾದ ವಿಚಾರಗಳ ಉನ್ನತ ಮಂಟಪದಲ್ಲಿ ಮುನ್ನಡೆದರು. ಅಲ್ಲಿಗೆ ಈ ಮೊದಲು ಅವರು ಕಾಲಿಟ್ಟಿದ್ದೇ ಇಲ್ಲ. ಈಗ ಆ ಸುಂದರ ಮಂಟಪದಿಂದ ಹಿಂತಿರುಗಲು ಇಬ್ಬರಿಗೂ ಮನಸ್ಸಿದ್ದಿಲ್ಲ.

ಆ ಕವಿಯ ಮಾತಿಗೆ ಕಿವಿಗೊಡುತ್ತಿರುವಾಗ ಹಿರಿಕಲ್ಲ ಮೋರೆಯ ಮುಂದೆ ಬಗ್ಗಿ ಕೇಳುತ್ತಿರುವಂತೆ ಅರ್ನೆಸ್ಟನಿಗೆ ಅನಿಸಿತು. ಅವನು ಕವಿಯ ಮಿನುಗುವ ಕಣ್ಣುಗಳನ್ನು ದಿಟ್ಟಿಸಿದನು.

“ಅನಾಯಾಸವಾಗಿ ವಿಚಿತ್ರ ಪ್ರತಿಭಾನ್ವಿತ ಮಿತ್ರನೇ ನೀನು ಯಾರು?” ಅರ್ನೆಸ್ಟ ಕೇಳಿದ.

ಅರ್ನೆಸ್ಟ ಓದುತ್ತಿದ್ದ ಪುಸ್ತಕದ ಮೇಲೆ ಕವಿಯು ಬೆರಳುಗಳನ್ನು ಇಟ್ಟ, “ನೀವು ಈ ಕವಿತೆಗಳನ್ನು ಓದುವಿರಿ ಅಂದಮೇಲೆ ನಿಮಗೆ ನಾನು ಗೊತ್ತು ಏಕೆಂದರೆ ನಾನು ಅವುಗಳನ್ನು ಬರೆದವನು.”

ಮತ್ತೊಮ್ಮೆ ಮತ್ತು ಹೆಚ್ಚು ತನ್ಮಯನಾಗಿ ಅರ್ನೆಸ್ಟನು ಕವಿಯ ಮುಖಚರ್ಯೆಯನ್ನು ಪರೀಕ್ಷಿಸಿದನು. ಅನಂತರ ಆ ಮಹಾಶಿಲಾ ವಿಗ್ರಹದತ್ತ ಹೊರಳಿದನು ಮತ್ತೆ ಅನಿಶ್ಚಿತ ದೃಷ್ಟಿಯಿಂದ ತನ್ನ ಅತಿಥಿಯ ಕಡೆಗೆ. ಆದರೆ ಅವನ ಮುಖಚರ್ಯೆಯು ಕುಗ್ಗಿತು. ಅವನು ತಲೆಯಲ್ಲಾಡಿಸುತ್ತ ನಿಟ್ಟುಸಿರು ಬಿಟ್ಟನು.

“ನೀವೇಕೆ ಖಿನ್ನರಾಗಿದ್ದೀರಿ?” ಕವಿಯು ಪ್ರಶ್ನಿಸಿದನು.

“ಏಕೆಂದರೆ” ಅರ್ನೆಸ್ಟ ಉತ್ತರಿಸಿದನು: “ನನ್ನ ಜೀವಮಾನವೆಲ್ಲ ಒಂದು ಭವಿಷ್ಯವಾಣಿಯ ಸತ್ಯತೆಯ ಬಗ್ಗೆ ನಾನು ನಿರೀಕ್ಷಿಸುತ್ತಿದ್ದೇನೆ. ಈ ಕವನಗಳನ್ನು ಓದಿದಾಗ ಅದು ನಿಮ್ಮಲ್ಲಿ ಪೂರ್ತಿಯಾಗಬಹುದೆಂದು ಆಶಿಸಿದ್ದೆ.”

“ಹೇಗೋ ನೀವು ಹಿರಿಕಲ್ಲ ಮೋರೆಯ ಸರಿಹೋಲಿಕೆ ನನ್ನಲ್ಲಿ ಕಾಣಲು ಬಯಸಿದ್ದೀರಾ?” ಕವಿ ನಸುನಗುತ್ತ ಉತ್ತರವಿತ್ತ. “ಅದೇ ನಿಮಗೆ ನಿರಾಶೆಯಾಯಿತು. ಹಿಂದೆ ಗ್ಯಾದರಗೋಲ್ಡ ಮುದಿ ಬ್ಲಡ್ ಎಂಡ ಥಂಡರ ಮತ್ತು ವೃದ್ಧ ಶಿಲಾಮುಖ ಸಾಹೇಬರುಗಳ ವಿಷಯದಲ್ಲಿ ಆದಂತೆ ಆ ಪರಿ ಅರ್ನೆಸ್ಟ ಇದು ನನ್ನ ದೈವ ಈ ಹೆಸರಾಂತ ಹೆಸರುಗಳ ಸಾಲಿನಲ್ಲಿಯೇ ನನ್ನ ಹೆಸರನ್ನು ಸೇರಿಸಿ ನಿಮ್ಮ ನಿರಾಶೆಯನ್ನು ಬರೆದಿಡಬೇಕಾಗಿ ಬಂದಿದೆ. ಏಕೆಂದರೆ ಇದನ್ನು ನಾನು ನೊಂದುಕೊಂಡು ನಾಚಿಕೆಪಟ್ಟು ಹೇಳುತ್ತಿದ್ದೇನೆ. ಅರ್ನೆಸ್ಟ ಆ ಅಲ್ಲಿಯ ರಾಜಗಂಭೀರ ಸುಪ್ರಸನ್ನ ವಿಗ್ರಹ ನನ್ನ ದ್ಯೋತಕವಾಗುವಷ್ಟು ಪಾತ್ರತೆ ನನಗಿಲ್ಲ.”

“ಅದೇಕೋ?” ಅರ್ನಸ್ಟ ಕೇಳಿದ ಕವಿಯ ಕವನ ಸಂಗ್ರಹದ ಕಡೆಗೆ ಬೆರಳು ತೋರಿ “ಆ ಕವನಗಳ ಭಾವಸಂಪತ್ತು ದಿವ್ಯವಾದುದಲ್ಲವೇ?”

“ಅವುಗಳಲ್ಲಿ ದಿವ್ಯತೆಯ ಒಂದು ಅಂಶ ಒಂದು ಎಳೆಯಿದೆ.” ಕವಿ ಹೇಳಿದ: “ಸ್ವರ್ಗೀಯ ಗೀತದ ಒಂದು ಸುದೂರ ಪ್ರತಿಧ್ವನಿಯನ್ನು ಅದರಲ್ಲಿ ನೀವು ಕೇಳಬಹುದು. ಆದರೆ ನನ್ನ ಬಾಳು ಪ್ರಿಯ ಅರ್ನಸ್ಟ ನನ್ನ ಭಾವಗಳೊಂದಿಗೆ ಏಕರೂಪವಾಗಿಲ್ಲ. ನನಗೆ ದಿವ್ಯವಾದ ಕನಸುಗಳು ಬಿದ್ದಿವೆ. ಆದರೆ ಅವು ಕೇವಲ ಕನಸುಗಳಾಗಿಯೇ ಉಳಿದಿವೆ. ನಾನು ತೀರ ದರಿದ್ರ ಹೌಗೂ ಕ್ಷುದ್ರವಾದ ವಾಸ್ತವ ಪ್ರಪಂಚದಲ್ಲಿ ಬಾಳಿದ್ದೇನೆ. ನನ್ನ ಕೃತಿಗಳು ನಿಸರ್ಗ ಹಾಗೂ ಮಾನವ ಜೀವನದಲ್ಲಿಯ ಹಿರಿಯ ಬೆಡಗು ಚಲುವು ಹೆಚ್ಚು ಸ್ಫುಟವಾಗಿ ಪ್ರಕಟಿಸಿವೆಯೆಂದು ಹೇಳಲಾಗುತ್ತಿದೆ. ಆದರೆ ಕೆಲವೊಮ್ಮೆ ಈ ಗುಣಗಳಲ್ಲಿಯ ನನ್ನ ಶ್ರದ್ಧೆ ಕುಂದುವದುಂಟು. ಅಂದಮೇಲೆ ಶುಭ ಸತ್ಯಗಳ ಶೋದಕನೇ ಆ ದಿವ್ಯ ಪ್ರತಿಮೆಯಲ್ಲಿ ನನ್ನ ಪ್ರತಿಬಿಂಬವನ್ನು ನೀನು ಅರಸುವುದಾದರೂ ಏಕೆ?”

ಕವಿ ಉದ್ವಿಗ್ನನಾಗಿ ಆಡಿದ. ಅವನ ಕಣ್ಣು ಹನಿಗಳಿಂದ ಮಂಜುಗಟ್ಟಿದ್ದವು. ಅರ್ನೆಸ್ಟನ ಕಣ್ಣುಗಳೂ ಹಾಗೇ ಆದವು.

ಸೂರ್ಯಾಸ್ತ ಸಮಯಕ್ಕೆ ವಾಡಿಕೆಯಂತೆ ಅರ್ನೆಸ್ಟ ನೆರೆಕೆರೆಯ ಜನರ ನೆರವಿಯನ್ನು ಉದ್ದೇಶಿಸಿ ಭಾಷಣ ಮಾಡುವವನಿದ್ದನು. ಕವಿಯೂ ಅವನೂ ತೋಳಿಗೆ ತೋಳು ಸಿಕ್ಕಿಸಿಕೊಂಡು ಮಾತನಾಡುತ್ತ ಆ ಸ್ಥಳಕ್ಕೆ ಮುಂದರಿದರು. ಅದೊಂದು ದೊಡ್ಡ ಗುಡ್ಡದೊರೆಯ ಮಾಲೆ ಬೆನ್ನಿಗೆ ಕಡಿದಾದ ನರೆಗಲ್ಲ ಬಂಡೆ. ಅದರ ಉರುಟು ಮೋರೆಯನ್ನು ಹಸಿರು ತೆರೆಯಂತೆ ಬಳಸಿ ಹಬ್ಬಿದ ಸೊಗಸಾದ ಬಳ್ಳಿಗಳ ಹಂದರ ಮುಚ್ಚಿತ್ತು.

ನೆಲದಿಂದ ಕೊಂಚ ಎತ್ತರಕ್ಕೆ ಹಚ್ಚ ಹಸಿರ ಚೌಕಟ್ಟಿನಲ್ಲಿ ಒಬ್ಬ ಆಳು ಒಳಗೆ ನಿಲ್ಲುವಷ್ಟು ಅವಕಾಶವುಳ್ಳ ಕಿಂಡಿಯಿತ್ತು ಅಲ್ಲಿ ಕಳಕಳಿಯ ನಿಚಾರ ಹಾಗೂ ಕಳಕಳದ ಭಾವನೆಗಳ ಆವೇಶಕ್ಕೆ ಒಪ್ಪುವ ಸಹಜ ಹಾವಭಾವಗಳಿಗೆ ಸಾಕಷ್ಟು ಅವಕಾಶವಿತ್ತು. ಪ್ರಾಕೃತಿಕ ವ್ಯಾಸಪೀಠವನ್ನು ಅರ್ನೆಸ್ಟ ಏರಿನಿಂತನು ಮತ್ತು ನನ್ನ ಶ್ರೋತೃ ಸಮುದಾಯದ ಮೇಲೆ ಸಲಿಗೆಯ ದಯಾದೃಷ್ಟಿಯನ್ನು ಬೀರಿದನು. ತಮತಮಗೆ ಸರಿಕಂಡಂತೆ ನಿಂತು ಕೂತು ಕಾಡಿನ ಗಾಂಭೀರ್ಯದೊಂದಿಗೆ ತನ್ನ ಸೌಮ್ಯವಾದ ಉಲ್ಲಾಸವನ್ನು ಬೆರೆಸುತ್ತ ಸಂಜೆಯ ಬಿಸಿಲು ಅವರ ಮೇಲೆ ವಕ್ರವಾಗಿ ಚೆಲ್ಲಿತ್ತು. ಅವನದೊಳಗೆ ಹೊಂಬಣ್ಣದ ಕಿರಣಗಳಿಗೆ ಪ್ರವೇಶಿಸಲು ಪ್ರಯಾಸವಾಗುತ್ತಿದ್ದಿಲ್ಲ. ಇನ್ನೊಂದು ನಿಟ್ಟಿನಲ್ಲಿ ಆ ಹಿರಿಕಲ್ಲ ಮೋರೆ ಕಂಡುಬರುತ್ತಿತ್ತು. ಅದರ ಮುಖ ಮಂಡಲದಲ್ಲಿ ಅದೇ ಸೌಮ್ಯ ಉಲ್ಹಾಸ ಅದೇ ಗಾಂಭೀರ್ಯ ತೋರುತ್ತಿತ್ತು.

ತನ್ನ ಹೃದಯದಲ್ಲಿದ್ದುದ್ದನ್ನಲ್ಲ ತೋರಿ ಆ ಮಂದಿಯ ಮುಂದಿಡುತ್ತ ಅರ್ನೆಸ್ಟ ಮಾತನಾಡಲು ಆರಂಭಿಸಿದ. ಅವನ ಮಾತುಗಳಲ್ಲಿ ಕೆಚ್ಚು ತುಂಬಿತ್ತು. ಏಕೆಂದರೆ ಅದು ಅವನ ಎಚಾರಗಳೊಂದಿಗೆ ಏಕರೂಪವಾಗಿದ್ದವು. ಅವನ ವಿಚಾರಗಳಲ್ಲಿ ವಾಸ್ತವಿಕತೆಯೂ ಗಹನತೆಯೂ ಇದ್ದವು. ಏಕೆಂದರೆ ಅವನ ಬದುಕಿನ ಬಾಳಿನೊಂದಿಗೆ ಅವು ಸಮರಸವಾಗಿದ್ದವು. ಈ ಪ್ರವಚನಕಾರನು ಉಸಿರುವದು ಬರೇ ಉಸಿರಾಗಿದ್ದಿಲ್ಲ. ಅವು ಬಾಳಿನ ಆಳದ ಮಾತುಗಳಾಗಿದ್ದವು. ಏಕೆಂದರೆ ಒಳಿತಿನ ಕೃತಿಗಳ ಬಾಳು

ಶುಚಿಯಾದ ಪ್ರೀತಿ ಇವೆರಡೂ ಕರಗಿಸಿ ಎರಕ ಹೊಯ್ದಂತಿದ್ದವು. ಆ ಅನುಭವಾಮೃತದ ಚಷಕ ಶುದ್ಧ ಸಮೃದ್ಧಿ ಅಣಿಮುತ್ತುಗಳು ಕರಗಿ ಬೆರೆತಿದ್ದವು. ಅವನ್ನು ಕೇಳುತ್ತಿದ್ದಂತೆ ಕವಿಗೆ ಅನಿಸಿತು ತಾನು ಈವರೆಗೆ ಬರೆದ ಕಾವ್ಯಗಳಿಗಿಂತ ಅರ್ನೆಸ್ಟನ ಚರಿತ್ರವೂ ಚಾರಿತ್ರ್ಯೆಯೂ ಹೆಚ್ಚಿನ ಹಿರಿಮೆಯ ಕಾವ್ಯಧಾರೆಯಾಗಿದೆ. ಅವನ ಕಣ್ಣುಗಳು ಕಂಬನಿಗಳಿಂದ ತೊಳಗಿದವು. ಅವನು ತನ್ನೊಳಗೆ ಅಂದುಕೊಂಡನು. ಈ ಶಾಂತ ಸೌಮ್ಯ ಸ್ಥಿತಿ ಪ್ರಜ್ಞ ಚರ್ಯೆಗಿಂತಲೂ ಹೆಚ್ಚಿನ ಅರ್ಹತೆಯ ಮುಖಮುದ್ರೆ ಯಾವ ಪ್ರವಾದಿಯದಾಗಲೀ ಋಷಿಯದಾಗಲೀ ಇರಲಿಲ್ಲ. ಅದರ ಸುತ್ತಲೂ ಬಿಳಿಗೂದಲಿನ ಶುಭ್ರ ಶೋಭೆಯು ಚಲ್ಲುವರಿದಿತ್ತು. ದೂರದಲ್ಲಿ ಅದರ ಆ ನಿಚ್ಚಳವಾಗಿ ತೋರುವಂತೆ ಅಸ್ತಮಿಸುವ ಸೂರ್ಯನ ಬಂಗಾರದ ಬೆಳಕಿನಲ್ಲಿ ಆ ಎತ್ತರಕ್ಕೆ ಘನವಾದ ಮಂಜುಬಾಗಿಲುಗಳು ಸುತ್ತುವರಿದ ಅರ್ನೆಸ್ಟನ ಹಣೆಯ ಸುತ್ತಲಿನ ಬಿಳಿಗೂದಲುಗಳಂತೆ ಆ ಹಿರಿಕಲ್ಲು ಮೋರೆ ಕಾಣಿಸಿತು. ಅದರ ಭವ್ಯ ಮಾಂಗಲ್ಯದ ದೃಷ್ಟಿಯು ವಿಶ್ವವನ್ನೇ ಆಲಂಗಿಸಿದಂತೆ ಕಂಡಿತು.

ಅದೇ ಗಳಿಗೆಗೆ ತಾನು ಆಡಿ ತೋರಿಸಲು ತೊಡಗಿದ ಒಂದು ವಿಚಾರಕ್ಕೆ ಅನುಗುಣವಾಗಿ ಅರ್ನೆಸ್ಟನ ಮುಖವು ಭಾವಾವಿಷ್ಕಾರದ ಭವ್ಯ ಶೋಭೆಯನ್ನು ತಾಳಿತು. ಅದು ಇಷ್ಟೊಂದು ಮಂಗಲಮಯವಾಗಿ ಕಂಡಿತು. ಕವಿಯು ಹತ್ತಿಕ್ಕಲಾರದ ಹರ್ಷ ಹುಮ್ಮಸದಲ್ಲಿ ತನ್ನ ತೋಳುಗಳನ್ನು ಮೇಲಕ್ಕೆತ್ತಿ ಕೂಗಿದ "ನೋಡಿರಿ ನೋಡಿರಿ, ಅರ್ನೆಸ್ಸನೇ ಆ ಹಿರಿಕಲ್ಲ ಮೋರೆಯನ್ನು ಹೋಲುತ್ತಿದ್ದಾನೆ."

ಆಗ ಎಲ್ಲ ಜನರೂ ನೋಡಿದರು ಆ ಅಂತರ ದೃಷ್ಟಿಯ ಕವಿಯು ಆಡಿದ್ದು ಸತ್ಯವೆಂದು ಕಂಡುಕೊಂಡರು. ಭವಿಷ್ಯವಾಣಿ ನಿಜವಾಯಿತು. ಆದರೆ ಅರ್ನೆಸ್ಟ? ಆತ ಹೇಳತಕ್ಕದ್ದನ್ನೆಲ್ಲ ಹೇಳಿ ಮುಗಿಸಿ ಆ ಕವಿಯ ಭುಜವನ್ನು ಹಿಡಿದುಕೊಂಡು ಮನೆಯ ಕಡೆಗೆ ನಡೆದನು. ತನಗಿಂತಲೂ ಜಾಣನಾದ ಒಳಿತಾದ ವ್ಯಕ್ತಿಯೊಬ್ಬ ಒಂದಲ್ಲ ಒಂದು ದಿನ ಬಂದಾನು ಮತ್ತು ಮಹಾಶಿಲಾ ಮುಖದ ಹೋಲುವಿಕೆಯನ್ನು ಕಂಡೇನು ಎಂದು ಇನ್ನೂ ಆತ ಹಂಬಲಿಸುತ್ತಲೇ ಇದ್ದನು.

# ವಿಲಿಯಂ ಫಾಕನರ

ಈತನು ೧೮೯೭ ಸೆಪ್ಟೆಂಬರ ೨೫ನೇ ದಿನ ಮಿಸಿಸಿಪಿ ಪರಗಣೆಯ ನ್ಯೂ ಆಲ್ಬನಿ ಎಂಬಲ್ಲ ಹುಟ್ಟಿದನು. ಅವನು ಹುಟ್ಟಿದ ಊರು ಮಿಸಿಸಿಪಿ ವಿಶ್ವವಿದ್ಯಾಲಯದ ಪೀಠವಾದ ಆಕ್ಸಫರ್ಡಕ್ಕೆ ಸಮೀಪ. ಆ ಪಟ್ಟಣ ಆತನಿಗೆ ಬಾಲ್ಯದಿಂದಲೂ ಮನೆಯಾಯಿತು. ಆದರೆ ತೀರ ತಾರುಣ್ಯದಲ್ಲಿಯೇ ಆತ ಆ ವಿಶ್ವವಿದ್ಯಾಲಯವನ್ನು ಬಿಟ್ಟು 'ಕಾನೇಡಿಯನ್ ಫ್ಲಾಯಿಂಗ ಕೋರ' ಎಂಬ ವೈಮಾನಿಕ ದಲವನ್ನು ಸೇರಿದನು. ಒಂದು ವಿಮಾನಾಪಘಾತದಲ್ಲಿ ಗಾಯಗೊಂಡು ಆತ ಸಂಯುಕ್ತ ಸಂಸ್ಥಾನಗಳಿಗೆ (ಅಮೆರಿಕಾಗೆ) ಮರಳಿದನು; ನ್ಯೂ ಓರ್ಲಿಯನ್ಸಕ್ಕೆ ಹೋದನು; ಶರವುಡ್ ಎಂಡರ್ಸನ್‌ನ ಜತೆಗೆ ಒಂದು ಕೋಣೆ ಬಾಡಿಗೆಗೆ ಹಿಡಿದನು. ವೃತ್ತಪತ್ರಿಕೆಗಳಿಗಾಗಿ ಕೆಲವು ಲೇಖನಗಳನ್ನು ಮಾಡಿ ಬರಹಗಾರನಾಗಲು ತಳವೂರಿದನು.

ಮುಂದೆ ನ್ಯೂಯಾರ್ಕಿನಲ್ಲಿಯೂ ಯೂರೋಪದಲ್ಲಿಯೂ ಸಂಚಾರ ಮಾಡಿ ಬಂದ ಮೇಲೆ ಆತ ಆಕ್ಸಫರ್ಡದಲ್ಲಿ ಒಂದು ಚಾಕರಿ ಹಿಡಿದನು. ಒಂದು ವಿದ್ಯುತ್ ಶಕ್ತಿ ಕೇಂದ್ರದಲ್ಲಿ ರಾತ್ರಿಯ ವೇಳೆಗೆ ಎಂಜಿನ್‌ನಲ್ಲಿ ಕಲ್ಲಿದ್ದಲು ಎಸೆಯುವ ಚಾಕರಿ. ಇಲ್ಲಿ ಆತ ತನ್ನ ಅತ್ಯುತ್ತಮ ಕಾದಂಬರಿಗಳನ್ನು ಬರೆದನು. ಮತ್ತು ೧೯೩೦ರ ನಂತರ ತನ್ನ ಲೇಖನದಿಂದಲೆ ಆತ ಸ್ವತಂತ್ರ ಜೀವನ ಸಾಗಿಸುವದು ಶಕ್ಯವಾಯಿತು. ೧೯೩೯ರ ಓ ಹೆನ್ರಿ ಸ್ಮಾರಕ ಪಾರಿತೋಷಕ ಸ್ಪರ್ಧೆಯಲ್ಲಿ ಆತನು ಪ್ರಥಮ ಪಾರಿತೋಷಕವನ್ನು ಗೆದ್ದನು. ಮತ್ತು ಸಾಹಿತ್ಯ ಕಲೆಗಳ ರಾಷ್ಟ್ರೀಯ ಸಂಘಕ್ಕೆ ಆರಿಸಲ್ಪಟ್ಟನು. ೧೯೪೯ರಲ್ಲಿ ಸಾಹಿತ್ಯಕ್ಕೆ ಮೀಸಲಾಗಿಟ್ಟ ನೊಬೆಲ್ ಪಾರಿತೋಷಕ ಹೊಸ ಅಮೆರಿಕೆಯ ಕಾದಂಬರಿ ವಾಙ್ಮಯಕ್ಕೆ ಆತ ಸಲ್ಲಿಸಿದ ಸಾಮರ್ಥ್ಯಶಾಲಿಯೂ ಕಲಾತ್ಮಕವಾಗಿ ಸ್ವಾತಂತ್ರ್ಯಯುಕ್ತವೂ ಆದ ಕಾಣಿಕೆಯಾಗಿ ಅವನಿಗೆ ಕೊಡಲಾಯಿತು. ಇದರಿಂದ ಅವನ ಕೃತಿಗಳ ಮೇಲೆ ಅಂತರ್‌ರಾಷ್ಟ್ರೀಯ ಲಕ್ಷ್ಯ ಕೇಂದ್ರೀಕೃತವಾಯಿತು.

# ಆ ಕರಡಿ

ಅವನಿಗೆ ಆಗ ಹತ್ತು ವರ್ಷ. ಆದರೆ ಅದು ಆ ಮೊದಲಿಗೇ ಎಂದೋ ಆರಂಭವಾಗಿತ್ತು. ತನ್ನ ವಯಸ್ಸನ್ನು ಆತ, ಎರಡು ಅಂಕಿಗಳಲ್ಲಿ ಬರೆಯಲು ಕಲಿಯುವದಕ್ಕೂ ಎಷ್ಟೋ ಹಿಂದೆ ಅವನ ತಂದೆ ಮೇಜರ ಡಿ ಸ್ಪೇನ್ ಹಾಗೂ ಹಳೆಯ ಸೇನಾಪತಿ ಕಾಂಪ್ಸೆನ್ ಇತರ ಸಂಗಡಿಗರೊಂದಿಗೆ ಪ್ರತಿ ನವಂಬರ್‌ದಲ್ಲಿ ಮತ್ತೆ ಜೂನದಲ್ಲಿಯೂ ಎರಡೆರಡು ವಾರ ಆ ಶಿಬಿರದಲ್ಲಿ ಕಳೆಯುತ್ತಿದ್ದರು. ಆ ಶಿಬಿರವನ್ನು ಆತ ನೋಡುವುದಕ್ಕೂ ಬಹಳ ಹಿಂದೆ ಕಣ್ಣಾರೆ ಕಾಣದೆಯೇ ಆತ ಪಿತ್ರಾರ್ಜಿತ ಸೊತ್ತಿನಂತೆ ಪಡೆದಿದ್ದನು ಆ ಪ್ರಚಂಡ ಕರಡಿಯನ್ನು, ಅದರ ಒಂದು ಪಾದ ಪಂಜರದ ಅಡ್ಡಣಿಗೆಯಲ್ಲಿ ಸಿಲುಕಿ ಜಜ್ಜಿಹೋಗಿತ್ತು ಅದರೂ ಆ ಪ್ರಾಣಿ ಸುತ್ತಲಿನ ನೂರು ಮೈಲು ವಿಸ್ತೀರ್ಣದಲ್ಲಿ ಒಬ್ಬ ಗಣ್ಯ ವ್ಯಕ್ತಿಯಂತೆ ಪ್ರಸಿದ್ಧಿ ಪಡೆದಿತ್ತು.

ಅದರ ವಿಚಾರವಾಗಿ ಆತ ವರ್ಷಗಟ್ಟಲೆ ಕೇಳಿದ್ದ ಕಾಳ ಕಣಜ ಲೂಟಿ ಮಾಡಿದ್ದ, ಕೊಬ್ಬಿದ ಹಂದಿ ಎಳೆಯ ಕರುಗಳನ್ನೂ ಎತ್ತಿಕೊಂಡೊಯ್ದು ಅಡವಿಯೊಳಗೆ ಹೋಗಿ ತಿಂದದ್ದು, ಪಂಜರ ಒಡ್ಡುಬಲೆ ಅಡ್ಡಣಿಗೆಗಳನ್ನು ಬುಡಮೇಲೆ ಮಾಡಿ ಒಗೆದಿದ್ದು, ಬೇಟೆಯ ನಾಯಿಗಳನ್ನೆ ಬೇಟೆಯಾಡಿ ಕೊಂದು ಉರುಳಿಸಿದ್ದು, ಸೆರೆ ಕೋವಿಗಳೂ ರೈಫಲ್ಲುಗಳೂ ಬಾಯಿಸೊಂಕಿಗೆ ನಳಿಗೆ ಗುರಿಯಿಟ್ಟು ಗುಂಡೆಸೆದರೂ ಉಡಾಳ ಹುಡುಗನೊಬ್ಬ ಒಂದು ಕೊಳವೆಯೊಳಗಿಂದ ಅವರೆಕಾಳುಗಳನ್ನು ಹೊಡೆದದ್ದಕ್ಕೂ ಹೆಚ್ಚಿನ ಪರಿಣಾಮವೇನೂ ಆಗದಿದ್ದದ್ದು, ಆತ ಹುಟ್ಟುವ ಮೊದಲಿನಿಂದಲೇ ಆ ಕರಡಿ ವಿಧ್ವಂಸ ವಿನಾಶಗಳ ಒಂದು ಗಿರಿಯಗಲ ದಾರಿಯೇ ತೆರೆದಿದ್ದ, ಅದರೊಳಗಿಂದ ವೇಗವಾಗಿ ಅಲ್ಲದಿದ್ದರೂ ದುರ್ದಮ್ಯವಾದ ನಿರ್ದಯವಾದ ಹೇತು ಪುರಸ್ಸರತೆಯಲ್ಲಿ ಒಂದು ಉಗಿಬಂಡಿಯನ್ನೆ ಹೋಲುತ್ತ ಆ ಜೋಲುದೊಗಲ ಪ್ರಚಂಡಾಕೃತಿ ಪಶುವು

ಧಾವಿಸುತ್ತಿದ್ದುದ್ದು ಇವೆಲ್ಲದರ ಆಖ್ಯಾಯಿಕೆಗಳನ್ನೂ ಉದ್ದುದ್ದ ದಂತಕಥೆಗಳನ್ನೂ ಆತ ವರ್ಷಗಟ್ಟಲೆ ಕೇಳಿದ್ದ.

ಅದನ್ನು ನೋಡುವ ಮುಂಚೆಯೇ ಅವನ ತಿಳುವಳಿಕೆಯಲ್ಲಿ ಅದು ಓಡಾಡುತ್ತಿತ್ತು. ಇನ್ನೂ ಕೊಡಲಿಯೇಟು ಬೀಳದ ನಿಬಿಡ ಅಡವಿಗಳನ್ನು ಆತ ನೋಡುವದರ ಮುಂಚೆಯೇ ಆ ಕರಡಿ ಅವನ ಕನಸುಗಳಲ್ಲಿ ಇಣಕುಹಾಕಿತ್ತು. ಎದ್ದು ಬೃಹದಾಕಾರ ತಾಳಿತ್ತು. ಆ ದಟ್ಟಡವಿಗಳಲ್ಲ ಈ ಜೋಲು ಮೈಯ ಪ್ರಚಂಡ ಕೆಂಗಣ್ಣಿನ ದುಷ್ಟವಲ್ಲದಿದ್ದರೂ ಮಹಾಕಾಯವಾಗಿ ಕಾಣುವ ಕಾಡುಪ್ರಾಣಿ ತನ್ನ ಹೆಜ್ಜೆಯ ಗುರುತುಗಳನ್ನೂ ನಟ್ಟಿತ್ತು. ಆ ಮಹಾಕಾಯ ಪ್ರಾಣಿ ಅದನ್ನು ಬೊಗಳಿ ಬೆದರಿಸ ಬಯಸುವ ನಾಯಿಗಳಿಗೂ ಸವಾರಿ ಮಾಡಿ ಬೆನ್ನಟ್ಟಿ ದಣಿಸಿ ಕೆಡುಹಲು ಹವಣಿಸುವ ಕುದುರೆಗಳಿಗೂ ಸಾಯಹೊಡೆಯಲು ಕಿಡಿಮಳೆಗೆರೆಯುವ ಬೇಟೆಗಾರ ಮಂದಿ ಹಾಗೂ ಅವರ ಮದ್ದುಗುಂಡುಗಳಿಗೂ ಅದರ ಸಂಚಾರಗಳಿಗೆ ಸಂಕೋಚನವಾಗಿರುವ ಆ ಸೀಮೆಗೂ ಭಾರಿಯಾಗಿತ್ತು. ಬಲು ಭಾರಿಯಾಗಿತ್ತು ಅದರ ಮೇಲೆ ಕಣ್ಣಿಡುವ ಮುಂಚೆಯೇ ಅವನು ಮಕ್ಕಳು ಸಮಗ್ರ ದೃಷ್ಟಿಯ ಊಹನೆಯಿಂದಾಗಿ ಆ ಪಶುವನ್ನು ಇಡಿಯಾಗಿ ನೋಡಿಕೊಂಡಂತೆ ಅನಿಸಿತು. ಆ ದೈವಹತಕ ದಟ್ಟಡವಿ-ಅಡವಿಯೆಂತಲೇ ಅದಕ್ಕೆ ಹೆದರುವ ಮಂದಿಯ ಕತ್ತಿ ಕೊಡಲಿಗಳಿಂದ ಅದರ ಅಂಚುಗಳು ಅನವರತವೂ ಅಲ್ಪಸ್ವಲ್ಪವೇ ಕೊರೆದು ಹೋಗುತ್ತಿದ್ದವು. ಈ ಮಂದಿ ಲಕ್ಷಾಂತರ ಹೇಳಹೆಸರಿಲ್ಲದವರು. ಆ ಹಳೆಯ ಕರಡಿ ಹೆಸರಿಗೆ ಬಂದಿದ್ದ ಆ ಸೀಮೆಯಲ್ಲಿ ಒಬ್ಬರಿಗೊಬ್ಬರು ಗುರುತಿಸದಂಥವರು. ಅಲ್ಲಿ ಹೆಸರಾದ ಈ ಕರಡಿಯಲ್ಲಿ ನಡೆದಾಡುತಿದ್ದುದು ಒಂದು ಮರ್ತ್ಯಪ್ರಾಣಿಯಲ್ಲ. –ಅದೊಂದು ಕಾಲಗೆಟ್ಟ ಕಲ್ಪನೆ, ಯಾರೂ ಗೆಲ್ಲಲಾರದ ಆಳಲಾರದ ಶಕ್ತಿ. ಪ್ರಾಚೀನ ಮೃತಯುಗ ಒಂದರಿಂದ ಎದ್ದು ಬಂದುದು ಪ್ರಾಚೀನ ವನ್ಯ ಜೀವದ ಒಂದು ಭೂತಛಾಯೆ, ಸ್ಮಾರಕ, ಪೂಜಾಪ್ರತೀಕ. ಅದನ್ನು ಹುಲುಮನುಜರು ಹಿಂಡುಗಟ್ಟಿಕೊಂಡು ಹೆದರಿಕೆಯಿಂದಲೂ ಅಸಹನೆಯಿಂದಲೂ ರೊಚ್ಚಿಗೆದ್ದು ಒರಗಿದ ಹೆಣ್ಣಾನೆಯ ಸುತ್ತಲಿನ ವಾಮನ ವನಚರರಂತೆ ಕೊಚ್ಚಲು ಯತ್ನಿಸುವರು! ಅಂಥ ಈ

ಕರಡಿ, ದುರ್ದಮ್ಯ ದುರ್ನಿವಾರವಾಗಿ ಏಕಾಕಿಯಾಗಿ ಇಲ್ಲವ ಮಕ್ಕಳಿಲ್ಲದೆ ಮಡದಿ ಕಳಕೊಂಡು ಎಲ್ಲ ನೈತಿಕ ಬಂಧನದಿಂದಲೂ ಬಿಡುಗಡೆ ಹೊಂದಿ ತಾನೇತಾನಾಗಿ ಉಳಿದಿತ್ತು.

ಆತ ಹತ್ತು ವರ್ಷದವನಾಗುವತನಕವೂ ಪ್ರತಿ ನವೆಂಬರದಲ್ಲಿ ನಾಯಿಗಳೂ ಹಸೆ ಪಿಂಡಿಗಳೂ ಅನ್ನ ಸಾಮಗ್ರಿ ತುಬಾಕಿಗಳೂ ಅವನ ತಂದೆ ಟೆನ್ನಿಯ ಜಿಮ್ಮಿ ನಿಗ್ರೋ-ಕೆಂದು ಇಂಡಿಯನ್ ಸ್ಯಾಮ ಫಾದರ್ಸ. ಈತ ಒಬ್ಬ ಚಿಕ್ಯೆಸೋ ನಾಯಕನಿಂದ ಗುಲಾಮ ಹೆಂಗಸಿನಲ್ಲಿ ಹುಟ್ಟಿದವನು- ಇವರನ್ನೆಲ್ಲ ಹೇರಿಕೊಂಡ ಬಂಡಿಯು ಜಾಫರ್ಸನ್ ಪಟ್ಟಣದತ್ತ ಮಾರ್ಗದಗುಂಟ ಹೊರಡುವುದನ್ನು ಆತ ನಿರೀಕ್ಷಿಸುತ್ತಿದ್ದ. ಜಾಫರ್ಸನದಲ್ಲಿ ಮೇಜರ ಡಿಸ್ಪೇನ್ ಮತ್ತು ಇತರರು ಬಂಡಿಯವರನ್ನು ಸೇರಿಕೊಳ್ಳುತ್ತಿದ್ದರು. ಆಗ ಏಳು ಎಂಟು ಒಂಭತ್ತು ವರ್ಷ ವಯಸ್ಸಿನ ಆ ಹುಡುಗನಿಗೆ ಅನಿಸುತ್ತಿತ್ತು. - ಅವರೆಲ್ಲ ಆ ಮಹಾತಳಕ್ಕೆ ಹೋಗುವದು ಕರಡಿಯನ್ನೋ ಚಿಗರೆಯನ್ನೋ ಬೇಟೆಯಾಡಲಿಕ್ಕೆ ಅಲ್ಲ, ಆ ಕರಡಿಯನ್ನು ಕೊಲ್ಲುವ ಉದ್ದೇಶವೇ ಅವರದಿದ್ದಿಲ್ಲ. ವರ್ಷಕ್ಕೊಮ್ಮೆ ಅದರೊಡನೆ ಗೊತ್ತುಪಡಿಸಿದ ಭೆಟ್ಟಿಯ ಹರಕೆ ಒಪ್ಪಿಸಿ ಬರುವದಕ್ಕೆ ಇರಬೇಕು. ಎರಡು ವಾರಾನಂತರ ಯಾವ ಗೆಲುವಿನ ಲೂಟಿಯೂ ಇಲ್ಲದೆ ಒಂದು ತಲೆ ಒಂದು ತೊಗಲು ಏನೂ ತಾರದೆ ಅವರು ಹಿಂದಿರುಗುತ್ತಿದ್ದರು. ಆತನೂ ಅಂತಹದೇನೂ ಅಪೇಕ್ಷಿಸುತ್ತಿದ್ದಿಲ್ಲ. ಒಂದೆ ಬಂಡಿಯಲ್ಲಿ ಅದು ಆ ಕರಡಿ ಇದ್ದಿರಬೇಕಂಬ ಭೀತಿಯು ಅತನನ್ನು ಪೀಡಿಸುತ್ತಿದ್ದಿಲ್ಲ. ತಾನು ಹತ್ತು ವರ್ಷದವನಾದನಂತಹ, ಆ ನವೆಂಬರದ ಎರಡು ವಾರಗಳ ಮನೆಗೆ ತಂದೆಯು ಆತನನ್ನು ಸಂಗಡ ಬರಲು ಬಿಟ್ಟಾಗಲೂ ಆ ತಂದೆ ಮೇಜರ ಡಿಸ್ಪೇನ್ ಜನರಲ್ ಕಾಂಪ್ಸನ್ ಮತ್ತು ಇತರರೊಂದಿಗೆ ತಾನೂ ಒಬ್ಬ, ಇನ್ನೊಬ್ಬ ಆ ಕರಡಿಯ ಕಡೆಗೆ ಬೊಗಳಲು ಹೆದರುವ ನಾಯಿಗಳ ನಡುವೆ, ಅದರ ನೆತ್ತರ ಹರಿಸಲೂ ಸಾಲದ ಆ ಕೋವಿ ರೈಫಲ್‌ಗಳ ಜತೆಯಲ್ಲಿ ಆ ಕರಡಿಯ ಕ್ಷೋಭಮಯ ಅಮರತ್ವದ ವಾರ್ಷಿಕ ಪ್ರದರ್ಶನದ ಪ್ರಸಂಗದಲ್ಲಿ!

ಆಗ ಆತನಿಗೆ ನಾಯಿಗಳ ಬೊಗಳು ಕೇಳಿಸಿತು. ಅದು ಶಿಬಿರದಲ್ಲಿಯ ಆತನ ಮೊದಲನೆಯ ಬಾರಿಯ ಎರಡನೆಯ ವಾರದಲ್ಲಿ ಸ್ಯಾಮಫಾದರ್ಸನೊಂದಿಗೆ ಆತ ನಿಂತಿದ್ದ. ಒಂದು ದೊಡ್ಡ ಓಕಮರಕ್ಕೆ ಆನಿಸಿಕೊಂಡು, ಒಂದು ಹಳ್ಳ ದಾಟುವ ತಾಣದಲ್ಲಿ. ಅವರು ಅಲ್ಲಿ ಹಾಗೆ ಕಳೆದ ಒಂಭತ್ತು ದಿವಸಗಳಿಂದಲೂ ನಿಂತಿದ್ದರು ನಾಯಿಗಳ ಬೊಗಳು ಕೇಳುತ್ತಾ. ಅವನು ಹಿಂದೊಮ್ಮೆ ಕಳೆದ ವಾರದಲ್ಲಿಯೆ ಒಂದು ಮುಂಜಾನೆ ಈ ಬೊಗಳು ಕೇಳಿದ್ದ- ಬಂದು ಬಿಸುಗುಡುಗು ಮೂಲವೇ ಗೊತ್ತಾಗುವಂತಹದಲ್ಲಿ, ಆ ಒದ್ದೆ ಅಡವಿಗಳೊಳಗಿಂದ ಪ್ರತಿಧ್ವನಿಗೊಳ್ಳುತ್ತಿದ್ದುದು. ಆ ಕೋಲಾಹಲ ಕೂಡಲೇ ಬೇರೆ ಬೇರೆ ದನಿಗಳಾಗಿ ವಿಂಗಡನೆ ಹೊಂದುವ ತನಕ ಏರುತ್ತಿತ್ತು. ಆ ದನಿಗಳನ್ನಲ್ಲಿ ಆತ ಗುರುತಿಸಬಲ್ಲನು. ಒಂದೊಂದನ್ನು ಹೆಸರೆತ್ತಿ ಕರೆಯಬಲ್ಲ ಆತ ತುಬಾಕಿಯನ್ನೆತ್ತಿ ಅದರ “ಕುದುರೆ” ಸಜ್ಜುಗೊಳಿಸಿದ್ದ. ಆಗ ಸ್ಯಾಮ ಅವನಿಗೆ ಹೇಳಿದ್ದ. ಮತ್ತ ನಿಶ್ಚಲವಾಗಿ ನಿಂತಿದ್ದ ಆ ಕೋಲಾಹಲ, ಅದೃಶ್ಯವಾದ ಆ ಪ್ರಗತಿ, ನುಗ್ಗಿ ಬಂದು ಮುಂದೆ ಹಾಯ್ದು ಮಾಯವಾಯಿತು. ಚಿಗರೆ, ಗಂಡು ಚಿಗರೆ, ಬೂದಿಬಣ್ಣದ್ದು ವೇಗಕ್ಕೆ ಇನ್ನೂ ಉದ್ದವಾಗಿ ಕಾಣುತ್ತ ನಾಗಾಲೋಟದಿಂದ ಮಾಯವಾಗುತ್ತಿದ್ದುದು, ಸುತ್ತಲಿನ ಬೆಟ್ಟಗಳು, ಸಂಜೆಗತ್ತಲ ಏಕಾಂತ ಇವೆಲ್ಲ ಏನೂ ಆತ ಕಣ್ಮುಟ್ಟ ನೋಡುತ್ತಿದ್ದಂತೆ ಅವನಿಗೆ ಭಾಸವಾಯಿತು. ನಾಯಿಗಳ ಬೊಗಳು ತೇಲಿ ಅಡಗಿಹೋಗಿದ್ದರೂ ಅವನ ಕಿವಿಯಲ್ಲಿ ಇನ್ನೂ ಮೊಳಗುತ್ತಿತ್ತು.

“ಇನ್ನೂ ಆ ’ಕುದುರೆ’ ಕೆಳಗೆ ಬಿಡು” ಸ್ಯಾಮ ಅಂದ.

“ಅವೂ ಇಲ್ಲಿಗೆ ಬರಲಿಕ್ಕಿಲ್ಲವೆಂದು ನಿನಗೂ ಗೊತ್ತಿತ್ತೇ?”

“ಅಹುದು,” ಅಂದ ಸ್ಯಾಮ, “ನೀನು ಗುಂಡು ಹಾರಿಸದಿದ್ದಾಗ ಹೇಗೆ ಮಾಡಬೇಕೆಂಬುದನ್ನು ನೀನು ತಿಳಿದಿರಬೇಕೆಂದು ನನ್ನ ಅಪೇಕ್ಷೆ. ಕರಡಿ ಇಲ್ಲವೆ ಚಿಗರೆ ಹೊಡೆಯುವ ಸಂದರ್ಭ ತಪ್ಪಿಹೋದ ಮೇಲೆ ಮಂದಿಯೂ ನಾಯಿಗಳೂ ಕೊಲ್ಲಲ್ಪಡುವದುಂಟು.”

"ಏನೇ ಇರಲಿ," ಆತ ಅಂದ "ಅದೊಂದು ಬರೆ ಚಿಗರೆ!"

ಮುಂದೆ ಹತ್ತನೆಯ ಮುಂಜಾನೆ ಆತ ನಾಯಿಗಳ ಗದ್ದಲ ಮತ್ತೆ ಕೇಳಿದ; ಮತ್ತೆ ಸ್ಯಾಮನು ಮಾತನಾಡುವದಕ್ಕೂ ಮುಂಚೆಯೇ ಸ್ಯಾಮ ಕಲಿಸಿದಂತೆ, ಆ ಅತಿ ಉದ್ದವೂ ಅತಿ ಭಾರವೂ ಆದ ತುಬಾಕಿಯನ್ನು ಸಜ್ಜು ಮಾಡಿದನು. ಆದರೆ ಈ ಸಲ ಚಿಗರೆಯಲ್ಲ ಬಂದದ್ದು- ಸ್ವೈರವಾಗಿ ಮೂಗಾಳಿಗೆ ಕಸುವಿನಿಂದ ಓಡುವ ನಾಯಿಗಳ ಮೊಳಗುವ ಮೇಳದ ಬೊಗಳು ಅಲ್ಲ; ಆದರೆ ತಾರಾ ಶ್ರುತಿಯಲ್ಲಿ ಕೂಗಾಡುವ ಆ ಕಾಗಿನಲ್ಲಿ ಅನಿಶ್ಚಿತತೆಗಿಂತಲೂ ಅಸಹಾಯಕತೆಗಿಂತಲೂ ಹೆಚ್ಚಿನದೆಂತಹದೋ ಚೀತ್ಕಾರವಿದ್ದ ತೀರ ವೇಗದಿಂದಲೂ ಓಡದ, ಕೂಗಳತೆಯಾಚೆಗೆ ಹಾಯಲಿಕ್ಕೆ ದೀರ್ಘಕಾಲ ತೆಗೆದುಕೊಳ್ಳುವ ಆಗಲೂ ಕೊನೆಗೆ ಗಾಳಿಯಲ್ಲಿ ಎಲ್ಲಿಯೋ ಮಂದವಾದ ಸ್ವಲ್ಪ ಉನ್ಮಾದಾವೇಶದಂಥ ಅಸಹಾಯ ಆರ್ತವಾಗಿ ಗೋಳಿಡುತ್ತದೋ ಎನ್ನುವಂಥ ಬಂದು ಪ್ರತಿಧ್ವನಿಯನ್ನು ತೇಲಿಬಿಡುವ ಆ ಧ್ವನಿಯ ಗಮನವೇ ಇಲ್ಲದಂತೆ ಕಣ್ಮರೆಯಾದ ಬೂದಿಬಣ್ಣದ ಹುಲ್ಲುಮೆಲ್ಲುವ ಆಕೃತಿಯೊಂದು ಮುಂದೆ ಓಡುತ್ತಿದ್ದಂತೆ ತೋರುವ ನೋಟವದು. ಸ್ಯಾಮನು ಅವನಿಗೆ ತುಬಾಕಿಯೇರಿಸಲು ಮೊತ್ತಮೊದಲು ಕಲಿಸಿದ್ದನು. ಎಲ್ಲ ಕಡೆಗೂ ನೋಡಲಾಗುವ ಅಲ್ಲಿಂದ ಕದಲಲಾಗದ ಒಂದು ತಾಣವನ್ನು ಹುಡುಕಿ ನಿಲ್ಲಲು ಕಲಿಸಿದ್ದನು. ಆ ಸ್ಯಾಮ ಈಗ ಅವನ ಹತ್ತಿರಕ್ಕೆ ಸರಿದನು. ಅವನ ಹೆಗಲ ಮೇಲೆ ಆತ ಉಸಿರು ಬಿಡುವದು ಅವನಿಗೆ ಅನಿಸುತ್ತಿತ್ತು. ಅವನ ಮೂಗಿನ ಸೊಳ್ಳೆಗಳು ಶ್ವಾಸದೊಂದಿಗೆ ಒಳಹೊರಗೆ ಚಲಿಸುವಾಗ ಅವುಗಳ ಡೊಂಕು ಅವನಿಗೆ ಕಾಣುತ್ತಿತ್ತು.

"ಅದೋ" ಸ್ಯಾಮ ಅಂದನು. "ಓಡುತ್ತೇನೂ ಇಲ್ಲ. ಬರೆ ನಿಧಾನವಾಗಿ ನಡೆಯುತ್ತಿದೆ."

"ಹಳೆ ಜಾಂಬವಂತ," ಹುಡುಗ ಹೇಳಿದ, "ಇದೋ ಇಲ್ಲಿ ಮೇಗಡೆ ಇಲ್ಲಿ ಈ ಕಡೆಗೆ" ಅವನು ಕೂಗಿದ.

“ಅಹುದು, ಪ್ರತಿ ವರ್ಷ ಅವನು ಹೀಗೆಯೇ ಮಾಡುತ್ತಾನೆ. ಒಮ್ಮೆಯಾದರೂ ಶಿಬಿರದಲ್ಲಿ ಈ ಸಲ ಯಾರು ಬಂದಿದ್ದಾರೆ. ಬಂದವರು ಗುಂಡಿಕ್ಕಬಹುದೋ ಇಲ್ಲವೋ, ತನ್ನನ್ನು ಬೊಗಳಿ ತಡಗಟ್ಟುವ ನಾಯಿಗೀಯಿ ಇವರ ಹತ್ತಿರ ಇವೆಯೋ ಇಲ್ಲವೋ, ಎಂತೆಲ್ಲ ನೋಡಲಿಕ್ಕೆ ಅವರನ್ನು ಆತ ಹೊಳೆಗೆ ಅಟ್ಟಿಕೊಂಡು ಹೋಗಿ ಮತ್ತೆ ತಿರುಗಿ ಅಟ್ಟುವದುಂಟು, ನಾವೂ ತಿರುಗಿ ಹೋಗೋಣ. ಆ ನಾಯಿ ಹಿಂಡು ಶಿಬರಕ್ಕೆ ತಿರುಗಿ ಬಂದಾಗ ಹೇಗೆ ಕಾಣುವವೋ ನೋಡೋಣ.”

ಅವರು ಶಿಬಿರ ಸೇರಿದಾಗ ಆ ಬೇಟೆಯ ನಾಯಿಗಳು ಆ ಮೊದಲೆ ಅಲ್ಲಿಗೆ ತಲ್ಪಿದ್ದವು. ಅವುಗಳಲ್ಲಿ ಹತ್ತು ಅಡುಗೆಯ ಮನೆಯಲ್ಲಿ ಅವಿತುಕೊಂಡಿದ್ದವು. ಹುಡುಗನೂ ಸ್ಯಾಮನೂ ಅವು ಅಲ್ಲಿ ಮೈ ಮುದುಡಿಕೊಂಡು ಮಬ್ಬುಗತ್ತಲಲ್ಲಿ ಕೂತಾಗ ಅವುಗಳ ಶಾಂತವೂ, ಕಾಂತಿಯುಕ್ತವೂ ಆದ ಕಣ್ಣುಗಳು ಥಳಿಥಳಿಸುತ್ತಿದ್ದವು. ಆದರೆ ಸದ್ದಿಲ್ಲ, ಪಿಟ್ಟಿಲ್ಲ; ಬರೇ ನಾಯಿಗಿಂತಲೂ ಮಿಗಿಲಾದ ಬಲವಾದ ಏನೋ ಒಂದು ಪ್ರಭಾವ. ಬರೆ ಪಶುವಲ್ಲ, ಪ್ರಾಣಿಯಲ್ಲ. ಆದರೂ ಆ ಅಸಹಾಯ ನರಳಿಕೆಯೊ ಎಂಬಂತೆ ಕುಂಯಿಗುಡುವದರ ಮುಂದೆ ಕಟ್ಟಿ ನಿಂತದ್ದು ಏಕಾಂತ ಕಗ್ಗಾಡು ಹೊರತು ಮತ್ತೇನಿಲ್ಲ. ಕೊನೆಗೂ. ಹನ್ನೊಂದನೆಯ ನಾಯಿ ಮನೆಗೆ ಮರಳಿದಾಗ ಅದನ್ನು ಉಳಿದ ಎಲ್ಲವೂ ಮಿಕಿ ಮಿಕಿ ನೋಡುತ್ತಿದ್ದವು. ನೋಡುತ್ತಿದ್ದವರಲ್ಲಿ ಅಡುಗೆಯವನಾದ ಮುದಿ ’ಅಂಕಲ್ ಆಶ್’ನೂ ಒಬ್ಬ! ಸ್ಯಾಮನು ಬಂದ ನಾಯಿಯ ಹರಿದ ಕಿವಿಯನ್ನು ಗಾಯಗೊಂಡ ಹೆಗಲನ್ನು ಟರ್ಪೆಂಟಾಯಿನ್ (ಮರದೆಣ್ಣೆ) ಮತ್ತು ಗಾಲಿಯ ಗ್ರೀಜ್ (ಮುಲಾಮು) ನಿಂದ ತೊಳೆದು ಬಳಿದು ಉಪಚರಿಸಿದನು. ಆ ಹುಡುಗನಿಗೆ ಆಗಲೂ ಅದೊಂದು ಸಜೀವ ಪ್ರಾಣಿಯ ಆಟವೆಂದೆನಿಸಲಿಲ್ಲ, ಕಗ್ಗಾಡೇ ಒಮ್ಮೆ ಕೆಳಗೆ ಬಗ್ಗಿ ಬೇಟೆಯ ನಾಯಿಯ ಅಲಕ್ಷ್ಯತೆಯನ್ನು ಮೃದುವಾಗಿ ಜಾಗ್ರತಗೊಳಿಸಿದಂತೆ ಅನಿಸುತ್ತಿತ್ತು.

"ಮನುಷ್ಯನಂತೆಯೇ ಸರಿ" ಸ್ಯಾಮ ಉದ್ಗರಿಸಿದ. "ಕೇವಲ ಮಂದಿಯಂತೆಯೇ ಸರಿ. ಎದೆಗಾರಳಾಗುವದನ್ನು ಆದಷ್ಟು ಮುಂದೆ ಮುಂದೆ ಹಾಕುತ್ತ ಹಾಕುವಾಗೆಲ್ಲ ಒಂದಲ್ಲ ಒಂದು ದಿನ - ಬಂದು. ದಿನ ಹಿಂದೊ ಮುಂದೊ ದಿಟ್ಟಳಾಗದೆ ಗತ್ಯಂತರವಿಲ್ಲವೆಂದೂ ತಿಳಿದಿರುತ್ತ ತನ್ನೊಡನೆಯೇ ತಾನು ಬಾಳಬೇಕಾದರೆ ದಿಟ್ಟತನದ ಅಗತ್ಯವೆಂದು ಅರಿತಿರುತ್ತ ಹಾಗೆ ಒಂದೊಮ್ಮೆ ದಿಟ್ಟತನ ಕಾಣಿಸಿದರೆ ತನಗೆ ಏನಾಗಲಿದೆಯೆಂಬುದೂ ಗೊತ್ತಿರುತ್ತ ಈಕೆ ದಿಟ್ಟ ದಿನವನ್ನು ಮುಂದಕ್ಕೆ ಹಾಕುತ್ತ ಈ ಅವಸ್ಥೆಗೆ ಬಂದಳು!"

ಆ ದಿನ ಸಂಜೆಗೆ ಬಂಡಿ ಎಳೆಯುವ ಒಂದು ಒಕ್ಕಣ್ಣ ಹೇಸರಗತ್ತೆಯ ಮೇಲೆ ಆತ ಕೂತ. ಆ ಹೇಸರಗತ್ತೆಗೆ ನೆತ್ತರಿನ ಅಥವಾ ಕರಡಿಯ ವಾಸನೆಯನ್ನು ಗೊತ್ತುಹಚ್ಚಲಾಗಲಿಲ್ಲ. ಸ್ಯಾಮ ಇನ್ನೊಂದರ ಮೇಲೆ ಕೂತ. ಅವರಿಬ್ಬರು ಮೂರು ತಾಸಿಗೂ ಮಿಕ್ಕಿ ಮುಂದೆ ಮುಂದೆ ಸಾರಿ ಸಾಗಿದರು. ಆ ಭರದಿಂದ ಕುಗ್ಗುತ್ತಿರುವ ಚಳಿಗಾಲದ ದಿನಾಂತದಲ್ಲಿ. ಒಂದು ನಿಶ್ಚಿತ ದಾರಿಯನ್ನು ಅವರು ಹಿಡಿದಿರಲಿಲ್ಲ, ಕಣ್ಣಿಗೆ ಬೀಳಬಹುದಾದ ಯಾವುದೇ ಕುರುಹುಗಳ ಕ್ರಮವನ್ನು ಅನುಸರಿಸಲಿಲ್ಲ. ಅಮೇಲೆ ಹಿಂದೆ ಆತ ಎಂದೂ ನೋಡದಿದ್ದಂಥ ಪ್ರದೇಶದಲ್ಲಿ ಅವರು ತಲ್ಪಿದರು. ಆಗ ಆತನಿಗೆ ಅರ್ಥವಾಯಿತು-ತನ್ನನ್ನು ಅಂಥ ಹೇಸರಗತ್ತೆಯ ಮೇಲೆ ಸ್ಯಾಮ ಏಕೆ ಕೂಡ್ರಿಸಿದ್ದನೆಂದು. ಸರಿಗಣ್ಣಿನ ವಾಹನವು ಫಕ್ಕನೆ ನಿಂತಿತು. ತಿರುಗಣಿಯಂತೆ ತಿರುಗಲು ಹೆಣಗಿತು. ಸ್ಯಾಮನು ಇಳಿಯುವಾಗ ಕಾಲು ಕೀಳಲು ಹವಣಿಸಿತು. ಬಲವಾಗಿ ಉಸಿರು ಬಿಡಹತ್ತಿತ್ತು. ಲಗಾಮನ್ನು ಜಗ್ಗುತ್ತ ತುಡಿಯುತ್ತ ಹರಿದಾಡಲು ಹತ್ತಿತು. ಆದರೆ ಸ್ಯಾಮ ಅದನ್ನು ಹಿಡಿದಿದ್ದನು. ತನ್ನ ದಾರಿಯಿಂದ ಪುಸಲಾಯಿಸಿದನು. ಅದನ್ನು ಕಟ್ಟಿಹಾಕುವದು ಕ್ಷೇಮವಿದ್ದಿಲ್ಲ. ಅತ್ತ ಹುಡುಗ ಕಣ್ಣುಕೆಟ್ಟ ವಾಹನದಿಂದ ಕೆಳಗಿಳಿಯುತ್ತಿದ್ದಾಗ ಸ್ಯಾಮ ತನ್ನ ವಾಹನವನ್ನು ಮುಂದೆ ಒಯ್ದನು.

ಅನಂತರ ಅಸ್ತಮಿಸುತ್ತಿರುವ ಸಂಜೆಯ ಕಾವಳದಲ್ಲಿ ಸ್ಯಾಮನ ಬಳಿಯಲ್ಲಿ ನಿಂತು ಆತ ಆ ಇಕ್ಕಟ್ಟಾದ ಸ್ಥಳದಲ್ಲಿ ಬಿದ್ದಿದ್ದ ಕೊಳೆತ ಮರದ ತೊಣೆಯನ್ನು ನೋಡಿದ. ಅದರ ಮೇಲೆ ನಖಗಳ ಬರೆಗೆರೆಗಳು ಕಿಕ್ಕಿರಿದಿದ್ದವು. ಅದರ ಪಕ್ಕದ ಒದ್ದೆಮಣ್ಣಿನಲ್ಲಿ ಸ್ಥೂಲ ಗಾತ್ರದ ಎರಡು ಬೆರಳುಗಳ ಹೆಜ್ಜೆ ಗುರುತುಗಳು. ಈಗ ಅವನಿಗೆ ಅರ್ಥವಾಯಿತು- ಆಗ ಅಡುಗೆಯ ಮನೆಯಲ್ಲಿ ನಾಯಿಗಳ ಮೈಮುದುಡಿ ಅವಿತುಕೊಂಡಿರುವಲ್ಲಿ ಯಾವ ವಾಸನೆ ತಾನು ಮೂಸಿದ್ದೆನೆಂಬುದು. ಅವನು ಆಗ ಮೊತ್ತಮೊದಲು ಮನಗಂಡನು,- ಅವನ ಶ್ರವಣದಲ್ಲಿ ಮನನದಲ್ಲಿ ಸಪ್ಪಳದಲ್ಲಿ ಓಡಾಡಿ ಕಾಣಿಸಿಕೊಂಡ ಆ ಕರಡಿ – ಅದೂ ಆತ ಬೇರೆಯೇನೂ ಆ ಬಗ್ಗೆ ಭಾವಿಸಬಹುದಾದುದನ್ನು ನೆನಪಿಗೆ ತರುವ ಮೊದಲಿಗೇ- ಅವನಂತೆಯೇ, ಅವನ ತಂದೆ, ಮತ್ತೆ ಮೇಜರ್ ಡಿಸೇನ್ ಹಾಗು ಜನರಲ್ ಕಾಂಪ್ಸನ್‌ನ ಕಿವಿ–ಕನಸುಗಳಲ್ಲಿಯೂ ಕೂಡ ಅವರು ಅನ್ಯಥಾ ಕಲ್ಪಿಸುವುದಕ್ಕೂ ಮುಂಚೆ ನೆಲೆಸಿದ ಆ ಕರಡಿ ಒಂದು ಮರ್ತ್ಯ ಪಶುವೇ ಆಗಿತ್ತು! ಪ್ರತಿ ನವೆಂಬರದ ಶಿಬಿರಕ್ಕೆ ಹೊರಟಾಗ ಅದನ್ನು ಗೆದ್ದು ತರುವ ಆಶೆ ಇಲ್ಲದೆ ಹೊರಟಿದ್ದರೆ, ಅದು ಅವರು ಅದನ್ನು ಕೊಲ್ಲಲು ಬರುತ್ತಿದ್ದಿಲ್ಲವೆಂತಲ್ಲ. ಇದುವರೆಗೂ ಅದನ್ನು ಹಾಗೆ ಕೊಲ್ಲುವ ಆಶೆ ನಿಜವಾಗಿಯೂ ಇದ್ದಿಲ್ಲ.

“ನಾಳೆ” ಆತ ಅಂದನು.

“ನಾವು ನಾಳೆ ಯತ್ನ ಮಾಡೋಣ” ಸ್ಯಾಮ ಹೇಳಿದ. “ಇನ್ನೂ ನಾಯಿ ನಮ್ಮ ಸಂಗಡ ಬರುವಂತಿಲ್ಲ.”

“ನಮ್ಮ ಹತ್ತಿರ ಹನ್ನೊಂದು ಇವೆ. ಅವು ಒಂದು ಮುಂಜಾನೆ ಅವನನ್ನು ಸ

ಓಡಿಸಿದವು”

“ಅದಕ್ಕೆ ಒಂದೇ ಸಾಕು- ಬೇರೆ ಯಾವವೂ ಬೇಡ” ಅಂದ ಸ್ಯಾಮ.

“ಅವನು ಅಲ್ಲಿ ಇಲ್ಲ. ಅವನು ಎಲ್ಲಿಯೂ ಇಲ್ಲವೇನೊ. ಅವನಿಗೆ ಇನ್ನೊಂದು ಗತಿಯೆಂದರೆ, ಯೋಗಾಯೋಗದಿಂದ ಕೈಯಲ್ಲಿ ಕೋವಿಯಿದ್ದ ಯಾವನೊಬ್ಬನ ದಾರಿಯಲ್ಲಿ ಓಡಿಬರುವದು.”

“ಆ ಯಾವನೊಬ್ಬ ನಾನಾಗಲಾರೆ.” ಆ ಹುಡುಗ ಆಡಿದ. “ಆತ ವಾಲ್ಟರನೋ ಮೇಜರನೋ ಅಥವಾ-”

“ಆಗಬಹುದು. ಹಾಗೆಯೇ ಆಗಬಹುದು,” ಸ್ಯಾಮ ಅಂದ. “ಮುಂಜಾವಿನಲ್ಲಿ ಪರಾಂಬರಿಸಿ ನೋಡುತ್ತಿರು. ಏಕೆಂದರೆ ಆತ ಒಳ್ಳೆ ಚಾಣಾಕ್ಷ– ಚಪಲ. ಅಂತೆಯೇ, ಆತ ಇಲ್ಲಿಯವರೆಗೂ ಬದುಕಿ ಉಳಿದು ಬಂದಿದ್ದಾನೆ. ಅವನನ್ನು ಸುತ್ತುಗಟ್ಟಿದಾಗ ಯಾರನ್ನಾದರೂ ಏರಿ ಹೋಗಲು ಆತ ಆರಿಸಿದುದಾದರೆ ನಿನ್ನನ್ನೇ ಆರಿಸಬಹುದು.”

“ಅದು ಹೇಗೆ?” ಆ ಹುಡುಗ ಹೇಳಿದ, “ಅವನಿಗೆ ಹೇಗೆ ಗೊತ್ತಾಗಬೇಕು?” ಕೇಳುತ್ತಿದ್ದಂತೆಯೇ ಆತ ತಡೆದ. “ಅವನಿಗೆ ಈಗಾಗಲೆ ನಾನು ಗೊತ್ತೆ? ನಾನು ಇಲ್ಲಿ ಈ ಮೊದಲು ಹಿಂದೆಂದೂ ಬಂದಿದ್ದಿಲ್ಲ. ನನಗೆ ವೇಳೆಯೂ ಸಿಕ್ಕಿದ್ದಿಲ್ಲ. ನಾನು-” ಇಷ್ಟಕ್ಕೆ ಆತ ಮತ್ತೆ ತಡೆದು ಸ್ಯಾಮನ ಕಡೆಗೆ ನೋಡಿದ. ಆ ಮುದುಕನ ಮೋರೆ ನಕ್ಕಾಗಲ್ಲದೆ ಮಿಕ್ಕಾಗೆಲ್ಲ ಏನನ್ನೂ ವ್ಯಕಪಡಿಸುತ್ತಿದ್ದಿಲ್ಲ ನಿರ್ಭಾವವಾಗಿರುತ್ತಿತ್ತು. ಆತ ನಮ್ರವಾಗಿ ನುಡಿದ. ಆ ನುಡಿಯಲ್ಲಿ ಆಶ್ಚರ್ಯವೂ ಇದ್ದಿಲ್ಲ. “ಆತ ನಿರೀಕ್ಷಿಸುತ್ತಿದ್ದುದು ನನ್ನನ್ನು. ಆತ ಒಮ್ಮೆ ಅಲ್ಲದೆ ಹೆಚ್ಚು ಸಲ ಹೊರಬಂದಿರುವನೆಂದು ನಾನು ಎಣಿಸಲಿಲ್ಲ.”

ಮರುದಿನ ಅವರು ನಸುಕು ಹರಿಯುವ ಮೂರು ತಾಸು ಮುಂಚಿತವೆ ಶಿಬಿರವನ್ನು ಬಿಟ್ಟರು. ಈ ಸಲ ಅವರು ನಡದು ಹೋಗಲಾರದಷ್ಟು ದೂರ ಹೋಗುವದಿತ್ತು; ಆದ್ದರಿಂದ ಅವರು ಬಂಡಿಯಲ್ಲಿ ಕುಳಿತು ಹೋದರು. ನಾಯಿಗಳೂ ಬಂಡಿಯಲ್ಲಿ ಕುಳಿತವು. ಮತ್ತೆ ಮುಂಜಾವಿನ ಮೊದಲನೆಯ ಬೂದಿ ಬೆಳಕು ಅವನು ಆ ಮೊದಲು ಎಂದೂ ನೋಡದ ಪ್ರದೇಶದಲ್ಲಿ ಅವನನ್ನು ಕಂಡಿತು. ಅಲ್ಲಿ ಸ್ಯಾಮ

ಅವನನ್ನು ನಿಲ್ಲಿಸಿ ಉಳಿಯಲು ಹೇಳಿ ಹೊರಟುಹೋದನು. ಅವನಿಗೆ ಭಾರವಾದ ಒಂದು ತುಬಾಕಿ ಹಿಡಿದು- ಆ ತುಬಾಕಿ ಅವನದೂ ಇದ್ದಿಲ್ಲ ಮತ್ತೆ, ಅದು ಮೇಜರ ಡಿಸ್ಪೇನನದಿತ್ತು- ಒಂದು ಅಂಚಿನ ಮರಕ್ಕೆ ಆನಿಸಿಕೊಂಡು ಆತ ನಿಂತನು. ಆ ತುಬಾಕಿ ಆತ ಒಂದೇ ಸಲ ಹಾರಿಸಿದ್ದ- ಮುನ್ನಾದಿನ ಒಂದು ಮೋಟು ಮರಕ್ಕೆ ಗುರಿ ಇಟ್ಟು, ಆದ 'ಒದೆತ' ಹೇಗಿದೆ ಅದನ್ನು ತಿರುಗಿ ತುಂಬುವದು ಹೇಗೆ - ಎಂಬುದನ್ನು ನೋಡಲಿಕ್ಕೆ. ಅವನು ನಿಂತ ಮರ ಒಂದು ಮಡುವಿನ ಬಳಿಯಲ್ಲಿ ನಿಂತಿತ್ತು. ಅದರ ಸ್ವಬ್ಧ ಕಪ್ಪು ನೀರು ಚಲನೆಯಿಲ್ಲದ ಗತಿಯಲ್ಲಿ ಒಂದು ಬೆತ್ತದ ಹಿಂಡಿನ ಬಿರುಕಿನೊಳಗಿಂದ ಹರಿದು ಒಂದು ಚಿಕ್ಕ ಬಯಲಲ್ಲಿ ಹಾಯ್ದು ಇನ್ನೊಂದು ಬೆತ್ತದ ಮೆಳೆಯಲ್ಲಿ ನುಗ್ಗುತ್ತಿತ್ತು. ಆ ಮೆಳೆಯಲ್ಲಿ ಒಂದು ಕಾಣದ ಹಕ್ಕಿ-ದೊಡ್ಡದೊಂದು ಮರಕುಟುಕ-ನಿಗ್ರೋ ಮಂಡಿ ಅದನ್ನು "ದೇವರೆ ದೊಡ್ಡವ" ಎಂದು ಕರೆಯುತ್ತಿದ್ದರು!- ಒಂದು ಸತ್ತ ಪ್ರಾಣಿಯನ್ನು ಕುಕ್ಕಿ ಹಕ್ಕಿ ಕಟಕಟಿಸುತ್ತಿತ್ತು.

ಇತರ ಇಂಥ ನಿರೀಕ್ಷೆಗಳಂತೆಯೇ ಈ ನಿರೀಕ್ಷಣೆಯ ನಿಲುವೂ ಇತ್ತು. ಕಳೆದ ಹತ್ತು ದಿನಗಳಿಂದ ಮುಂಜಾನೆ ಆತ ನಿಲ್ಲುತ್ತಿದ್ದ ಸ್ಥಾನದಿಂದ ಇದು ಪ್ರಾಸಂಗಿಕ ವಿವರಗಳಲ್ಲಿ ಭಿನ್ನವಾಗಿತ್ತು. ಈ ಸ್ಥಳದ ಸನ್ನಿವೇಶ ಅವನಿಗೆ ಹೊಸದಿತ್ತು. ಆದರೂ ಕಳೆದ ಎರಡು ವಾರಗಳ ನಂತರ ಇನ್ನೊಂದು ಸ್ಥಳವೂ ಅತಿಪರಿಚಿತವೆನಿಸತ್ತು.– ಇದೂ ಅದಕ್ಕಿಂತ ಕಡಿಮೆ ಪರಿಚಿತವಾಗಿದ್ದಿಲ್ಲ– ಅದೇ ಏಕಾಂತ, ಮನುಷ್ಯಪ್ರಾಣಿ ಹಾದು ಹೋದರೂ ಭಂಗ ತರದಿದ್ದ ಕುರುಹು ಇಡದಿದ್ದ ಆ ಅಖಂಡ ಶೂನ್ಯ ಏಕಾಂತ. ಸ್ಯಾಮ ಫಾದರ್ಸನ ಚಿಕಾಸೊ ಪೂರ್ವಜನು- ಮೂಲ ಪುರುಷನು- ಗದೆಯನ್ನೊ ಕೊಡಲಿಯನ್ನೊ ಎಲುಬಿನ ಬಾಣವನ್ನೊ ಹಿಡಿದೆತ್ತಿ ಗುರಿ ತೂಗಿ ಆ ಕಾಡಿನೊಳಗೆ ನುಗ್ಗಿ ಬಂದು ಅತ್ತಿತ್ತ ಕಣ್ಣು ಓಡಿಸಿದಾಗ ಅದು ಹೇಗೆ ಕಂಡಿರಬಹುದೋ ಅದೇ ಸ್ವರೂಪ ಆ ಅಮಾನುಷ ಅರಣ್ಯಕ್ಕೆ ಇತ್ತು. ಈಗಿನ ವ್ಯತ್ಯಾಸವೆಂದರೆ ಅಡುಗೆಯ ಮನೆಯ ಅಂಚಿಗೆ ಕಾಲು ಮಡಚಿ ಕೂತು ಕೆಳಗೆ ಮೈಮುದುಡಿ ಅವಿತುಕೊಂಡು ಬಿದ್ದಿದ್ದ ನಾಯಿಗಳನ್ನು ಆತ ಮೂಸಿದ್ದ ಒಂದು ಒಮ್ಮೆಯಾದರೂ ತನಗೆ ತಾನೇ ಬದುಕುವದಕ್ಕಾಗಿ

ದಿಟ್ಟನಾಗಲೇಬೇಕಾಗಿ ಬಂದು ಕಿವಿಯನ್ನೂ ಹೆಗಲನ್ನೂ ಹರಿದುಕೊಂಡದ್ದನ್ನು ಕಂಡಿದ್ದ ಇದೂ ಅಲ್ಲದೆ, ನಿನ್ನೆ ಕೊಳೆತ ಹಾಳುಸುರಿಯುತ್ತಿದ್ದ ಮರದ ತೂಣೆಯ ಹತ್ತಿರ ಜೀವಂತ ಪಾದದ ಆ ಹೆಜ್ಜೆಯ ಮುದ್ರೆಯನ್ನೂ ನೋಡಿದ್ದ.

ಆತನಿಗೆ ನಾಯಿಗಳ ಸದ್ದು ಕೇಳಿಸಲೇ ಇಲ್ಲ. ಅದು ಒಂದೆಂದೂ ಕೇಳಿಸಿದ್ದೆ ಇಲ್ಲ. ಆ ಮರಕುಟುಕನು ಡೋಲು ಬಡಿಯುವದು ಫಕ್ಕನೆ ನಿಂತಿದ್ದು ಮಾತ್ರ ಆತ ಕೇಳಿದ. ಆಗ ಕರಡಿಯು ಆ ಹಕ್ಕಿಯ ಕಡೆಗೆ ಕಣ್ಣಿಟ್ಟಿರಬೇಕೆಂದು ಭಾವಿಸಿದ. ಅದನ್ನು ಆತ ನೋಡಿದ್ದೇ ಇಲ್ಲ. ಅದು ಅವನ ಮುಂದಿದೆಯೊ ಹಿಂದಿದೆಯೊ ತಿಳಿಯಲೇ ಇಲ್ಲ. ಆತ ಚಲಿಸಲೇ ಇಲ್ಲ. ಕೈಯಲ್ಲಿ ಆ ನಿರುಪಯೋಗಿ ತುಬಾಕಿ ಹಿಡಿದಿದ್ದ. ಆ ತುಬಾಕಿ ತುಂಬಿ ಕುದುರೆಯೇರಿಸಲಿಕ್ಕೆ ಆತನಿಗೆ ಮುನ್‌ಸೂಚನೆಯೇ ಅನಿಸಲಿಲ್ಲ. ಈಗಲೂ ಆತ ಅದನ್ನು ತುಂಬೇರಿಸಲಾಗಲಿಲ್ಲ. ಹಿತ್ತಾಳಿ ಕಟ್ಟಿದಂತಹ ಆ ಚುರುಕು ಅವನ ಜೊಲ್ಲಿನಲ್ಲಿ ಅವನ ರುಚಿಗೆ ಅನಿಸಿತು. ಹಿಂದೆ ಅಡುಗೆಯ ಮನೆಯಲ್ಲಿ ಅವಿತುಕೊಂಡ ನಾಯಿಗಳ ಕಡೆಗೆ ಇಣುಕುತ್ತಿದ್ದಾಗಲೇ ಈ ರುಚಿಯ ಗಂಧ ಆತ ಮೂಸಿ ಬಲ್ಲ.

ಅಷ್ಟರಲ್ಲಿ ಅದು ಹೋಗಿಬಿಟ್ಟಿತ್ತು. ಎಷ್ಟು ಫಕ್ಕನೆ ಅದು ನಿಂತಿತೊ, ಅಷ್ಟೇ ಭರದಿಂದ ಮರಕುಟುಕನ ಆ ಒಣ ಏಕರೂಪದ ಕಟಕಟ ಮತ್ತೆ ಆರಂಭವಾಯಿತು. ಸ್ವಲ್ಪ ವೇಳೆಯ ನಂತರ, ನಾಯಿಗಳ ಸದ್ದೂ ಕೇಳಿಸಿದಂತೆ ಆತನಿಗೆ ಭಾಸವಾಯಿತು. ಒಂದು ಮರ್ಮರ ಧ್ವನಿ, ಅದೂ ವಿರಲವಾದ ಸದ್ದು, ಅದನ್ನು ಆತ ಗಮನಿಸುವ ಮೊದಲಿಗೇ ತುಸು ಹೊತ್ತಿನಿಂದ ಕೇಳಿಸುತ್ತಿದ್ದಿರಬೇಕು- ಕಿವಿಯ ಅಳವಿನಲ್ಲಿ ಒಮ್ಮೆ ತೇಲಿಬಂದು ಒಮ್ಮೆ ದೂರ ಸರಿದು ಅವಸಾನ ಹೊಂದಿತು. ಅವು ಯಾವವೂ ಅವನ ಹತ್ತಿರಕ್ಕೆ ಬರಲಿಲ್ಲ. ಅವು ಕರಡಿಯ ಹಿಂದೆಯೇ ಓಡಿದ್ದಾಗಿದ್ದರೆ, ಅದು ಬೇರೊಂದು ಕರಡಿಯಾಗಿರಬೇಕು. ಬೆತ್ತದ ಮೆಳೆಯೊಳಗಿಂದ ಹೂರಗೆ ಬಂದವನು ಸ್ಯಾಮನೇ; ಆತ ಮಡುವನ್ನು ದಾಟಿ ಹತ್ತಿರ ಬಂದನು. ನಿನ್ನೆ ಗಾಯಗೊಂಡ ನಾಯಿ ಆತನನ್ನು ಹಿಂಬಾಲಿಸಿತ್ತು. ಅದು ಆತನ ಹಿಮ್ಮಡಕ್ಕೆ ಹತ್ತಿಕೊಂಡು ಬರುತ್ತಿತ್ತು- ಒಂದು ಕುರುಡು

ಕುನ್ನಿಯಂತೆ ಬಂದು ಅವನ ಕಾಲಿಗೆ ಆನಿಸಿ ಗದಗದ ನಡುಗುತ್ತ ಬೆತ್ತಗಳತ್ತ ದಿಟ್ಟಿಸುತ್ತ ಅವಿತುಕೊಂಡಿತು.

"ನಾನು ಕರಡಿಯನ್ನು ಕಾಣಲಿಲ್ಲ." ಹುಡುಗ ಹೇಳಿದ. "ಇಲ್ಲ ಸ್ಯಾಮ್ ಕಾಣಲಿಲ್ಲ."

"ಅದು ನನಗೆ ಗೊತ್ತು?" ಸ್ಯಾಮ್ ನುಡಿದ.

"ಕಾಣುವ ಕೆಲಸವೆಲ್ಲ ಕರಡಿಯೇ ಮಾಡಿತು. ಅವನ ಕೆಲಸ ನಿನಗೆ ಕೇಳಿಸಲಿಲ್ಲ ಅಲ್ಲವೇ?"

"ಇಲ್ಲ". ಹುಡುಗ ತಡವರಿಸಿದ. "ಅಂದರೆ ನಾನು-"

"ಆತ ಬಲು ಚುರುಕು" ಸ್ಯಾಮ್ ಅಂದ. ತೀರ ಚತುರ ಹುಡುಗನ ಕಾಲಿಗೆ ಅವಚಿಕೊಂಡು ಮಂದವಾಗಿ ನಡುಗುತ್ತಲೇ ಇರುವ ಬೇಟೆಯ ನಾಯಿಯ ಕಡೆಗೆ ಸ್ಯಾಮ್ ನೋಡಿದ. ಅದರ ಪರಚಿದ ಹೆಗಲಿನಿಂದ ಕೆಲವು ಹೊಸ ನೆತ್ತರದ ಹನಿಗಳು ಒಸರುತ್ತಿದ್ದವು, ಅಂಟಿಕೊಂಡಿದ್ದವು. "ಆತ ಬಲು ಭಾರಿ. ಇನ್ನೂ ಕೈಗೆ ಸಿಕ್ಕಿಲ್ಲ. ನಮಗೆ ಆದರೆ ಒಂದಲ್ಲ ಒಂದು ದಿನ ಮುಂದಿನ ಸಲವಲ್ಲದಿದ್ದರೂ ಎಂದಾದರೊಂದು ದಿನ ಸಿಕ್ಕಾನು."

"ನಾನು ಅವನನ್ನು ನೋಡಲೇಬೇಕು." ಹುಡುಗ ಹಂಬಲಿಸಿದ. "ನಾನು ಆತನ ಕಡೆಗೆ ನೋಡಲೇಬೇಕು; ಇಲ್ಲದಿದ್ದರೆ ಈ ರೀತಿಗೆ ಕೊನೆಯೇ ಇರಲಿಕ್ಕಿಲ್ಲ." ತನ್ನ ತಂದೆಯಂತೆ ಅವನಿಗೂ ಹಿರಿಯನಾದ ಮೇಜರ ಡಿಸ್ಪೇನ್‌ನಂತೆ ಅಥವಾ ಸೇನಾಧಿಪತಿ ಕಾಂಪ್‌ಸನ್‌ನಂತೆ- ಆತನಂತೂ ಹದಿನೆಂಟು ನೂರಾ ಅರುವತ್ತೈದರಲ್ಲಿಯೋ ಬ್ರಿಗೇಡ್ ಕಮಾಂಡರ ಆಗುವಷ್ಟು ಮುದುಕನಾಗಿಬಿಟ್ಟಿದ್ದ. ತನ್ನ ಗತಿಯೂ ಹಾಗೆಯೇ ಮುಂದುವರಿದೀತು. ಹೀಗೆಯೇ ಮುಂದಿನ ಸಲ ಅದಕ್ಕೂ ಮುಂದಿನ ಸಲ ಆನಂತರ, ಅದರ ನಂತರ ಹೀಗೆಯೇ ನಡೆದೀತು. ಅವನಿಗನಿಸಿತು. ತಾವಿಬ್ಬರೂ, ತಾನು ಮತ್ತು ಆ

ಕರಡಿ ಕಾಲವೇ ಹುಟ್ಟಿಬಂದ ಆ ಕುಹಕದ ಮಬ್ಬಿನೊಳಗಿಂದ ಬಂದು ಮತ್ತೆ ಕಾಲವಶರಾಗಬಹುದು. ಆ ಮುದಿಕರಡಿ ಮೆಲ್ಲನೆ ಮರ್ತ್ಯತ್ವಪಾಶದಿಂದಲೇ ಬಿಡುಗಡೆ ಹೊಂದಬಹುದು. ತಾನೂ ಅದರ ಆ ಗತಿಯ ಕೆಲವೊಂದು ಅಂಶ ಪಡೆಯಬಹುದು. ಈಗ ಅವನಿಗೆ ಗೊತ್ತಾಯಿತು, ಆ ಅವಿತ ನಾಯಿಗಳಲ್ಲಿ ತಾನು ಏನನ್ನು ಮೂಸಿದೆನೆಂದು ತನ್ನ ಜೊಲ್ಲಿನೆಲ್ಲಿ ಯಾವ ರುಚಿ ಸವಿದೆನೆಂದು. ಅದು ಭಯವೆಂದು ಆತ ಮನಗಂಡ. "ನಾನು ಕರಡಿಯನ್ನು ನೋಡಲೇಬೇಕು - ಭೀತಿಯಿಲ್ಲದೆ ಆಶೆಯಿಲ್ಲದೆ ಒಮ್ಮೆಯಾದರೂ ಕರಡಿಯನ್ನು ನೆಟ್ಟ ದೃಷ್ಟಿಯಿಂದ ನೋಡಲೇಬೇಕು." ಆತ ಭಾವಿಸಿದ.

ಮರುವರ್ಷ ಜೂನ್ ತಿಂಗಳಲ್ಲಿ ಆ ಸಂಗತಿ ನಡೆಯಿತು. ಆಗ ಆತನಿಗೆ ಹನ್ನೊಂದು ವಯಸ್ಸು ಅವರು ಮತ್ತೊಮ್ಮೆ ಶಿಬಿರದಲ್ಲಿದ್ದರು. ಮೇಜರ ಡೀ ಸ್ಪೇನ್ ಮತ್ತು ಜನರಲ್ ಕೆಂಪ್ಸನ್‌ನ ಹುಟ್ಟುಹಬ್ಬಗಳನ್ನು ಆಚರಿಸುತ್ತಿದ್ದರು. ಅವರಲ್ಲಿ ಒಬ್ಬ ಸಪ್ಟೆಂಬರದಲ್ಲಿ ಹುಟ್ಟಿದ್ದ. ಇನ್ನೊಬ್ಬ ಇನ್ನೊಂದು ಹತ್ತು ವರ್ಷಗಳ ಆಚೆ ಕಡುಚಳಿಯ ನಡುಗಾಲದಲ್ಲಿ ಹುಟ್ಟಿದ್ದ. ಆದರೂ ಕೂಡಿದಾಗಲೇ ಹಬ್ಬ ಮಾಡುತ್ತಿದ್ದರು. ಎರಡು ವಾರ ಮೀನು ಹಿಡಿಯಲೂ, ಇಣಚಿಗಳನ್ನು ನೀರುಕೋಳಿಗಳನ್ನು ಹಿಡಿಯಲೂ ಕಾಡುಬೆಕ್ಕುಗಳನ್ನು ರಾತ್ರಿ ನಾಯಿಗಳೊಂದಿಗೆ ಬೇಟೆಯಾಡಲೂ ಅವರು ಕೂಡಿದ್ದರು. ಅಂದರೆ ಈ ಬೇಟೆ ಮೀನು-ಕೋಳಿ-ಇಣಚಿಗಳ ಶಿಕಾರಿ ಮಾಡುವವರು ಆ ಹುಡುಗ ಬೂನ್ ಹೊಗ್ಗೆನ್ ಬೆಕ್ ಮತ್ತು ನಿಗ್ರೋಗಳು. ಹಿರಿಯರೂ ಹಳಬರೂ ಹೋಗುತ್ತಿರಲಿಲ್ಲ, ಮೇಜರನೂ ಜನರಲ್ಲನೂ ಎರಡು ವಾರಗಳನ್ನು ಜೋಲಿಯ ಕುರ್ಚಿಯಲ್ಲಿ ಕುಳಿತು ಕಳೆದಿದ್ದರು. ಇದಿರಿಗೇ ಒಂದು ಪ್ರಚಂಡ ಕಬ್ಬಿಣದ ಪಾತ್ರೆ. ಅದರಲ್ಲಿ ಕುದಿಯುತ್ತಿರುವ ಬರ್ನ್‌ಸ್ಟಿಕ್ ಸಾಂಬಾರವನ್ನು ಸವುಟಿನಿಂದ ತೊಳಸುತ್ತ ರುಚಿನೋಡುತ್ತ ಅದನ್ನು ಹೇಗೆ ಮಾಡಬೇಕೆಂಬುದಕ್ಕೆ ಮುದಿ ಏಷನೊಂದಿಗೆ ಜಗಳಾಡುತ್ತ ಚನ್ನಿಯ ಜಿಮ್ಮನ್ನು ವ್ಹಿಸ್ಕಿಯನ್ನು ಹೂಜೆಯಿಂದ ತವರಿನ ಲೋಟಾದಲ್ಲಿ ಸುರಿವಿ ಕೊಡಲಿಕ್ಕೆ ಇಟ್ಟುಕೊಂಡು ಅವರು ಕುಳಿತಿದ್ದರು. ಹುಡುಗನ ತಂದೆ ಮತ್ತು ವಾಲ್ಟರ್ ಇವರೆಲ್ಲರೂ ಕೂಡ ಸಾಕಷ್ಟು ಪ್ರಾಯದವರೇ ಇದ್ದರೂ ಹುಡುಗನೂ ಅವನ ಸಂಗಡಿಗರೂ ಬೆನ್ನಟ್ಟುವ ಮಾದರಿಯ

ಬೇಟೆಯನ್ನು ತಿರಸ್ಕರಿಸುತ್ತಿದ್ದರು. ಅಂಥ ಕಾಡುಪ್ರಾಣಿಗಳನ್ನು ಗುಂಡಿಕ್ಕುವದೇ ಆದರೆ ತಮ್ಮ ಗುರಿಗಾರಿಕೆಯ ಮೇಲೆ ಒಡ್ಡು ಕಟ್ಟಿ ಜೂಜಾಡುವದಕ್ಕಾಗಿಯೇ ಹಾಗೆ ಮಾಡುತ್ತಿದ್ದರು.

ಅಥವಾ ಅವನ ತಂದೆಯೂ ಇತರರೂ ಈ ಹುಡುಗ ಇಣಚಿಗಳ ಬೇಟೆಯಾಡುತ್ತಿರುವನೆಂದು ನಂಬಿದರು. ಮಾರನೆಯ ದಿನದವರೆಗೂ ಸ್ಯಾಮ್ ಫಾದರ್ಸನ ಹಾಗೆಯ ನಂಬಿರಬೇಕಂತಲ್ಲ ಆತ ತಿಳಿದಿದ್ದನು. ಪ್ರತಿದಿನ ಮುಂಜಾವಿನ ಉಪಹಾರ ಮುಗಿದೊಡನೆಯೇ ಆತ - ಆ ಹುಡುಗ-ಶಿಬಿರವನ್ನು ಬಿಡುತ್ತಿದ್ದನು. ಈಗ ಅವನದೇ ಆದ ತುಬಾಕಿ ಅವನಿಗೆ ದೊರಕಿದೆ-ಒಂದು ಕ್ರಿಸ್‌ಮಸ್ ಹಬ್ಬದ ಕಾಣಿಕೆ. ಆ ಮುಂಜಾನೆ ಆತ ನಿಂತ ಆ ಮಡುವಿನ ಬಳಿಯ ಮರದ ಹತ್ತಿರಕ್ಕೆ ಅವನು ಮತ್ತೆ ಹೋಗುತ್ತಿದ್ದನು. ಮುದಿ ಜನರಲ್ ಕಾಂಪ್ಸನ್ ಕೊಟ್ಟ ಹೋಕಾಯಂತ್ರ ಉಪಯೋಗಿಸಿ ಆತ ಆ ಸ್ಥಳದಿಂದ ನಾಲ್ಕೂ ನಿಟ್ಟಿನ ನೋಟವನ್ನು ನಿದಾನಿಸುತ್ತಿದ್ದನು. ಅವನಿಗೆ ಗೊತ್ತಿಲ್ಲದೆ ತಕ್ಕಮಟ್ಟಿಗಿನ ವನಸಂಚಾರಿಯೂ ಹೆಚ್ಚಿನವನಾಗಲು ಆತ ಕಲಿಯುತ್ತಿದ್ದನು. ಎರಡನೆಯ ದಿನ ಆತ ಹಿಂದೆ ಮೊತ್ತಮೊದಲು ಸೊಟ್ಟ ಹೆಜ್ಜೆ ಗುರುತುಗಳನ್ನು ಕಂಡ ಆ ಕೊಳೆತ ತೊಣೆಯನ್ನು ಕಂಡುಕೊಂಡನು. ಈಗ ಅದು ಪೂರಾ ಪುಡಿಪುಡಿಯಾಗಿತ್ತು-ನಂಬಲಾರದಷ್ಟು ಭರದಿಂದ ಒಣಗುತ್ತ-ಮರವೂ ಬೆಳೆದದ್ದು ಬಂದ ಆ ಮಣ್ಣಿಗೆ ಮರಳಿ ತನ್ನ ಸತ್ವವನ್ನು ಪ್ರತ್ಯಕ್ಷವಾಗಿ ಬಿಟ್ಟುಕೊಟ್ಟಂತೆ.

ಈಗ ಆತ ಮಬ್ಬಿನಿಂದ ಹಚ್ಚಗಾದ ಕಾಡು ಕಾನುಗಳನ್ನೆಲ್ಲ ಹುಡುಕುತ್ತ ಅಲೆದನು. ಈಗ ಕಾಡು ನವೆಂಬರ ನರೆ ಬಿಸಿಲಿನ ನೆರೆಗಿಂತಲೂ ಅಧಿಕ ಮಸುಕಾಗಿತ್ತು. ಈಗ ನಡುಹಗಲಿನಲ್ಲಿಯೂ ಬಿಸಿಲು ತಪ್ಪಿ ತಡೆದು ನೆಲದ ಮೇಲೆ ಅಲ್ಲಲ್ಲಿ ಬೀಳುತ್ತಿತ್ತು. ಇದರಿಂದ ನೆಲಪೂರ್ತಿ ಒಣಗುತ್ತಿದ್ದಿಲ್ಲ. ಈ ಕರೆನರೆ ಕಲೆಗಳ ಬಿಸಿಲು ಹಾವುಗಳೊಂದಿಗೆ ನೀರಹಾವು ಬಳೆಹಾವು ಹೆಬ್ಬಾವುಗಳೊಂದಿಗೆ-ತಾನು ಹೊಟ್ಟೆ ಹೊಸೆದು ಸರಿಯುತ್ತಿತ್ತು. ಏಕೆಂದರೆ ಅವೂ ಅಲ್ಲಲ್ಲಿ ಬೀಳುತ್ತಿದ್ದ ಮಬ್ಬು ಬೆಳಕಿನ ಬಣ್ಣದವೇ ಆಗಿದ್ದವು. ಅವು

ಚಲಿಸಿದಾಗ ಮಾತ್ರವೇ ಆತನಿಗೆ ಕಾಣುತ್ತಿದ್ದವು. ದಿನನಿತ್ಯ ಹೆಚ್ಚು ಹೆಚ್ಚು ತಡಮಾಡಿ ಹಿಂದಿರುಗುತ್ತ ಮೊದಲನೇ ದಿನ, ಎರಡನೇ ದಿನ, ಮೂರನೆಯ ಸಂಜೆಯ ಇಳಿಬೆಳಕಿನಲ್ಲಿ ಆತ ಆ ಕುಂಟೆಗಳ ದಡ್ಡಿಯನ್ನು ಹಾದು ಹೋದ. ಆ ದಡ್ಡಿಯಲ್ಲಿ ಕುಂಟೆಗಳಿಂದ ಮಾಡಿದ ಲಾಯವಿತ್ತು. ಆ ಲಾಯದಲ್ಲಿ ಸ್ಯಾಮನು ಕುದುರೆಗಳನ್ನು ರಾತ್ರೆಗಾಗಿ ಕಟ್ಟಿಹಾಕುತ್ತಿದ್ದನು.

"ನೀನು ಇನ್ನೂ ಸರಿಯಾಗಿ ನೋಡಿಲ್ಲ." ಸ್ಯಾಮ ಅಂದ.

ಹುಡುಗ ತಡದ. ಒಂದು ಕ್ಷಣ ಆತ ಮಾತನಾಡಲಿಲ್ಲ, ಅನಂತರ ಹಳ್ಳದಲ್ಲಿ ಹುಡುಗನೊಬ್ಬ ಕಟ್ಟಿದ ಪುಟ್ಟ ಒಡ್ಡು ಕುಸಿದು ಹರಿದು ಹೋಗುವಾಗ ನೀರು ಸಾವಕಾಶವಾಗಿ ಶಾಂತವಾಗಿ ನುಗ್ಗಿ ಹೊಮ್ಮುವಂತೆ ಆತ ಶಾಂತವಾಗಿಯೇ ಹೇಳಿದ. "ಸರಿ ಸರಿ. ಅದು ಹೇಗೆ? ನಾನು ಆ ಮಡುವಿಗೆ ಹೋಗಿದ್ದೆ. ನಾನು ಆ ತೊಣೆಯನ್ನು ಕಂಡುಕೊಂಡೆ ಮತ್ತೆ ನಾನು-"

"ಅದೆಲ್ಲ ಸರಿ ಆಯ್ತು ಬಿಡು. ಅವನೂ ನಿನ್ನನ್ನು ನಿರೀಕ್ಷಿಸುತ್ತಿರಬೇಕು. ನೀನು ಅವನ ಪಾದದ ಗುರುತು ನೋಡಿಲ್ಲ ಮತ್ತೆ ಅಲ್ಲವೇ?"

"ನಾನು" ಆ ಹುಡುಗ ಅಂದ "ನಾನು ನೋಡಿಲ್ಲ. ನಾನು ಹಾಗೆ ವಿಚಾರವೇ ಮಾಡಿಲ್ಲ."

"ಅದೇ ತುಬಾಕಿ" ಸ್ಯಾಮ್ ಹೇಳಿದ. ಆತ ನಿಶ್ಚಲವಾಗಿ ನಿಂತಿದ್ದ ಬೇಲಿಯಲ್ಲಿ ಕೆಂದು ಇಂಡಿಯನ್ ಮುದುಕ ಜರ್ಜರವಾದ, ಬಣ್ಣ ಬಾಡಿಹೋದ ಮೇಲಂಗಿಯಲ್ಲಿ ಐದು ಸೆಂಟು ಬೆಲೆಯ ಸವೆದು ಸಡಿಲಾದ ಹುಲ್ಲು ಹ್ಯಾಟೊಂದನ್ನು ತೊಟ್ಟು ನಿಂತಿದ್ದ. ಆ ಹ್ಯಾಟು ನಿಗ್ರೊ ಜನರಲ್ಲಿ ಗುಲಾಮಗಿರಿಯ ಕಲಂಕಮುದ್ರೆಯಾಗಿತ್ತು. ಅದು ಈಗ ಬಿಡುಗಡೆಯ ಬೆಡಗಿನ ಬಿಲ್ಲೆಯಾಗಿಬಿಟ್ಟಿತ್ತು. ಆ ಶಿಬಿರ-ಬಯಲು ಮಾಡಿದ ಸ್ಥಳ-ಆ ಮನೆ, ಆ ಕಣಜ, ಅದರ ಪುಟ್ಟ ಕಾಳರಾಶಿ-ಮೇಜರ ಡಿಸ್ಪೇನ್‌ನು ತನ್ನ ಸರತಿಯಲ್ಲಿ ಆ

ಕಗ್ಗಾಡನ್ನೂ ಅಲ್ಪಸ್ವಲ್ಪ ಬರಗಿ ಕೆದರಿ-ಅದು ಕ್ಷಣಿಕವಾಗಿ!- ಬೆಳಿಸಿದ್ದು; ಇವೆಲ್ಲವೂ ಆ ಇಳಿಹೊತ್ತಿನ ಮಸುಕಿನಲ್ಲಿ ಬಾಡಿದವು. ಕಗ್ಗಾಡಿನ ಅಚಿಂತ್ಯವಾದ ಕಗ್ಗತ್ತಲಿನಲ್ಲಿ ರಾತ್ರೆ ಮರಳಲಿಕ್ಕೆ, "ಅಹುದು ಆ ತುಬಾಕಿ"-ಆ ಹುಡುಗ ನೆನೆದುಕೊಂಡ "ಅದೇ ತುಬಾಕಿ."

"ನೀನು ಗಾಬರಿಗೊಂಡಿದ್ದೀ." ಸ್ಯಾಮನೆಂದ "ಪಾಪ! ನೀನೇನು ಮಾಡಬಲ್ಲೆ! ಆದರೆ ಏನೂ ಹೆದರಬೇಡ. ಅಡವಿಯಲ್ಲಿಯ ಯಾವ ಪ್ರಾಣಿಯೂ ನೀನು ಅದನ್ನು ಇಕ್ಕಟ್ಟಿಗೆ ಅಟ್ಟುವತನಕ ಅಥವಾ ನೀನು ಹೆದರಿದೆಯೆಂದು ಅದಕ್ಕೆ ಸುಳಿವು ಹತ್ತಿರದ ಹೊರತು ನಿನಗೆ ಏನೂ ಅಪಾಯ ಮಾಡುವದಿಲ್ಲ. ವೀರನನ್ನು ಕಂಡರೆ ಕರಡಿಯಾಗಲಿ, ಜಿಂಕೆಯಾಗಲಿ ಹೇಗೆ ಹೆದರುತ್ತವೋ ಹಾಗೆ ಹೇಡಿಯನ್ನು ಕಂಡರೂ ಹೆದರುತ್ತವೆ."

"ಆ ತುಬಾಕಿ" ಹುಡುಗ ಯೋಚಿಸಿದನು.

"ನೀನೇ ಆರಿಸಿಕೋ." ಸ್ಯಾಮ್ ನುಡಿದ.

'ಏಶ್ ಕಾಕಾ' ಅಡುಗೆಯ ಮನೆಯಿಂದ ಹಚ್ಚಡ ಬಿಟ್ಟೆದ್ದು ಮುಂಜಾವಿನ ಉಪಹಾರಕ್ಕಾಗಿ ಒಲೆ ಹೊತ್ತಿಸುವುದಕ್ಕೂ ಮುಂದೆ ನಸುಕು ಹರಿಯುವದಕ್ಕೂ ಮುನ್ನವೇ ಆತ ಶಿಬಿರ ಬಿಟ್ಟು ಹೊರಬಿದ್ದನು. ಅವನ ಕೈಯಲ್ಲಿ ಬರೇ ದಿಕ್ಚಕ್ರ ಮತ್ತು ಹಾವುಗಳಿಗಾಗಿ ಕೋಲು ಇಷ್ಟೇ ಇದ್ದವು. ಸುಮಾರು ಒಂದು ಮೈಲು ದೂರ ಹೋದಮೇಲೆಯೇ ಅವನು ದಿಕ್ಚಕ್ರವನ್ನು ಉಪಯೋಗಿಸುತ್ತಿದ್ದ. ಕಾಣದ ಕೈಯಲ್ಲಿ ಕಾಣದ ದಿಕ್ಚಕ್ರವನ್ನು ಓಡಿದುಕೊಂಡು ಆತ ಒಂದು ಮೊರಡಿನ ಮೇಲೆ ಕುಳಿತನು. ಹುದುಗಿದ್ದ ಇರುಳ ಸದ್ದು ಆತನ ಚಲನವಲನಕ್ಕೆ ಹೆದರಿ ಸುಮ್ಮನೆ ಬಿದ್ದಿತು. ಒಮ್ಮೆ ಮತ್ತೆ ಸರಿದಾಡಹತ್ತಿತು. ಕೂನೆಯದಾಗಿ ಸ್ತಬ್ಧವಾಯಿತು. ಗೂಗೆಗಳು ಸುಮ್ಮನಾದವು. ಮತ್ತು ಎಚ್ಚೆತ್ತ ಹಕ್ಕಿಗಳಿಗಾಗಿ ಹಾಡಲು ಬಿಟ್ಟವು. ಮತ್ತು ಆತ ಹೋಕಾಯಂತ್ರವನ್ನು ನೋಡಲು ಶಕ್ಯವಾಯಿತು. ಆಗ ಆತ ಇನ್ನೂ ವೇಗದಿಂದ ಆದರೆ ಸದ್ದಿಲ್ಲದೆ ನಡೆದನು. ತನಗೆ ಗೊತ್ತಿಲ್ಲದೆ ಆತ ಹೆಚ್ಚು ಹೆಚ್ಚು ವನಸಂಚಾರಿಯಾಗುತ್ತ. ನಡೆದಿದ್ದನು.

ಸೂರ್ಯೋದಯದ ಸಮಯಕ್ಕೆ ಎರಳೆಗಳ ಜೋಡಿಯೊಂದು ದಿಗಿಲುಗೊಂಡು ಮಲಗಿದ್ದಲ್ಲಿಂದ ಹಾರಿ ಓಡಿತು. ಪೊದೆಗಳ ದಟ್ಟಣೆಯಲ್ಲಿ ನುಸುಳಿ ಆ ಹೆಣ್ಣು ಎರಳೆ ಅದರ ಹಿಂದೆ ಆ ಗುಂಡು-ಹೀಗೆ ಅತಿ ವೇಗದಿಂದ ಅವುಗಳನ್ನು ಕಣ್ಮುಟ್ಟಿ ನೋಡುವಷ್ಟು ಹತ್ತಿರದಿಂದ ಓಡಿದವು. ಆತ ಸರಿಯಾಗಿ ಸ್ಯಾಮ್ ಕಲಿಸಿಕೊಟ್ಟಂತೆಯೇ ಗಾಳಿಯ ಎರುದ್ದ ನಿಟ್ಟಿನಲ್ಲ ಬೇಟೆಯಾಡುತ್ತಿದ್ದನು. ಆದರೆ ಅದು ಈಗ ಮಹತ್ವದ್ದಿದ್ದಿಲ್ಲ. ಆತ ತುಬಾಕಿಯನ್ನು ಬಿಟ್ಟು ಬಂದಿದ್ದನು. ಬಿಟ್ಟು ಕೊಟ್ಟಿದ್ದನು- ತನ್ನದೆ ಒಪ್ಪಿಗೆಯಿಂದ. ಆಯ್ಕೆಯಿಂದ ಇದೊಂದು ಶರ್ತ. ಈ ಶರ್ತದಿಂದಲೇ ಆ ಕರಡಿಯ ಆವರೆಗಿನ ಅಜ್ಞಾತ ಅನಾಮಿಕತೆಯಷ್ಟೇ ಅಲ್ಲ, ಬೇಟೆ ಮತ್ತು ಬೇಟೆಗಾರರ ನಡುವಿನ ಹಳೆಯ ನಿಯಮಗಳೂ ಸಮತೂಕವೂ ಕೂಡಿಯೇ ಎಲ್ಲ ತ್ಯಜಿಸಲ್ಪಟ್ಟಿತ್ತು. ಅವನು ಹೆದರಲೂ ಆರ. ಹೆದರಲೂ ಕೂಡದು. ಭಯವು ಅವನನ್ನು ಪೂರ್ತಿಯಾಗಿ ಅವನ ರಕ್ತ, ಚರ್ಮ, ಕರಳು, ಎಲುಬು ಎಲ್ಲವನ್ನೂ ಸ್ಮರಣವಂದೆನಿಸುವ ಪೂರ್ವದ ಆದಿಯಂದಲೂ ಬೆಳೆದುಬಂದ ಸ್ಮರಣ ಶಕ್ತಿಯನ್ನು ಪೂರ್ತಿಯಾಗಿ ಆವರಿಸಿದಾಗಲೂ ಕೂಡ ಆತ ಹೆದರಲೊಲ್ಲ. ಈಗ ಉಳಿಯುವದೇನು? ಒಂದು ತೆಳುವಾದ ತಿಳಿಯಾದ ನಿಚ್ಚಳವಾದ ಆರಿಸಲಾಗದ, ಅಮರವಾದ, ಎಚ್ಚರ ಅಥವಾ ತಿಳುವಳಿಕೆ-ಅದೊಂದೇ ಆತನನ್ನು ಆ ಕರಡಿಯಿಂದ ಮಾತ್ರವಲ್ಲ ತನ್ನ ಕೌಶಲ್ಯದ ಹಾಗೂ ತಾಳ್ಮೆಯ ವಿನಯ ಮತ್ತು ದರ್ಪದಲ್ಲಿ ಕೊಲ್ಲಬಹುದಾದ ಇತರ ಎಲ್ಲ ಕರಡಿಗಳಿಂದ ಹಾಗೂ ಚಿಗರೆಗಳಿಂದಲೂ ಬೇರ್ಪಡಿಸುವಂತಹದು. ಆ ತಿಳುವಳಿಕೆಯನ್ನು ಉದ್ದೇಶಿಸಿಯೇ ಸ್ಯಾಮನು ನಿನ್ನೆ ಆ ಬೇಲಿಯಾಚೆ ಮಿಣುಕುಗತ್ತಲೆಯಲ್ಲಿ ಮಾತನಾಡಿದ್ದು.

ಮಧ್ಯಾಹ್ನದೊಳಗೆ ಆ ಚಿಕ್ಕ ಮಡುವಿಗೂ ಆತ ಬಹುದೂರ ಹೋಗಿ ತಲ್ಪಿದ- ಹಿಂದೆ ನೋಡಿದ್ದಕ್ಕಿಂತ ಬೇರೆಯಾದ ಅಪರಿಚಿತವಾದ ಪ್ರದೇಶದಲ್ಲಿ ಈಗ ಅವನು ಬರೀ ಹೋಕಾಯಂತ್ರ ನೋಡಿ ಮಾತ್ರವಲ್ಲ, ಅವನ ಅಜ್ಜನಾಗಿದ್ದ ಭಾರೀ ಹಳೆಯ ಬಿಸ್ಕೇಟು ಗಾತ್ರದ ಬಳ್ಳಿಯ ಕೈಗಡಿಯಾರ ನೋಡಿಯೂ ಪ್ರವಾಸಮಾಡುತ್ತಿದ್ದ. ಕೊನೆಗೂ ಆತ ತಡೆದಾಗ ಆತ ನಸುಕಿಗೇ ಹೋಕಾಯಂತ್ರ ಕಾಣುವಂತೆ ಬೆಳಕಾಗುವಾಗ ಮರದ

ಮೊರಡಿನಿಂದ ಎದ್ದು ಬಂದ ನಂತರ ಅದೇ ಮೊದಲಿನ ವಿರಾಮವಾಗಿತ್ತು. ಅದು ಸಾಕಷ್ಟು ದೂರವೇ ಆಯಿತು. ಆತ ಶಿಬಿರವನ್ನು ಬಿಟ್ಟದ್ದು ಒಂಬತ್ತು ತಾಸು ಹಿಂದೆ. ಇನ್ನು ಒಂಬತ್ತು ತಾಸಿಗೆ ಕತ್ತಲೆ ಬಂದು ಒಂದು ತುಸು ಹಳೆಯದಾಗುತ್ತದೆ. ಆದರೆ ಆ ವಿಚಾರ ಆತನಿಗಿದ್ದಿಲ್ಲ. ಆದರೆ ಆತ ವಿಚಾರಮಾಡಿದ. ಅಡ್ಡಿ ಇಲ್ಲ. ಸರಿ. ಆದರೆ ಏನು? ತನ್ನ ಪ್ರಶ್ನೆಯೂ ಮೂಡಿ ಮಾಯವಾಗುವ ಮೊದಲಿಗೇ ಅದಕ್ಕೆ ಉತ್ತರ ನೀಡುತ್ತ ಆತ ಆ ಹದ್ದಿಲ್ಲದ ಹಸಿರು ಏಕಾಂತದಲ್ಲಿ ಒಂದು ಕ್ಷಣ ನಿಂತ. ಅರಣ್ಯದಿಂದ ತನ್ನನ್ನು ಕಾಪಾಡಿಕೊಂಡಿದ್ದು ಆತ ಆ ಗಡಿಯಾರ, ಹೋಕಾಯಂತ್ರ ಮತ್ತು ಕೋಲು ಈ ಮೂರು ನಿರ್ಜೀವ ಸಾಮಾನುಗಳಿಂದಲೇ. ತನ್ನ ಗಡಿಯಾರ ಹೋಕಾಯಂತ್ರಗಳನ್ನು ಒಂದು ಪೊದರ ಮೇಲೆ ತೂಗುಹಾಕಿ ಕೈಗೋಲನ್ನು ಅದರ ಪಕ್ಕದಲ್ಲಿಯೇ ಅನಿಸಿಟ್ಟು ಆ ಪೊದರಿಗೆ ಪೂರ್ತಿ ಒಪ್ಪಿಸಿಬಿಟ್ಟನು.

ಕಳೆದ ಎರಡು ಮೂರು ತಾಸು ಆತ ಬಹು ವೇಗದಿಂದ ಸಾಗುತ್ತಿದ್ದಿಲ್ಲ. ಆತ ಅದಕ್ಕೂ ಹೆಚ್ಚು ವೇಗದಿಂದ ಹೋಗಲಿಲ್ಲ. ಏಕೆಂದರೆ ಎಷ್ಟೇ ವೇಗದಿಂದ ಹೋದರೂ ಅಂತರವು ಈಗ ಮಹತ್ವದಿದ್ದಿಲ್ಲ. ಈಗ ತನ್ನ ಹೋಕಾಯಂತ್ರವನ್ನು ಇಟ್ಟ ಮರದ ನಿಪಾತವನ್ನು ಇಟ್ಟುಕೊಳ್ಳಲು ಅಲ್ಲಿಗೆ ಬಂದು ಮುಟ್ಟುವಂತೆ ಒಂದು ವರ್ತುಳವನ್ನು ಸುತ್ತಲು, ಅಥವಾ ಅದನ್ನು ಛೇದಿಸಿ ಹಾಯ್ದುಹೋಗಲು ಆತ ಯತ್ನಿಸುತ್ತಿದ್ದ. ಈಗ ದಿಕ್ಕಿಗೂ ಮಹತ್ವವಿದ್ದಿಲ್ಲ. ಈಗ ಆ ಮರ ಅಲ್ಲಿ ಇದ್ದಿಲ್ಲ. ಆಗ ಆತ ಸ್ಯಾಮ ಕಲಿಸಿದಂತೆ ಮಾಡಿದ. –ಮೊದಲಿನ ವರ್ತುಳದ ವಿರುದ್ಧ ನಿಟ್ಟಿಗೆ ಇನ್ನೊಂದು ವರ್ತುಳ ಸುತ್ತಿದೆ. ಆ ಎರಡೂ ಕೃತಿಗಳು ಒಂದನ್ನೊಂದು ಎಲ್ಲಿಯಾದರೂ ಛೇದಿಸುವಂತೆ. ಅದರೆ ಆಗಲೂ ಆತ ತನ್ನ ಪಾದಮುದ್ರೆಯನ್ನು ತಿರುಗಿ ಹಾಯಲಿಲ್ಲ. ಕೊನೆಗೂ ಆ ಮರವನ್ನು ಕಂಡರೂ ಅದು ಸ್ಥಳ ತಪ್ಪಿದಂತೆ ಇತ್ತು. ಅಲ್ಲಿ ಕರಡಿಯೂ ಇದ್ದಿಲ್ಲ. ಹೋಕಾಯಂತ್ರವೂ ಇದ್ದಿಲ್ಲ. ಗಡಿಯಾರವೂ ಇದ್ದಿಲ್ಲ. ಮತ್ತೆ ಮರ-ಆ ಮರವೂ ಇದ್ದಿಲ್ಲ. ಅಲ್ಲಿ ಒಂದು ಅಡ್ಡ ಬಿದ್ದ ತೊಣೆಯಿತ್ತು. ಆಗ ಸ್ಯಾಮ್ ಕಲಿಸಿಕೊಟ್ಟನಂತರದ ಹಾಗೂ ಕೊನೆಯ ಸಂಗತಿ ಆತ ಮಾಡಿದನು.

ಆ ತೊಣೆಯ ಮೇಲೆ ಕೂತಾಗ ಆತ ಆ ಸೊಟ್ಟ ಹೆಜ್ಜೆಯ ಗುರುತು ಕಂಡ.- ಆ ಮುದುಡಿದ ಪ್ರಚಂಡ ಹೆಬ್ಬೆರಳಿನ ಕುರುಹು-ಆತ ನೋಡುತ್ತಿದ್ದಂತೆ ನೀರು ತುಂಬಿ ನಿಂತ ಕುರುಹು. ಆತ ತಲೆಯೆತ್ತಿ ನೋಡಿದಾಗ ಆ ಕಗ್ಗಾಡು ಒಂದಾಯಿತು; ಹೆಪ್ಪುಗಟ್ಟಿತು- ಆ ಕಣಿವೆ, ಆತ ಹುಡುಕಿದ ಆ ಮರ, ಆ ಕಂಟ, ಸೂರ್ಯನ ಕಿರಣವು ಸೋಂಕಿನಲ್ಲಿ ಲಕಲಕ ಹೊಳೆಯುವ. ಆ ಗಡಿಯಾರ ಮತ್ತು ಹೋಕಾಯಂತ್ರ ಎಲ್ಲವೂ ಒಂದಾಗಿ ಬೆರೆತವು. ಆಗ ಆತ ಆ ಕರಡಿಯನ್ನು ಕಂಡ. ಅದು ಹೊರಬರಲಿಲ್ಲ; ತೋರಿಬರಲಿಲ್ಲ. ಅದು ಬರೇ ಅಲ್ಲಿ ಇತ್ತು- ನಿಶ್ಚಲ, ಜಡಸ್ಥಿರ ದೃಷ್ಟಿಯದಾಗಿ. ಗಾಳಿಯಿಲ್ಲದ ನಡುಹಗಲಿನ ಆ ಹಸಿರು ಜಾಗದಲ್ಲಿ ಆತ ಕನಸಿನಲ್ಲಿ ಕಂಡಷ್ಟು ದೊಡ್ಡದಾಗಿ ಅಲ್ಲ, ಆತ ಅಂದಾಜು ಕಟ್ಟಿದಷ್ಟು ದೊಡ್ಡದಾಗಿ, ಆ ಹಿನ್ನೆಲೆಯ ತಾನದಲ್ಲಿ ಇನ್ನೂ ದೊಡ್ಡದಾಗಿ, ಆಯ ಅಳತೆಗಳನ್ನು ಮೀರಿ ಆ ಮರಡಿಯ ಮೇಲೆ ಕೂತ ಆತನ ಕಡೆಗೆ ಅದು ಸ್ಪಸ್ಥವಾಗಿ ನೋಡಿತು. ಆತನೂ ಅದರ ಕಡೆಗೆ ತಿರುಗಿ ನೋಡಿದ.

ಮತ್ತೆ ಅದು ಹೊರಟಿತು. ಏನೂ ಸದ್ದು ಮಾಡಲಿಲ್ಲ. ಏನೂ ತ್ವರೆ ಮಾಡಲಿಲ್ಲ. ಒಂದು ಕ್ಷಣ ಉರಿಬಿಸಿಲಿನ ಪೂರಾ ಥಳಕಿನಲ್ಲಿ ನಡೆದು ಬಂದು ನಿಂತು ಆ ಕಣಿವೆಯನ್ನು ಅಡ್ಡಹಾಯಿತು. ಆಚೆಯ ಬದಿಯನ್ನು ಸೇರುವಾಗ, ಮತ್ತೊಮ್ಮೆ ನಿಂತು ತನ್ನ ಹೆಗಲ ಮೇಲಿನಿಂದ ಕಣ್ಣು ಹೊರಳಿಸಿ ಆತನ ಕಡೆಗೆ ನೋಡಿತು, ಆ ನಡುವೆ ತನ್ನ ಸದ್ದಿಲ್ಲದ ಉಸಿರು ಮೂರು ಒಳಹೊರಗೆ ನಿಡಿದಾಗಿ ಸುಯ್ದಿತು.

ಇನ್ನೇನು, ಅದು ಹೋಗಿಯೇ ಬಿಟ್ಟಿತು. ಅದು ಕೆಳಪೊದೆಗಳ ಜಂಗಲಿನ ಜಾಳಿಗೆಯಲ್ಲಿ ನುಗ್ಗಿ ನಡೆಯಲಿಲ್ಲ. ಬರೇ ಮಾಯವಾಗಿಬಿಟ್ಟಿತು, ಆ ಕಗ್ಗಾಡಿನ ಒಳ ಆಳಕ್ಕೆ! ಆತ ಒಮ್ಮೆ ನಿರೀಕ್ಷಿಸಿದ ಒಂದು ದೊಡ್ಡ ಸ್ಥೂಲ ಮೀನು ಅಳವಾದ ಕರ್ಮಡುವಿನಲ್ಲಿ ರೆಕ್ಕೆ ಕೂಡ ಬೀಸದೆ ತಳಕ್ಕೆ ಸರಿದು ಕಾಣದಾದಂತೆ!

ಇನ್ನು ಮುಂಬರುವ ಚಳಿಗಾಲಕ್ಕೆ. ಆತ ಅಂದುಕೊಂಡ. ಆದರೆ ಮುಂದಿನ ಚಳಿಗಾಲಕ್ಕೆ ಆಗಲಿಲ್ಲ. ಅದರ ಮುಂದಿನದಕ್ಕೂ ಅಲ್ಲ; ಅದರ ಮುಂದಿನದಕ್ಕೂ

ಆಗಲಿಲ್ಲ. ಈಗ ಆತನ ಪ್ರಾಯ ೧೪. ಆತ ಈಗ ಒಂದು ಗಂಡು ಚಿಗರೆಯ ಶಿಕಾರಿ ಮಾಡಿದ್ದ. ಸ್ಯಾಮ್ ಅದರ ಬಿಸಿನೆತ್ತರದಿಂದ ಆತನಿಗೆ ತಿಲಕ ಹಚ್ಚಿದ್ದ. ಮರುವರ್ಷ ಒಂದು ಕರಡಿಯನ್ನು ಆತ ಕೊಂದಿದ್ದ. ಇದೆಲ್ಲ ಸಂಭ್ರಮಕ್ಕಿಂತಲೂ ಮೊದಲಿನಿಂದ ಆತ ಅಷ್ಟೇ ಅನುಭವದ ಅಷ್ಟೇ ಹೆಚ್ಚಿನ ಪ್ರೌಢ ಗಂಡಸರಷ್ಟೇ ಆತ ಕಾಡಿನಲ್ಲಿ ಸಮರ್ಥ ಸಂಚಾರಿಯಾಗಿಬಿಟ್ಟಿದ್ದ. ಹದಿನಾಲ್ಕು ವರ್ಷ ಪ್ರಾಯಕ್ಕೆ, ಅದಕ್ಕೂ ಹೆಚ್ಚಿನ ಅನುಭವದವರಿಗಿಂತ ಹೆಚ್ಚಿನ ವನಚರನೆಂದು ಹೆಸರಾದ. ಶಿಬಿರದ ಮೂವತ್ತು ಮೈಲು ಆಚೆ ಈಚೆ ಅವನಿಗೆ ಗೊತ್ತಿಲ್ಲದ. ಗುರುತಿಲ್ಲದ ಯಾವ ಪ್ರದೇಶವೂ ಉಳಿಯಲಿಲ್ಲ- ಮಡುವು, ಮರಡಿ, ದರಿ, ದಾರಿ ಮತ್ತು ಗುರುತಿನ ಗಿಡಗಳು. ಯಾರನ್ನೂ ಯಾವದೇ ನಿಟ್ಟಿನಲ್ಲಿ ಯಾವದೇ ತಾಣಕ್ಕೆ ಅಡ್ಡತಿಡ್ಡ ಹೋಗದೆ ನೇರವಾಗಿ ಒಯ್ದು ಮುಟ್ಟಿಸಿ ತಿರುಗಿ ತರಬಲ್ಲವನಾಗಿದ್ದನು. ಸ್ಯಾಮ್ ಫಾದರ್ಸನಿಗೂ ಗೊತ್ತಿಲ್ಲದ ಬೇಟೆಯ ಗುರುತುಗಳು ಅವನಿಗೆ ಗೊತ್ತಾಗಿದ್ದವು. ಹದಿಮೂರನೇ ವರ್ಷ ಪ್ರಾಯದಲ್ಲಿಯೇ ಆತ ಒಂದು ಗಂಡು ಚಿಗರೆ ಮಲಗುವ ತಾಣವನ್ನು ಕಂಡುಹಿಡಿದಿದ್ದ. ಮತ್ತು ತಂದೆಗೆ ತಿಳಿಯದಂತೆ ವಾಲ್ಟರ್ ಇವೆಲ್ಲನ ರೈಫಲ್ ಎರವಲು ಪಡೆದು ಕಾದು ಕುಳಿತು ನಸುಕಿಗೆ ಆ ಚಿಗರೆ ಮಲಗಲು ಮರಳುವಾಗ ಗುಂಡಿಕ್ಕಿ ಕೊಂದಿದ್ದನು. ಹಳೆಯ ಚಿಕೆಸೊ ಪೂರ್ವಜರು ಹೇಗೆ ಬೇಟೆಯಾಡುತ್ತಿದ್ದರೆಂದು ಸ್ಯಾಮ್ ಅವನಿಗೆ ಹೇಳಿದ್ದನೊ ಹಾಗೆಯೆ ಮಾಡಿದ್ದ.

ಅದರೆ ಆ ಮುದಿ ಕರಡಿಯನ್ನಲ್ಲ. ಈವಾಗ ಅದರ ಹೆಜ್ಜೆಯ ಗುರುತು ತನ್ನ ಹೆಜ್ಜೆಗಿಂತ ಹೆಚ್ಚು ಪರಿಚಿತ ಅವನಿಗೆ–ಅದೂ ಮತ್ತೆ ಆ ಸೊಟ್ಟ ಹೆಜ್ಜೆಯೊಂದೇ ಅಲ್ಲ ಉಳಿದ ಮೂರು ಸರಿಯಾದ ಹೆಜ್ಜೆಗಳನ್ನೂ ಆತ ಗುರುತಿಸಬಲ್ಲ. ಒಂದರಿಂದ ಒಂದು ಬೇರೆಯಾಗಿ ಗೊತ್ತುಮಾಡಬಲ್ಲ; ಅದೂ ಬರೇ ಆಕಾರಮಾನದಿಂದಲ್ಲ. ಆ ಮೂವತ್ತು ಮೈಲಿನ ಸುತ್ತಿನಲ್ಲಿ ಅದರಷ್ಟೇ ದೊಡ್ಡ ಆಕಾರದ ಹೆಜ್ಜೆಗಳನ್ನು ಮೂಡಿಸಬಲ್ಲ ಬೇರೆ ಕರಡಿಗಳೂ ಇದ್ದವು. ಆದರೆ ಆ ಹೆಜ್ಜೆ ಅದೇನೊ ಬೇರೆಯಾಗಿತ್ತು. ಸ್ಯಾಮನು ಅವನ ಗುರುವಾಗಿದ್ದರೆ, ಶಿಬಿರದ ಹಿಂದಿನ ಅಂಗಳದ ಕಾಡು ಮೊಲಗಳೂ ಇಣಚಿಗಳು ಅವನ ಬಾಲವಿಹಾರ ಪಾಠಶಾಲೆಯಾಗಿದ್ದರೆ, ಈ ಹಳೆಯ ಕರಡಿಯು ಓಡಾಡುವ ಕಗ್ಗಾಡು

ಕಾಲೇಜು ಆಗಿತ್ತು. ಆ ಹಳೆ ಕರಡಿಯೋ ಆತನ ಮಹಾಮಾತೆ- ಮಡದಿ ಮಕ್ಕಳಿಲ್ಲದೆ ತನಗೆ ತಾನೇ ಅಯೋನಿಸಂಭವ ಸಂತತಿಯಂತೆ ಆದ ಆ ಕರಡಿ. ಆದರೆ ಆತ ಅದನ್ನು ಇನ್ನೊಂದೂ ಕಾಣಲಿಲ್ಲ. ಈಗಂತೂ ಆತ ಬಯಸಿದಲ್ಲಿ ಆ ಸೊಟ್ಟ ಹೆಜ್ಜೆಯ ಗುರುತು ಕಾಣಬಹುದಿತ್ತು–ಹದಿನೈದು ಹತ್ತು ಅಥವಾ ಐದು ಮೈಲಿಗೂ, ಕೆಲವೊಮ್ಮೆ ಅದಕ್ಕೂ ಸಮೀಪ, ಶಿಬಿರದ ಬಳಿಯಲ್ಲಿಯೇ. ಕಳೆದ ಮೂರು ವರ್ಷಗಳಲ್ಲಿ ಎರಡು ಸಲ ಆತ ಬೇಟೆಗಾಗಿ ನಿಂತಾಗ ನಾಯಿಗಳು ಅಕಸ್ಮಾತ್ ಯೋಗಾಯೋಗದಿಂದ ಆ ಕರಡಿಯು ಹಾದುಹೋದ ಹೆಜ್ಜೆ ಹಾದಿಯನ್ನು ಕಂಡುಹಿಡಿದದ್ದು ಆತ ಕೇಳಿದ. ಎರಡನೆಯ ಸಲ ಅವು ಎರಡು ವರ್ಷಗಳ ಹಿಂದಿನಂತೆಯೇ ಅಸಹಾಯವಾಗಿ ಉನ್ಮಾದದ ಉದ್ವೇಗದಲ್ಲಿ ಮಂದಿಯಂತೆ ಎತ್ತರದ ದನಿಯಲ್ಲಿ ಕೂಗುತ್ತ ಅದರಿಂದ ಹಾರಿ ದೂರ ಸರಿದಷ್ಟು ಕೇಳಿಬಂದಿತು. ಆದಾಗ್ಯೂ ಆ ಕರಡಿ ತಾನೇ ಕಂಡದಿಲ್ಲ. ಮೂರು ವರ್ಷಗಳ ಆಚೆಯ ಆ ಮಧ್ಯಾನ್ಹ ಅವನಿಗೆ ನೆನಪಾಗುತ್ತಿತ್ತು– ಆ ಕಣಿವೆ ಗಾಳಿಯಿಲ್ಲದ ನೆಳಲು ಬೆಳಕಿನ ಹಂಡಬಂಡ ಆ ಥಳಕಿನಲ್ಲಿ ಆ ಕರಡಿಯೂ ತಾನು ಒಬ್ಬರನ್ನೊಬ್ಬರು ದಿಟ್ಟಿಸಿ ದೃಢವಾಗಿ ನಿಂತ ಆ ಕ್ಷಣ. ಆಗ ಅವನಿಗೆ ಅನಿಸುತ್ತಿತ್ತು-ಅದೂ ಆಗಿರಲಿಕ್ಕಿಲ್ಲ. ಅದೂ ತನ್ನ ಒಂದು ಕನಸೇ ಇದ್ದಿತು. ಆದರೆ ಅದು ಒದಗಿದ್ದು ನಿಜ. ಅವರಿಬ್ಬರೂ ಒಬ್ಬರಿಗೊಬ್ಬರು ಕಂಡುಕೊಂಡದ್ದು ನಿಜ. ಪೃಥ್ವಿಯಷ್ಟೇ ಪ್ರಾಚೀನವಾದ ಆ ಕಗ್ಗಾಡಿನಿಂದ ಅವರಿಬ್ಬರೂ ಹೊರಪಟ್ಟು, ಅವರನ್ನು ಧರಿಸಿದ ಆ ಅಸ್ಥಿಮಾಂಸಗಳನ್ನು ಪ್ರೇರಿಸುವ ರಕ್ತಕ್ಕಿಂತಲೂ ಘನವಾದ ಯಾವದೋ ಶಕ್ತಿಯಿಂದ ಆ ಕ್ಷಣಕ್ಕೆ ಅವರಿಬ್ಬರನ್ನೂ ತಾದಾತ್ಮ್ಯಗೊಳಿಸಿತ್ತು. ಯಾವದೇ ಅಪಘಾತಕ್ಕೆ ನಿಃಶೇಷವನ್ನು ಹೊಂದುವ ಆ ಅಸ್ಥಿಮಾಂಸಗಳ ದುರ್ಬಲ ಹಂದರಕ್ಕಿಂತಲೂ ಹಚ್ಚು ಶಾಶ್ವತವಾದ ಒಂದು ತತ್ವವನ್ನು ಆ ಕ್ಷಣ ಸಮರ್ಥಿಸಿತ್ತು. ಪಂಥವನ್ನು ತೊಡಿಸಿತ್ತು. ಹೃದಯವನ್ನು ಕಲಕಿತ್ತು.

ಮತ್ತೊಮ್ಮೆ ಆತ ಅದನ್ನು ನೋಡಿದ. ಅದನ್ನುಳಿದು ಆತ ಬೇರೆ ಯಾತರ ವಿಚಾರವನ್ನೂ ಮಾಡುತ್ತಿರಲಿಲ್ಲ. ಆದ್ದರಿಂದ ಅದನ್ನು ಹುಡುಕಾಡುವದನ್ನು ಆತ ಮರೆತಿದ್ದ. ಈಗಲೂ ಆತ ವಾಲ್ಟರ ಇವೆಲ್ಲನ ರೈಫಲ್ ತೆಗೆದುಕೊಂಡೇ ಶಿಕಾರಿ

ಮಾಡುತ್ತಿದ್ದ. ಆ ಕರಡಿ ಕಣಿವೆಯ ಆ ಉದ್ದ ಗಾಳಿಕಿಂಡಿಯನ್ನು ಹಾಯುವದನ್ನು ಆತ ನೋಡಿದ. ಆ ಕಣಿವೆಯ ಕಿಂಡಿಯೊಳಗಿಂದ ಒಂದು ಬೆಟ್ಟದ ತೊರೆಹೊಯ್ದು ಹರಿದಿತ್ತು. ಅಲ್ಲಿಯ ಇದ್ದ ಬಿದ್ದ ಮರಗಳ ಕಾಂಡ ಹಾಗೂ ಟೊಂಗೆಗಳ ತೊಡಕುಗಳ ಮೇಲಿಂದ ಹಾರುವ ಬದಲು ಒಳಗಿಂದಲೇ ನುಸುಳಿ ನುಗ್ಗಿ ಉಗಿಬಂಡಿಯಂತೆ ಅದು ಓಡಿತು, ಅದು ಹೇಗೆ ಓಡಬಹುದೆಂದು ಆತ ಭಾವಿಸಿದ್ದನೊ ಅದಕ್ಕೂ ವೇಗದಿಂದ, ಚಿಗರೆಯಷ್ಟೇ ವೇಗದಿಂದ. ಆದರೆ ಚಿಗರೆ ಆದಷ್ಟು ಸಮಯ ಮೇಲೆ ಗಾಲಿಯಲ್ಲಿ ಕಳೆಯುತ್ತಿತ್ತು ನಾಗಾಲೋಟದಲ್ಲಿ. ಆತ ರೈಫಲ್ಲಿನ ಗುರಿನೋಟ ಸರಿಪಡಿಸಿಕೊಳ್ಳಲು ಕಣ್ಣಿಗೆತ್ತಿಕೊಳ್ಳುವುದಕ್ಕಿಂತಲೂ ವೇಗದಿಂದ ಅದು ನುಗ್ಗಿ ನಡೆಯಿತು. ತಾನು ಇನ್ನೂ ಗುಂಡಿಕ್ಕದೇ ಇರುವದಕ್ಕೆ ಕಾರಣ ಆ ಕರಡಿಯ ವೇಗದ ಮಾನದಲ್ಲಿ ಆತನ ಕೈಯ ಹಿಂದೆ ಬಿದ್ದದ್ದೇ ಸರಿ ಎಂದು ಅವನಿಗೆ ಗೊತ್ತಾಯಿತು. ಕಳೆದ ಮೂರು ವರ್ಷವೆಲ್ಲ ತನ್ನದು ಏನು. ಎಲ್ಲಿ ತಪ್ಪಿತೆಂಬುದು ಅವನಿಗೆ ಈಗ ಅರ್ಥವಾಯಿತು. ಒಂದು ಅಡ್ಡ ಮೊರಡಿನ ಮೇಲೆ ಆತ ಕುಳಿತನು. ಹಿಂದೆಂದೂ ಕಾಡನ್ನೂ ಕಾಡಿನಲ್ಲಿ ಅಷ್ಟು ರಭಸದಿಂದ ಓಡುವ ಪಶುವನ್ನೂ ನೋಡಿಲ್ಲವೋ ಎಂಬಷ್ಟು ಆತ ನಡುಗುತ್ತಿದ್ದ. ಸ್ಯಾಮನು ಹೇಳಿದ್ದ. ಆ ಕರಡಿ ಸ್ವತಃ ಮರುದಿನ ಸಿದ್ಧ ಮಾಡಿ ತೋರಿಸಿತು. ಮತ್ತ ಮೂರು ವರ್ಷಗಳ ಮೇಲೆ ಅದನ್ನೇ ಸಮರ್ಥಿಸಲಿಕ್ಕೆ ಅದು ಮರಳಿಬಂದಿತ್ತು. ಆದರೂ ಆ ಮಾತು ತಾನು ಹೇಗೆ ಮರೆತನೋ ಎಂದು ನಂಬಲಾರದ ಬೆರಗು ಅವನಿಗೆ!

ಈಗ ಅರ್ಥವಾಯಿತು ಆತನಿಗೆ, ಯೋಗ್ಯ ನಾಯಿಯ ಕುರಿತು ಸ್ಯಾಮ ಏನು ಹೇಳಿದನೆಂಬುದು. ನಾಯಿಯ ಆಕಾರ ಗಾತ್ರ ಮುಖ್ಯವಾದುದಲ್ಲ. ಅದ್ದರಿಂದ ಆತ ಏಪ್ರಿಲದಲ್ಲಿ ಒಬ್ಬನೇ ಮರಳಿದಾಗ ಜತೆಗೆ ಒಂದು ನಾಯಿಯನ್ನು ತಂದಿದ್ದ. ಏಪ್ರಿಲದಲ್ಲಿ ಶಾಲೆ ಮುಗಿದಿತ್ತು. ಆ ಮೂಲಕ ರೈತರ ಹುಡುಗರ ಹೊಲದ ನಾಟಿಗೆಲಸದಲ್ಲಿ ನೆರವಾಗುತ್ತಿದ್ದರು. ಕೊನೆಗೂ ತಂದ ಒಪ್ಪಿಗೆ ಕೊಟ್ಟಿದ್ದ- ಆತ ನಾಲ್ಕು ದಿನಗಳಲ್ಲಿ ಹಿಂತಿರುಗುವನೆಂಬ ಆಶ್ವಾಸನದ ಮೇಲೆ. ಈ ನಾಯಿ ಆತನದೇ ಸ್ವಂತ ಪ್ರಾಣಿ. ನಿಗ್ರೊ ಜನರು 'ಪೈಸ' ಎಂದು ಕರೆಯುವ ಒಂದು ಅಡ್ಡ ಜಾತಿಯದು. ನೋಡಲು ಒಂದು

ದೊಡ್ಡ ಹೆಗ್ಗಣಕ್ಕಿಂತ ಹೆಚ್ಚಿನ ಗಾತ್ರದಲ್ಲ. ಆದರೆ ತುಂಬ ಸಾಹಸದ ಜೀವ. ಆ ಸಾಹಸವೋ ಧೈರ್ಯವಾಗಿ ಬೆಳೆಯುವದು ಎಂದೋ ತಪ್ಪಿ ಹೋಗಿ ಕುರುಡು ದುಡುಕಿನ ಹುಂಬ ಹುಮ್ಮಸವಾಗಿಬಿಟ್ಟಿತ್ತು.

ನಾಲ್ಕು ದಿನಗಳು ಪೂರ್ತಿ ಹಿಡಿಯಲಿಲ್ಲ. ಮೊದಲನೆಯ ಮುಂಜಾವಿಗೇ ಆತ ಆ ಕರಡಿಯ ಹೊಸ ಹಾದಿಯನ್ನು ಕಂಡುಹಿಡಿದನು. ಇದು ಬೆಂಬತ್ತಿ ಹೋಗುವ ಹಾಗಾಗಿದ್ದಿಲ್ಲ. ಗತ್ತುಗಾರಿಕೆಯಿಂದಲೇ ಸಾಗಬೇಕಿತ್ತು. ಮನುಷ್ಯನೊಂದಿಗೆ ಹೇಗೋ ಆತ ಭೆಟ್ಟಿಯ ಹೊತ್ತನ್ನು ಗೊತ್ತುಪಡಿಸಿದ. ಎರಡನೆಯ ದಿನ ಮುಂಜಾನೆ ಆ ಅಡ್ಡ ಜಾತಿಯ ಹೆಗ್ಗಣ ನಾಯಿಯನ್ನು ಒಂದು ತಿನಿಸಿನ ಚೀಲದಲ್ಲಿ ಹೊದ್ದು ಬಡಿದು ಎರಡು ಬೇಟೆನಾಯಿಗಳನ್ನು ಒಂದು ನೇಣಿಗೆ ಕಟ್ಟಿ ತಂದ ಸ್ಯಾಮ ಫಾದರ್ಸನೊಂದಿಗೆ ಆ ಹೆಜ್ಜೆಯುಳ್ಳ ಹಾದಿಯಲ್ಲಿ ಗಾಳಿಗುಂಟ ಆತನು ಕಾದು ಕುಳಿತನು. ಈ ಸಲ ಅವರು ಕರಡಿಯ ಬಹಳ ಹತ್ತಿರದಲ್ಲಿದ್ದರು. ಆ ಕರಡಿ ಓಡದೇ ಅವರತ್ತ ಹೊರಳಿತು. ಅವರು ಬಿಚ್ಚಿ ಬಿಟ್ಟ ಆ 'ಫೈಸ್' ನಾಯಿಯು ಹೌಹಾರಿ ಕಂಗೆಟ್ಟು ಚೀರಿಕೊಂಡಿತು. ಮತ್ತು ಹಿಂಗಾಲ ಮೇಲೆ ನಿಂತು ಒಂದು ಮರದ ಕಾಂಡಕ್ಕೆ ಮೈಒತ್ತಿ ಜೀವದ ಹಂಗುಗೆಟ್ಟು ನಿಂತಿತು. ಹುಡುಗನಿಗೆ ಹೀಗನಿಸಿತು- ಈ ಪುಟ್ಟನಾಯಿ ಹೀಗೆಯೇ ಏರುತ್ತ ಎತ್ತರಕ್ಕೆ ಇನ್ನೂ ಎತ್ತರಕ್ಕೆ ತಡೆಯಿಲ್ಲದೇ ಏರುತ್ತ ನಿಲ್ಲುವದು ಮತ್ತೆ ಇದರ ಸಹವಾಸದಿಂದ ಉಳಿದೆರಡು ಬೇಟೆಯ ನಾಯಿಗಳೂ ನಿರಾಶೆಗೊಂಡು ಇದರ ಹಾದಿಯನ್ನೇ ಅನುಸರಿಸುವವು.

ಇಷ್ಟರಲ್ಲಿ ಆತನಿಗೆ ತಿಳಿದುಬಂದಿತು - ಆ ಪುಟ್ಟ ನಾಯಿ ಅಷ್ಟಕ್ಕೆ ನಿಲ್ಲುವದಿಲ್ಲವೆಂದು. ಈತ ತುಬಾಕಿಯನ್ನು ಕಳಗೆ ಬಿಸುಟಿ ಒಗೆದು ನಾಯಿಯ ಕಡೆಗೆ ಓಡಿದ. ಬೆನ್ನಟ್ಟಿ ಹಿಮ್ಮೆಟ್ಟಿ ತಡೆಗಟ್ಟಿ ಗರಗರನೆ ತಿಗರಿಯಂತೆ ತಿರುಗುವ ನಾಯಿಯನ್ನು ಬಿಗಿದು ಬಡಿಯುವಾಗ ತಾನು ನೇರವಾಗಿ ಆ ಕರಡಿಯ ಬಾಯಿಗೆ ಬಿದ್ದಂತೆಯೇ ಆತನಿಗೆ ಅನಿಸಿತು.

ಅದರ ಕಟುವಾಸನೆ ಬಿಸಿಯಾಗಿ, ಉಗ್ರವಾಗಿ ಅವನ ಮೂಗಿಗೆ ಬಡಿಯಿತು. ಕೆಳಗೆ ಅಡ್ಡ ಚಾಚಿ ಆತ ಕಣ್ಣೆತ್ತಿ ಅದರ ಕಡೆಗೆ ನೋಡಿದ, ಅದು ಅವನ ಮೇಲುಗಡೆ ತೂಗಾಡುತ್ತಿತ್ತು. ಸಿಡಿಯುವ ಗುಡುಗಿನಂತೆ ಗೋಪುರ ಗಟ್ಟಿ ನಿಂತಿತ್ತು. ತೀರ ಪರಿಚಿತ, ತಿಳಿಯಾದ ಶಾಂತಿಯುಕ್ತವಾದ ಪರಿಚಯವಿದ್ದ ಚಿತ್ರವದು. ಆಗ ಆತನಿಗೆ ನೆನಪಾಯಿತು. ಈ ಕರಡಿಯ ಕುರಿತು ಆತ ಕನಸು ಕಾಣುತ್ತಿದ್ದ ಬಗೆ ಇದೇ ಮಾದರಿಯದಾಗಿತ್ತು. ಇಷ್ಟಕ್ಕೆ ಅದು ಹೊರಟುಹೋಯಿತು. ಅದು ಹೋಗುವಾಗ ಆತ ಕಾಣಲಿಲ್ಲ. ಆ ಕಂಗೆಟ್ಟ 'ಫೈಸ್' ಕುನ್ನಿಯನ್ನು ಎರಡು ಕೈಗಳಿಂದ ಹಿಡಿದೆತ್ತಿ ಆತ ಮಂಡಿಯೂರಿ ಬಗ್ಗಿದ್ದ. ಭಂಗಪಟ್ಟ ಬೇಟೆಯ ನಾಯಿಗಳ ಆಕ್ರೋಶ ದೂರ ದೂರ ಸರಿಯುವದನ್ನು ಆತ ಕೇಳುತ್ತಿದ್ದ. ಆಗ ಸ್ಯಾಮ ಅಲ್ಲಿಗೆ ಬಂದ.

ಅವನು ಒಂದು ತುಬಾಕಿ ಹೊತ್ತಿದ್ದ. ಅದನ್ನು ಆ ಹುಡುಗನ ಪಕ್ಕದಲ್ಲಿ ಸುಮ್ಮನೆ ಬಿಟ್ಟು ಆತನ ಕಡೆಗೆ ನೋಡುತ್ತ ನಿಂತ, ಸ್ಯಾಮ.

“ಕೈಯಲ್ಲಿ ಕೋವಿ ಹಿಡಿದು ನೀನು. ಈವಾಗ ಎರಡು ಸಲ ಕರಡಿಯನ್ನು ನೋಡಿದೆ.” ಸ್ಯಾಮ ನುಡಿದ, “ಈ ಸಲವಾದರೂ ನೀನು ಅದನ್ನು ಹೊಡೆಯದೇ ಬಿಡಬಾರದಿತ್ತು.”

ಆ ಹುಡುಗ ಎದ್ದ. 'ಫೈಸ್' ನಾಯಿಯನ್ನು ಆಗಲೂ ಆತ ಹಿಡಿದೇ ಇದ್ದ. ಆತನ ತೋಳ ತೆಕ್ಕೆಯಲ್ಲಿದ್ದರೂ, ನೆಲದಿಂದ ಮೇಲಕ್ಕೆದ್ದರೂ ಆ ನಾಯಿ ಆ ಬೇಟೆ ನಾಯಿಗಳ ದೂರವಾಗುತ್ತಿದ್ದ ಕೋಲಾಹಲದ ಕಡೆಗೆ ಕಿವಿ ಚಾಚಿ ಮಿಸುಕಾಡುತ್ತಲೇ ಇತ್ತು. ಗಾಬರಿಗೆಟ್ಟು ತಂತಿಯ ಸ್ಪ್ರಿಂಗುಗಳ ಒಂದು ಹಿಳಲಿನಂತೆ ಕುಂಯ್‌ಗುಡುತ್ತಿತ್ತು. ಹುಡುಗ ತುಸು ಉಬ್ಬಸಪಡುತ್ತಿದ್ದ. ಆದರೆ ಈಗ ನಡುಕ ಗಿಡುಕ ಇದ್ದಿಲ್ಲ.

“ನಿನಗೂ ಶಕ್ಯವಿದ್ದಿಲ್ಲ” ಆತ ಅಂದ. “ನಮ್ಮ ಹತ್ತಿರವೂ ತುಬಾಕಿಯಿತ್ತು. ನೀನೂ ಹೊಡೆಯಲಿಲ್ಲ.” ..........

“ಹಾಗಾದರೆ, ನೀನು ಗುಂಡಿಕ್ಕಲಿಲ್ಲ” ಅವನ ತಂದೆ ಅಂದ. “ಎಷ್ಟು ಸಮೀಪದಲ್ಲಿದ್ದೆ ನೀನು?”

“ನನಗೆ ಗೊತ್ತಿಲ್ಲಪ್ಪಾ” ಹುಡುಗ ಅಂದ “ಆದರೆ ಅದರ ಬಲಹಿಂಗಾಲಿನ ಪಾದಲ್ಲಿ ಒಂದು ಡೊಡ್ಡ ಕಟ್ಟಿಗೆಯ ಚಕ್ಕೆ ಸಿಕ್ಕಿತ್ತು. ಅದನ್ನು ನಾನು ನೋಡಿದೆ. ಆದರೆ ಆಗ ನನ್ನ ಬಳಿ ತುಬಾಕಿಯಿದ್ದಿಲ್ಲ.”

“ಆದರೆ ನಿನ್ನ ಬಳಿ ತುಬಾಕಿಯಿದ್ದಾಗ ನೀನು ಅದನ್ನು ಹೊಡೆಯಲಿಲ್ಲ. ಅದೇಕೆ?” ತಂದೆ ಅಂದನು.

ಆತ ಅದಕ್ಕೆ ಉತ್ತರಿಸಲಿಲ್ಲ. ತಂದೆ ಅವನ ಉತ್ತರಕ್ಕಾಗಿ ಕಾಯಲೂ ಇಲ್ಲ. ಆ ಹುಡುಗ ಎರಡು ವರ್ಷಗಳ ಹಿಂದೆ ಕೊಂದ ಕರಡಿಯ ತೊಗಲು ನೆಲಕ್ಕೆ ಹಾಸಿತ್ತು. ಅದಕ್ಕೂ ದೊಡ್ಡ ಇನ್ನೊಂದು ತೊಗಲು-ಆ ಹುಡುಗ ಹುಟ್ಟುವ ಮೊದಲೇ ತಂದೆ ಕೊಂದ ಒಂದು ಕರಡಿಯದು-ಅದರ ಮುಂದೆ ಹಾಸಿತ್ತು. ಅದನ್ನು ಮೆಟ್ಟಿ ತಂದೆ ಕೋಣೆಯಲ್ಲಿ ಆಚೆಗೆ ಇದ್ದ ಪುಸ್ತಕಗಳ ಪಟ್ಟಿಗೆಯ ಕಡೆಗೆ ಹೋದನು. ಆ ಪೆಟ್ಟಿಗೆ, ಹುಡುಗ ಹೊಡೆದ ಮೊದಲನೆಯ ಚಿಗರೆಯ ಹಲಗೆಗೇರಿಸಿದ ತಲೆಯ ಕೆಳಗಡೆಗೆ ಇತ್ತು. ಅದೇ ಕೋಣೆಯೇ ತಂದೆಯ ಕಚೇರಿಯೂ ಆಗಿತ್ತು. ಅಲ್ಲಿ ಮೊದಲೇ ಆತನ ಹೊಲದೋಟಗಳ ಎಲ್ಲ ವ್ಯವಹಾರ ಸಾಗುತ್ತಿತ್ತು. ಎಲ್ಲಕ್ಕೂ ಹೆಚ್ಚಿನ ಹಾಗೂ ಮೆಚ್ಚಿಗೆಯ ಮಾತುಕತೆಗಳನ್ನೆಲ್ಲ ಆತ ಕಳೆದ ಹದಿನಾಲ್ಕು ವರ್ಷಗಳ ಕಾಲ ಅಲ್ಲಿಯೇ ಕೇಳಿದ್ದ. ಮೇಜರ್ ಡಿಸ್ಪೇನ್ ಅಲ್ಲಿಗೆ ಬರುತ್ತಿದ್ದ. ಕೆಲವೊಮ್ಮೆ ಮುದಿ ಜನರಲ್ ಕಾಂಪನ್ ವಾಲ್ಟರ್ ಇವೆಲ್ಲರೂ ಅಹುದು, ಮತ್ತು ಬೂನ್ ಹೊಗ್ಗೆನ್‌ಬೆಕ್, ಅಲ್ಲದೆ ಸ್ಯಾಮ್ ಫಾದರ್ಸ್ ಮತ್ತು ಜೆನ್ನಿಯ ಜೀವೆಟ ಏಕೆಂದರೆ ಅವರೆಲ್ಲರೂ ಶಿಕಾರಿಗಳ ಕಾಡನ್ನು, ಕಾಡಿನಲ್ಲಿ ಓಡಾಡುವ ಜೀವಿಗಳನ್ನು ಬಲ್ಲರು.

ಆ ಮಾತುಕತೆ ಈ ಹುಡುಗ ಬಹು ಮೌನವಾಗಿ ಕೇಳುತ್ತಿದ್ದ. ಆ ಕಗ್ಗಾಡು, ಹಿರಿಗಾಡು ಯಾವದೇ ಬರೆದಿಟ್ಟ ಇತಿಹಾಸಕ್ಕಿಂತಲೂ ಪ್ರಾಚೀನ, ಪುರಾತನ ಮತ್ತು ಪ್ರಚಂಡವಿತ್ತು. ಡಂಭದ ಬಿಳಿಯ ಮನುಷ್ಯ ತಾನು ಅವರ ಒಂದು ಚೂರುಪಾರು ಕೊಂಡುಕೊಂಡೇನೆಂದು ನಂಬುವಷ್ಟು ಜಂಬದವನಿದ್ದ ಅಥವಾ ಕಂದು ಇಂಡಿಯನ್ ತಾನು ಅದರ ಒಂದು ತುಂಡು ತುಣುಕನ್ನು ಕೊಡುವಷ್ಟು ತನ್ನದಾಗಿತ್ತೆಂದು ಭಾವಿಸುವಂಥ ನಿರ್ದಯಿಯಾಗಿದ್ದ.

ಆದರೆ ಇಬ್ಬರಿಗೂ ಮೀರಿ ಇತ್ತು ಆ ಮಹಾರಣ್ಯ. ಆ ಅಡವಿ ಬರೇ ಮನುಷ್ಯರದು-ಬಿಳಿಯರದೂ ಅಲ್ಲ, ಕೆಂಪರದೂ ಅಲ್ಲ- ಬರೇ ಮನುಷ್ಯರದು. ಸಹನೆ ಮಾಡುವಷ್ಟು ಹಟ ಮತ್ತು ಗಡಸುತನವಿದ್ದ ಹೆಣಗಾಡಿ ಬದುಕಿ ಉಳಿಯುವಷ್ಟು ಚಾತುರ್ಯ ಹಾಗೂ ನಮ್ರತೆಯುಳ್ಳ ಬೇಟೆಗಾರರದು; ಮತ್ತು ಅದರ ಹಿನ್ನೆಲೆಗೆ ಒಡೆದೆದ್ದು ಕಾಣುವ, ಅದರೊಡನೆ ಒಡನಾಡಿ ತೋರುವ ನಾಯಿಗಳದು, ಕರಡಿಗಳದು, ಚಿಗರೆಗಳದು. ಈ ಪ್ರಾಣಿಗಳಿಗೆ ಅಡವಿಯದೇ ಒತ್ತಾಯ ಮತ್ತು ನಿಯಮನ- ಅನಾದಿಯ ಅನಂತವಾದ ಮೇಲಾಟದಲ್ಲಿ ಆ ಬುನಾದಿಯ ಬಿಡುವಿಲ್ಲದ ಕಟ್ಟಳೆಗಳಲ್ಲಿ. ಈ ಕಟ್ಟಳೆಗೆ ಖತಿಯಿಲ್ಲ; ಚ್ಯುತಿಯಿಲ್ಲ. ಈ ಕುರಿತು ಆಡುವ ದನಿಗಳು ಶಾಂತ, ಭಾರವಾದವು, ತಿಳಿದು ತೂಗಿ ನುಡಿಯುವಂತಹದು, ನಿರಕಾಗಿ ನೆನಪಿಸಿಕೊಂಡು ಪುನರಾವಲೋಕನೆಯಲ್ಲಿ ಅಂತರ್ಮುಖವಾಗಿ ನೋಡುವಂತಹದು. ಆತ ಅದನ್ನು ಕೇಳುತ್ತ ಪ್ರಜ್ವಲಿಸಿ ಉರಿಯುವ ಬೆಂಕಿಯ ಬೆಳಕಿನಲ್ಲಿ ಕಾಲುಮಡಚಿ ಕೂತಿರುತ್ತಿದ್ದ– ತನ್ನಂತೆಯೇ ಕೂತಿದ್ದ ಜೆನ್ನಿಯ ಜಿಮ್ಮನ ಪಕ್ಕದಲ್ಲಿ. ಆ ಜಿಮ್ ಬೆಂಕಿಯಲ್ಲಿ ಇನ್ನಷ್ಟು ಚೆಕ್ಕೆಗಳನ್ನು ಹಾಕಲೂ ಗ್ಲಾಸಿನಿಂದ ಗ್ಲಾಸಿಗೆ ಸರಾಯಿ ಸೀಸೆಯನ್ನು ಸಾಗಿಸಲೂ ಮಾತ್ರ ಕದಲುತ್ತಿದ್ದ. ಸರಾಯಿಯ ಸೀಸೆ ಯಾವಾಗಲೂ ಇದ್ದೇ ಇರುತ್ತಿತ್ತು. ಶಿಕಾರಿಯಲ್ಲಿಯ ಎದೆಯ ಮಿದುಳಿನ ಧೈರ್ಯದ ಈ ಕಪಟದ ಮತ್ತು ವೇಗದ ಆ ಭಯಾನಕ ಕ್ಷಣಗಳ ಅರ್ಕಗಳ ಆ ಕಂದಿ ಬಣ್ಣದ ಪೇಯದಲ್ಲಿ ಭಟ್ಟಿ ಇಳಿಸಿದಂತಿತ್ತು. ಆ ಮದ್ಯ ಹೆಂಗಸರ ಹುಡುಗರ ಅಥವಾ ಮಕ್ಕಳಿಗೋಸ್ಕರ ಮಾಡಿದ್ದಲ್ಲ, ಬರೇ ಶಿಕಾರಿಗಳು ಅದನ್ನು

ಕುಡಿಯುತ್ತಿದ್ದು-ತಾವು ಚೆಲ್ಲಿದ್ದ ನೆತ್ತರದ್ದಲ್ಲ, ಅರಣ್ಯದ ಅಮರ ಚೇತನದ್ದೇ ಸಾರವನ್ನು, ಅದನ್ನು ಕುಡಿಯುವದೂ ಮಿತವಾಗಿ ನಮ್ರವಾಗಿ, ಕಪಟ ಕಸುವು ಮತ್ತು ಚಪಲತೆಯ ಗುಣಗಳನ್ನು ಪಡೆಯುವ ಕಾಡು ಪಾಷಂಡಿಯ ಆಸೆಬುರುಕುತನದಿಂದಲ್ಲ, ಇವೆಲ್ಲ ಗುಣಗಳಿಗೆ ಗೌರವ ವಂದನೆಯನ್ನು ಅರ್ಪಿಸುವ ಭಾವದಿಂದ.

ಅವನ ತಂದೆ ಒಂದು ಪುಸ್ತಕದೊಡನೆ ಮರಳಿ ತನ್ನ ಸ್ಥಳದಲ್ಲಿ ಕೂತುಕೊಂಡು ಅದನ್ನು ತೆರೆದನು. "ಇಲ್ಲಿ ಕೇಳು," ಆತ ಅಂದನು. ಅವನು ಐದು ಪದ್ಯಗಳನ್ನು ದೊಡ್ಡ ದನಿಯಲ್ಲಿ ಓದಿದನು. ಅವನ ದನಿ ಸ್ಪಷ್ಟವಾಗಿತ್ತು; ಶಾಂತವಾಗಿತ್ತು. ಹೇತುಪೂರ್ವಕವಾಗಿತು. ಆ ಕೋಣೆಯಲ್ಲಿ ಈಗ ಬೆಂಕಿಯಿದ್ದಿಲ್ಲ. ಏಕೆಂದರೆ ಈಗಾಗಲೇ ವಸಂತಋತು ಆರಂಭವಾಗಿತ್ತು. ಆಗ ತಂದೆ ತಲೆಯೆತ್ತಿದನು. ಹುಡುಗ ಆತನಲ್ಲಿ ಕಣ್ಣು ನಟ್ಟಿದ್ದನು. "ಸರಿ, ಈಗ ಕೇಳು," ತಂದೆ ನುಡಿದ. ಆತ ಮತ್ತೆ ಓದಿದನು. ಆದರೆ ಈ ಸಲ ಎರಡನೆಯ ಪದ್ಯವನ್ನು ಮಾತ್ರ, ಅದೂ ಅದರ ಕೊನೆಯ ಪಾದಗಳನ್ನು. ಮತ್ತೆ ಪುಸ್ತಕವನ್ನು ಮುಚ್ಚಿ ಬಳಿಯಲ್ಲಿದ್ದ ಮೇಜಿನ ಮೇಲೆ ಇರಿಸಿಬಿಟ್ಟನು.

**"ನೀನು ಸುಖವನು ಪಡೆಯದಿದ್ದರು**

**ಬಾಡಲಾರಳು ಆಕೆಯು**

**ಪ್ರೀತಿಸುವೆ ನೀನವಳನೆಂದಿಗು**

**ಇರುವಳಾಕೆಯು ಚಲುವೆಯು"**

"ಆತ ಒಬ್ಬ ಹುಡುಗೆಯ ಕುರಿತು ಮಾತನಾಡುತ್ತಿದ್ದಾನೆ." ಆ ಹುಡುಗ ಅಂದ.

"ಆತ ಏನನ್ನಾದರೂ ಮಾತನಾಡುತ್ತಿದ್ದ" ಎಂದೆ ಹೇಳಿದ, ಮುಂದುವರಿಯುತ್ತ "ಆತ ಮಾತನಾಡುತ್ತಿದ್ದುದು ಸತ್ಯದ ಕುರಿತು. ಸತ್ಯ ಪಲ್ಲಟಿಸುವದಿಲ್ಲ. ಸತ್ಯ ಒಂದೇ ವಸ್ತು.

ಅದು ಹೃದಯಸ್ಪರ್ಶಿಯಾದ ಎಲ್ಲ ವಿಷಯಗಳನ್ನೂ ಆವರಿಸುತ್ತದೆ– ಗೌರವ, ಅಭಿಮಾನ, ಕರುಣೆ, ನ್ಯಾಯ, ಧರ್ಯ ಮತ್ತು ಪ್ರೇಮ, ನಿನಗೆ ಈಗ ಗೊತ್ತಾಯಿತೆ?"

ಅವನಿಗೆ ಗೊತ್ತಿಲ್ಲ, ಗೊತ್ತಾಯಿತೋ ಇಲ್ಲವೆಂದು. ಹೇಗೋ ಆದ ಘಟನೆ ಇದಕ್ಕೂ ತೀರ ಸರಳವಿತ್ತು. ಬಂದು ಮುದಿ ಕರಡಿ ಭಯಾನಕ, ನಿರ್ಭಯ, ನಿರ್ದಯ, ಕೇವಲ ತಾನು ಬದುಕಿ ಉಳಿಯಬೇಕೆಂಬುದಕ್ಕೆ ಅಲ್ಲ, ಆದರೆ ಸ್ವಾತಂತ್ರ್ಯ ಸ್ವಾಧೀನತೆಗಳ ಭಯಂಕರ ದರ್ಪದಲ್ಲಿ. ಆ ಸ್ವಾತಂತ್ರ್ಯ ಸ್ವಾಧೀನತೆಗಳ ಬಗ್ಗೆ ಇಷ್ಟು ದರ್ಪ, ಅಭಿಮಾನ ಅವುಗಳಿಗೆ ಗಂಡಾಂತರದ ಭಯ ಬಂದುದನ್ನು ನೋಡಬೇಕು. ಅದು ಹೆದರಿಕೆ ಹೌಹಾರಿಕೆಯಿಲ್ಲದೆ ನೋಡಬೇಕು. ಆ ಸ್ವಾತಂತ್ರ್ಯ ಸ್ವಾಧೀನತೆಗಳ ರುಚಿ ಹೆಚ್ಚಿಸಲಿಕ್ಕೆಂದೇ ಅವನು ಬೇಕೆಂದೇ ಗಂಡಾಂತರಕ್ಕೆ ಒಡ್ಡುತ್ತಿದ್ದನು. ತನ್ನ ಕಸುವಿನ ಮುದಿ ಎಲುಬು ಮಾಂಸಗಳಿಗೆ ಚಪಲವೂ ಪುಷ್ಟವೂ ಆಗಿರುವಂತೆ ನೆನಪು ಕೊಡಲಿಕ್ಕೆ ಆ ಸ್ವಾತಂತ್ರ್ಯ ಸ್ವಾಧೀನತೆಗಳನ್ನು ಕಾದಿಡಲು, ಕಾದಾಡಲಿಕ್ಕೆ. ಇನ್ನೂ ಒಬ್ಬ ಮುದುಕ-ಕೆಂದು ಇಂಡಿಯನ್ ಪಾಳೆಯಗಾರ ಹಾಗೂ ನಿಗ್ರೋ ದಾಸಿಯರೀರ್ವರ ಒಬ್ಬ ಹುಡುಗ. ಒಂದು ಪೀಳಿಗೆಯಿಂದ ಆತ ಪಡೆದದ್ದು ಒಂದು ಜನಾಂಗ ಕಷ್ಟಭೋಗಗಳಲ್ಲಿ ಕಲಿತುಕೊಂಡ ನಮ್ರತೆ, ಆ ಕಷ್ಟಭೋಗವನ್ನೂ ಅನ್ಯಾಯವನ್ನೂ ಮೀರಿ ಬದುಕಿ ಉಳಿದ ಸಹನೆಯಲ್ಲಿ ಕಲಿತುಕೊಂಡ ಅಭಿಮಾನದರ್ಪ. ಇನ್ನೊಂದು ಪೀಳಿಗೆಯಿಂದ ಆತ ಪಾರಂಪರ್ಯವಾಗಿ ಪಡೆದದ್ದು ಆ ದೇಶದಲ್ಲಿ ಪ್ರಥಮ ನೆಲಸಿದವರಿಗೂ ಪ್ರಾಚೀನರಾದ ಜನರ ಇತಿಹಾಸ ಸಂಸ್ಕಾರ. ಆದರೆ ಈ ಜನ ಈಗ ಬದುಕಿ ಉಳಿದದ್ದು ಹಳೆಯ ನಿಗ್ರೋವಿನ ಪರಕೀಯ ರಕ್ತದ ಒಂಟಿನಂಟಿನ ಒಡಹುಟ್ಟಿನಲ್ಲಿ. ಮತ್ತು ಆ ಮುದಿ ಕರಡಿಯ ವನ್ಯವೂ ಅಗೋಚರವೂ ಆದ ಚೈತನ್ಯದಲ್ಲಿ. ಇನ್ನು ಉಳಿದದ್ದು ಒಬ್ಬ ಹುಡುಗ-ಕಗ್ಗಾಡಿನಲ್ಲಿ ಕುಶಲನೂ ಯೋಗ್ಯತಾವಂತನೂ ಆಗಿ ಬೆಳೆಯಬೇಕೆಂದು ವಿನಯವಿಧೇಯತೆಯನ್ನು ಕಲಿಯಲು ಬಯಸಿದವನು. ತಾನು ಇಷ್ಟೊಂದು ಕೌಶಲವನ್ನು ಇಷ್ಟು ಭರದಿಂದ ಕಲಿತನೆಂಬುದನ್ನು ಥಕ್ಕನೆ ಕಂಡುಕೊಂಡ. ಈ ಕೌಶಲ್ಯದಿಂದ ತಾನು ಯೋಗ್ಯನಾಗಲಿಕ್ಕಿಲ್ಲವೆಂದು ಆತ ಅಂಜಿದ. ಏಕಂದರೆ

ಪ್ರಯತ್ನಪಟ್ಟರೂ ಆತ ವಿನಯವನ್ನೂ ಅಭಿಮಾನವನ್ನೂ ಕೂಡಿಯೇ ಅರಗಿಸಿಕೊಂಡಿರಲಿಲ್ಲ. ಆದರೆ ಒಂದು ದಿನ ಒಬ್ಬ ಮುದುಕ-ವಿನಯ, ಅಭಿಮಾನ ಯಾವುದನ್ನೂ ವ್ಯಾಖ್ಯೆ ಮಾಡಿ ಹೇಳಲಾರದಂಥ ಮನುಷ್ಯ- ಅವನನ್ನು ಕೈಹಿಡಿದು ಒಯ್ದಂತೆ ಒಂದು ಮಟ್ಟಕ್ಕೆ ತಂದು ನಿಲ್ಲಿಸಿದ. ಅಲ್ಲಿ ಒಂದು ಮುದಿ ಕರಡಿ, ಒಂದು ಅಡ್ಡಜಾತಿಯ ಕುನ್ನಿ ಅವನಿಗೆ ಈ ಸಂಗತಿಯನ್ನು ವ್ಯಕ್ತಮಾಡಿ ತೋರಿಸಿದವು - ಅವೆರಡರಲ್ಲಿ ಒಂದನ್ನು ಪಡದರೂ ಎರಡನ್ನೂ ಪಡೆದಂತೆಯೇ.

ಅನೇಕ ತಂದೆಯರನ್ನು ಪಡೆದ ಹೆಸರಿಲ್ಲದ ಮಿಶ್ರಜಾತಿಯ ಚಿಕ್ಕ ನಾಯಿಯೊಂದಿತ್ತು. ಅದು ತುಂಬ ಬೆಳೆದಿದ್ದರೂ ಆರು ಪೌಂಡುಗಳಿಗಿಂತ ಹೆಚ್ಚು ಭಾರವಾಗಿದ್ದಿಲ್ಲ. ಅದು ತನ್ನಷ್ಟಕ್ಕೇ ಹೇಳಿಕೊಳ್ಳುತ್ತಿತ್ತು "ಯಾಕಂದರೆ ನನಗಿಂತ ಚಿಕ್ಕ ಪ್ರಾಣಿಯೇ ಇಲ್ಲ, ನಾನು ಅಪಾಯಕಾರಿಯಾಗಲಾರೆ. ನಾನು ಒರಲಿದರೆ ಬರೀ ಗದ್ದಲವೆನ್ನುವದರಿಂದ. ಹಾಗೆಯೂ ನಾನು ಭಯ ಹುಟ್ಟಿಸಲಾರೆ. ನೆಲಕ್ಕೆ ಮೊಳಕಾಲೂರುವಷ್ಟು ಹತ್ತಿರ ಇರುವದರಿಂದ ನಾನು ತೀರ ನಮ್ರನೂ ಆಗಲಾರೆ. ಗರ್ವದ ನೆರಳು ಚೆಲ್ಲುವವರ ಪರಿಚಯವೂ, ನಾನು ಅದರ ಸೋಂಕಿನ ಹೊರಗಿರುವುದರಿಂದ, ಗರ್ವವು ನನ್ನದಾಗಲಾರದು. ಅಮರವಾದ ಆತ್ಮವು ನನಗಿಲ್ಲವೆಂದು ನಿರ್ಧರಿಸಿರುವುದರಿಂದ ಸ್ವರ್ಗಪ್ರಾಪ್ತಿ ನನಗುಂಟೆಂದು ನಾನು ಹೇಳಲಾರೆ. ಆದ್ದರಿಂದ ನಾನೀಗ ಧೈರ್ಯದಿಂದ ನಡೆದುಕೊಳ್ಳಬಹುದು ಮಾತ್ರ. ಅದೇ ಈಗ ಸರಿ. ಅವರು ಇದನ್ನು ಗದ್ದಲವೆಂದು ಗದ್ದರಿಸಿದರೂ ನಾನು ಈಗ ಹಾಗೆ ಇರುವುದು ಸಾಧ್ಯ."

ಇದಿಷ್ಟೇ ಸಂಗತಿ. ತರುಣ ತರುಣಿಯರ ಕತೆಯೊಂದಿದೆ. ತರುಣನು ಅವಳ ತೀರ ಹತ್ತಿರಕ್ಕೆ ಹೋಗಲಾಗದಿದ್ದರೂ ಅವಳಿಂದ ಅಗಲಿ ಬಹು ದೂರ ಹೋಗುವ ಪರಿಸ್ಥಿತಿ ಬಾರದ್ದರಿಂದ ಅವಳ ಕುರಿತು ಗೋಳಿಡಲೇಬೇಕಾಗಿದ್ದಿಲ್ಲ. ಯಾರೋ ಹೇಳಿದ ಈ ಕತೆಗಿಂತಲೂ ವಿಷಯ ತೀರ ಸರಳವಾಗಿತ್ತು. ಅವನೊಂದು ಕರಡಿಯ ವಿಷಯವಾಗಿ

ಕೇಳಿದ್ದ. ಅದನ್ನು ಬೇಟೆಯಾಡುವಷ್ಟು ದೊಡ್ಡವನಾಗಿದ್ದ. ನಾಲ್ಕು ವರ್ಷಗಳ ಕಾಲ ಅದರ ಸುಳಿವನ್ನು ಹಿಡಿಯುತ್ತ ಕೊನೆಗೆ ತುಬಾಕಿ ಹಿಡಿದು ಅದನ್ನು ಎದುರಿಸಿದರೂ ಅವನು ಗುಂಡಿಕ್ಕಲಿಲ್ಲ. ಯಾಕಂದರೆ ಒಂದು ಚಿಕ್ಕ ನಾಯಿ - ಕರಡಿ ನಿಂತಲ್ಲಿಂದ ಇಪ್ಪತ್ತು ಯಾರ್ಡುಗಳ ಅಂತರವನ್ನು ಆ ಚಿಕ್ಕ ನಾಯಿ ದಾಟುವಷ್ಟರಲ್ಲಿ ಅವನು ಗುಂಡು ಹಾರಿಸಬಹುದಿತ್ತು. ಮುದಿ ಬೆನ್‌ನು ಹಿಂಗಾಲುಗಳ ಮೇಲೆ ನಿಂತಿದ್ದ. ಆ ಅನಂತ ಗಳಿಗೆಯಲ್ಲಿ ಯಾವಾಗಲೂ ಸ್ಯಾಮ್ ಫಾದರ್ಸ್‌ನು ಗುಂಡು ಹಾರಿಸಬಹುದಿತ್ತು. ಕೋಣೆಯ ವರ್ಣರಂಜಿತವಾದ ಸಂಜೆಯ ಬೆಳಕಿನಲ್ಲಿ ಅವನ ತಂದೆ ಅವನನ್ನು ಗಂಭೀರವಾಗಿ ನಿರೀಕ್ಷಿಸುತ್ತಿದ್ದನು. ಅವನು ಮಾತನಾಡಿದಾಗ ಅವನ ಮಾತುಗಳು ಆ ಸಂಜೆ ಬೆಳಕಿನಷ್ಟೇ ಶಾಂತವಾದವು. ಅವನು ದನಿಯೆತ್ತರಿಸಲಿಲ್ಲ. ಯಾಕಂದರೆ ಅವನು ಹೇಳಬೇಕೆಂದ ಮಾತುಗಳು ತಾಳಲೇಬೇಕೆಂದು ಇರಲಿಲ್ಲ. ಅವನ ತಂದೆ ಹೇಳಿದ "ಧೈರ್ಯ, ಮಾನ, ಅಭಿಮಾನ, ದಯೆ, ನ್ಯಾಯ ಮತ್ತು ಸ್ವಾತಂತ್ರ್ಯಪ್ರೀತಿ ಇವೆಲ್ಲವೂ ಹೃದಯಕ್ಕೆ ಮುಟ್ಟುತ್ತವೆ. ಹೃದಯದಲ್ಲಿ ನೆಲೆ ನಿಂತದ್ದೆಲ್ಲವೂ ಸತ್ಯವಾಗುತ್ತದೆ. ಅರ್ಥವಾಯಿತೆ?"

ಸ್ಯಾಮ್ ಮುದುಕ ಬೆನ್ ಮತ್ತು ನಿಪ್ ಇವರನ್ನು ಕುರಿತು ವಿಚಾರಿಸಿದ. ತನ್ನನ್ನು ಕುರಿತು ಕೂಡ. ಅವನು ಹೇಳಿದ್ದು ಸರಿಯಿತ್ತು. ಹಾಗೆ ಅವನ ತಂದೆ ಹೇಳಿದ್ದ "ಹೌದು" ಎಂದನವನು

## ಎಂಬ್ರೋಜ ಬಯರ್ಸ (೧೮೪೨-೧೯೧೪)

ಈತ ಹುಟ್ಟಿದ್ದು ಒಹಿಯೋದಲ್ಲಿ. ಯಾದವೀಕಲಹದಲ್ಲಿ ಅವನು ತೋರಿದ ಸಾಮರ್ಥ್ಯಕ್ಕಾಗಿ ಅವನನ್ನು ಸೈನ್ಯದಲ್ಲಿ ಗೌರವಿಸಲಾಗಿತ್ತು. ಯುದ್ಧದ ನಂತರ ಅವನು ಸೇನ್‌ಫ್ರಾನ್ಸಿಸ್‌ಕೋಕ್ಕೆ ಹೋದನು. ಅಲ್ಲಿ ಅನೇಕ ಸೇನ್‌ಫ್ರಾನ್ಸಿಸ್‌ಕೋ ವಾರಪತ್ರಿಕೆಗಳಲ್ಲಿ ಸಂಪಾದಕನಾಗಿ ಕೆಲಸ ಮಾಡಿದನು. ೧೮೭೨ರಲ್ಲಿ ಅವನು ಲಂಡನ್ನಿಗೆ ಹೋಗಿ ನಾಲ್ಕು ವರುಷಗಳ ಕಾಲ ಪತ್ರಿಕಾ ವ್ಯವಸಾಯವನ್ನು ಮುಂದುವರಿಸಿದನು. ಅವನು ಹೊರದೇಶದಲ್ಲಿದ್ದಾಗ ಅವನ ಮೊದಲ ಸಾಹಿತ್ಯ ಕೃತಿಯು ಪ್ರಕಟವಾಯಿತು. ಆತ ೧೮೭೬ರಲ್ಲಿ ಸೇನ್‌ಫ್ರಾನ್ಸಿಸ್ಕೋಕ್ಕೆ ಮರಳಿದನು. ಮತ್ತು ಮುಂದೆ ಸುಮಾರು ಇಪ್ಪತ್ತು ವರುಷಗಳ ಕಾಲ ಪತ್ರಿಕೆಗಳಲ್ಲಿಯೇ ಕೆಲಸ ಮಾಡಿದನು.

ಬಯರ್ಸನ ಕತೆಗಳು ಹೆಚ್ಚಾಗಿ ಭಯಾನಕವಾಗಿರುತ್ತವೆ. ಅಥವಾ ಅನೈಸರ್ಗಿಕ ಘಟನೆಗಳಿಂದ ಕೂಡಿರುತ್ತವೆ. ಅವನ ಕಥೆಗಳು ಮೆಚ್ಚುಗೆಯಾಗದೇ ಇರಬಹುದು. ಆದರೆ ಅವು ಮನದಲ್ಲಿ ಚಿರಸ್ಮರಣೀಯವಾಗಿ ಮನಸ್ಸಿನ ಮೇಲೆ ಪರಿಣಾಮವುಂಟುಮಾಡುತ್ತವೆ.

## ಔಲಕ್ರೀಕ ಸೇತುವೆಯಲ್ಲಿ ನಡೆದ ಘಟನೆ

ಉತ್ತರ ಅಲಬಾಮಾದಲ್ಲಿ ಒಂದು ರೈಲುದಾರಿಯ ಸೇತುವೆಯ ಮೇಲೆ ಒಬ್ಬ ವ್ಯಕ್ತಿಯು ಇಪ್ಪತ್ತು ಅಡಿ ಕೆಳಗೆ ನುಗ್ಗಿ ಹರಿಯುವ ನೀರನ್ನು ಬಗ್ಗಿ ನೋಡುತ್ತ ನಿಂತಿದ್ದನು. ಆತನನ್ನು ಹೆಡಮುರಿಗೆ ಕಟ್ಟಿದ್ದರು. ಒಂದು ಹಗ್ಗ ಅವನ ಕುತ್ತಿಗೆಯ ಸುತ್ತು ಸಡಿಲಾಗಿ ತೂಗುತ್ತಿತ್ತು. ಅದರ ಒಂದು ತುದಿಯನ್ನು ದಪ್ಪನಾದ ಮರದ ಅಡ್ಡ ಜಂತೆಗೆ ಕಟ್ಟಲಾಗಿತ್ತು. ಅವನ ಅಂಗಿಯ ಮಂಡಿಯ ಕೆಳತನ ಜೋತು ಬಿದ್ದಿತ್ತು. ರೈಲಿನ ಕಬ್ಬಿಣದ ಕಂಬಿಗಳನ್ನು ಹೊತ್ತಿರುವ ಅಡ್ಡ ಕೊರಡುಗಳು ಮೇಲೆ ಕೆಲವು ಬಿಡ ಹಲಗೆಗಳು ಇದ್ದವು. ಅವು ಅವನಿಗೂ, ಅವನನ್ನು ಗಲ್ಲಿಗೇರಿಸುವ ದಂಡಾಧಿಕಾರಿಗಳಿಗೂ ಕಾಲೂರಿ ನಿಲ್ಲಲು ಆಧಾರವಾಗಿದ್ದವು. ಆ ದಂಡಾಧಿಕಾರಿಗಳೋ ಫೆಡರಲ್ ಸೇನೆಯ ಇಬ್ಬರು ಗುಪ್ತಸೀಪಾಯಿಗಳಾಗಿದ್ದರು. ಅವರ ಸಾರ್ಜಂಟನಿಂದ ಅವರಿಗೆ ಅಧಿಕಾರ ಪ್ರಾಪ್ತವಾಗಿತ್ತು. ಆತ ದಂಡಿನಲ್ಲಿ ಅಲ್ಲದೇ ಮುಲ್ಕೀ ಅಧಿಕಾರದಲ್ಲಿ ನೇಮಕನಾಗಿದ್ದರೆ ನಗರದ ಉಪಾಧ್ಯಕ್ಷನ ಹುದ್ದೆಗೆ ಒಪ್ಪುವಂತಿದ್ದನು. ಅದೇ ಹಂಗಾಮಿ ವೇದಿಕೆಯ ಅಂದರೆ ಆ ಬಿಡಿ ಹಲಗೆಗಳ ಮೇಲೆ ತುಸು ದೂರದಲ್ಲಿ ಒಬ್ಬ ಸೈನ್ಯಾಧಿಕಾರಿ ತನ್ನ ಹುದ್ದೆಯ ಸಮವಸ್ತ್ರಗಳಲ್ಲಿ ಸಶಸ್ತ್ರನಾಗಿ ನಿಂತಿದ್ದನು. ಸೇತುವೆಯ ಎರಡೂ ತುದಿಗಳಿಗೆ ಒಬ್ಬೊಬ್ಬ ಕಾಪಿನ ಆಳು ತನ್ನ ರೈಫಲ್ "ಶಿಸ್ತಿನ ನಿಲುವಿ"ನಲ್ಲಿ ಸೆಟೆದು ಎತ್ತಿಹಿಡಿದು ನಿಂತಿದ್ದನು. 'ಶಿಸ್ತಿನ' ನಿಲುವಂದರೆ ರೈಫಲನ್ನು ಎಡ ಹೆಗಲ ಇದುರು ನೀಟಾಗಿ ಎತ್ತಿ ಅದರ ಕುದುರೆಯನ್ನು ಎದೆಯ ಮೇಲೆ ಅಡ್ಡ ಚಾಚಿದ ಮುಂಗೈಯ ಮಟ್ಟಕ್ಕೆ ಹಿಡಿದು ನಿಲ್ಲುವದು –ಇದೊಂದು ಉಪಚಾರದ ಅಸ್ವಾಭಾವಿಕ "ಪವಿತ್ರಾ" ಮೈ ಸೆಟೆದು ನಿಲ್ಲುವಂತೆ ಬಲವಂತಪಡಿಸುವ ನಿಲುವು. ಸೇತುವೆಯ ಆ ತುದಿಗೂ ಈ ತುದಿಗೂ ನಿಂತ ಆ ಇಬ್ಬರಿಗೆ ಸೇತುವೆಯ ಮಧ್ಯದಲ್ಲಿ ಏನು ನಡೆಯುತ್ತದೆಯೆಂಬುದು ತಿಳಿಯುವದು

ತಮ್ಮ ಕರ್ತವ್ಯವೆಂದು ಅನಿಸಿದಂತೆ ಕಾಣಲಿಲ್ಲ. ಅವರು ಬರೇ ಸೇತುವೆಯ ಮೇಲೆ ಅಡ್ಡ ಹಾಕಿದ ಹಲಗೆಯ ಎರಡೂ ತುದಿಗಳನ್ನು ಅಡ್ಡಗಟ್ಟಿ ನಿಂತಿದ್ದರು.

ಕಾವಲುಗಾರರಲ್ಲಿ ಒಬ್ಬನ ಹೊರತು ಬೇರೆ ಯಾರೂ ಕಣ್ಣಿಗೆ ಬೀಳುತ್ತಿದ್ದಿಲ್ಲ. ಆ ರೈಲುದಾರಿ ನೂರು ಗಜ ಅಡವಿಯಲ್ಲಿ ಹಾಯ್ದು ಮುಂದೆ ಮಗ್ಗಲಿಗೆ ತಿರುಗಿ ಮಾಯವಾಗುತ್ತಿತ್ತು. ಇಲ್ಲಿಂದ ಮುಂದೆ ಒಂದು ಅರಣ್ಯ ಠಾಣ್ಯವಿದ್ದಿರಬೇಕೆಂಬುವುದಕ್ಕೆ ಅನುಮಾನವಿಲ್ಲ. ಆ ಹೊಳೆಯ ಆಚೆಯ ದಂಡೆಯ ಬಯಲು ಭೂಮಿಯಾಗಿತ್ತು. ಆ ಬಯಲು ಮೆಲ್ಲನೆ ಏರಾಗಿ ಹೋಗಿ ನೆತ್ತಿಯಲ್ಲಿ ನೀಟಾಗಿ ನಿಂತ ಮರದ ತುಂಡುಗಳ ಪ್ರಾಕಾರ ಮುಕುಟವಿಟ್ಟುಕೊಂಡಂತೆ ಇತ್ತು. ಆ ಕಾಂಡಗಳಲ್ಲಿ ರೈಫಲ್‌ಗಳನ್ನು ಅಣಿಯಾಗಿ ಇಡಲು ಕಿಂಡಿಗಳಿದ್ದವು. ಒಂದೇ ಒಂದು ತೆರವು ಇದ್ದಲ್ಲಿ ಕಂಚಿನ ಫಿರಂಗಿಯೊಂದು ಮುಂದಕ್ಕೆ ಚಾಚಿ ಆ ಸೇತುವೆಯ ಪ್ರದೇಶವನ್ನು ರಕ್ಷಿಸುತ್ತಿತ್ತು. ಆ ಬಯಲು ಇಳಿಜಾರಿನ- ಅಥವಾ ಏರಿನಲ್ಲಿ ಮರದ ಕೋಟೆ ಮತ್ತೆ ಸೇತುವೆಯ ನಡುವೆ ಪ್ರೇಕ್ಷಕರಿದ್ದರು. ಒಂದೇ ಒಂದು ಕಾಲ್ದಳದ ಪಡೆ ಸಾಲಾಗಿ ಕವಾಯತಿನ 'ಆರಾಮಿನ' ಠೀವಿಯಲ್ಲಿ ಇತ್ತು. ತುಬಾಕಿಗಳನ್ನು ನೆಲಕ್ಕೆ ಊರಿ ನಳಿಕೆಗಳನ್ನು ಬಲ ಹೆಗಲಿಗೆ ತುಸು ಅಡ್ಡ ಆನಿಸಿ ಕೈಕಟ್ಟಿ ನಿಂತಿದ್ದರು. ಒಬ್ಬ ಲೆಫ್ಟನೆಂಟನು ಆ ಸೈನಿಕರ ಸಾಲಿನ ಬಲಕ್ಕೆ ನಿಂತಿದ್ದನು. ಆವನ ಕತ್ತಿಯ ಮೊನೆಯು ನೆಲಕ್ಕೆ ಊರಿತ್ತು. ಎಡಗೈ ಬಲಗೈ ಮೇಲೆ ಇಟ್ಟಿತ್ತು. ಸೇತುವೆಯ ನಟ್ಟನಡುವಿನ ಆ ನಾಲ್ಕು ಜನರ ಗುಂಪಲ್ಲದೇ ಬೇರೆ ಯಾವ ಮನುಷ್ಯನೂ ಸಮ್ಮುಖವಾಗಿ ಚಲಿಸುತ್ತಿದ್ದಿಲ್ಲ. ಆ ಕಾಲಾಳ್ಗಳ ಪಡೆಯು ನಿಶ್ಚಲ ದೃಷ್ಟಿಯಿಂದ ದುರುದುರನೆ ಮುಂದೆ ನೋಡುತ್ತ ಸೇತುವೆಗೆ ಸಮ್ಮುಖವಾಗಿ ಮುಖ ಮಾಡಿತ್ತು. ಹೊಳೆಯ ದಂಡೆಯತ್ತ ಮುಖಮಾಡಿ ನಿಂತ ಕಾಪಿನ ಆಳುಗಳು ಆ ಸೇತುವೆಯ ಶೋಭಗಾಗಿ ಕಡೆದು ನಿಲ್ಲಿಸಿದ ಮೂರ್ತಿಗಳಂತಿದ್ದರು. ಕ್ಯಾಪ್ಟನ್ನನು ಕೈ ಕಟ್ಟಿಕೊಂಡು ಮಾನವಾಗಿ ತನ್ನ ಕೈಕೆಳಗಿನವರ ಕೆಲಸಗಳನ್ನು ನಿರೀಕ್ಷಸುತ್ತಿದ್ದನು. ಅದರೆ ಯಾವ ಸನ್ನೆಯನ್ನೂ ಮಾಡಲಿಲ್ಲ. ಸಾವು ಇರುವದೇ ಅಂಥ ಸಾಮಾನ್ಯ ವ್ಯಕ್ತಿಯನ್ನು ಅದರೊಂದಿಗೆ ತೀರ ಪರಿಚಯವಿದ್ದುದರಿಂದ ಕೂಡ ಮನ್ನಣೆಯ ಉಪಚಾರದೊಡನೆ

ಬರಮಾಡಿಕೊಳ್ಳಬೇಕಾಗುವದು. ಸೈನ್ಯದ ಶಿಷ್ಟಾಚಾರದ ನಿಯಮಾವಳಿಯಲ್ಲಿ ಮೌನ ಮತ್ತು ನಿಶ್ಚಲತೆ ಅಂಥ ಆದರೋಪಚಾರದ ರೂಪಗಳು.

ಗಲ್ಲಿಗೇರಿಸಲ್ಪಡುವ ಕಾರ್ಯದಲ್ಲಿ ತೊಡಗಿದ ಪುರುಷನು ಸುಮಾರು ಮೂವತ್ತೈದು ವರ್ಷದವನಾಗಿ ತೋರುತ್ತಿದ್ದನು. ಅವನ ಉಡುಗೆಯಿಂದ ಅವನೊಬ್ಬ ಸಾಮಾನ್ಯ ಸಾಗುವಳಿಗಾರನೆಂಬುದು ತರ್ಕಿಸಬಹುದಿತ್ತು. ಅವನ ಮುಖಚರ್ಯೆ ಚೆನ್ನಾಗಿತ್ತು. ನೀಳವಾದ ಮೂಗು, ದೃಢವಾದ ಮುಖ, ಅಗಲವಾದ ಹಣೆ, ಅದರಿಂದ ಅವನ ಉದ್ದ ಕಪ್ಪು ಕೂದಲು ನೇರವಾಗಿ ಹಿಂದಕ್ಕೆ ಬಾಚಲಾಗಿತ್ತು. ಅವು ಅವನ ಕಿವಿಗಳ ಹಿಂದೆ ಅವನ 'ಫ್ರೊಕಕೋಟಿನ' ಕೊರಳ ಪಟ್ಟಿಯ ಮೇಲೆ ಬಿದ್ದಿದ್ದವು. ಆ ಕೋಟು ಅವನ ಮೈಗೆ ಮಾಟವಾಗಿ ಹಿಡಿಸಿತ್ತು. ಅವನು ಮೀಸೆ ಹೊತ್ತ ಗಂಡಸು. ಅಲ್ಲದೇ ಮೊನಚಾದ ಗಡ್ಡವೂ ಅವನಿಗಿತ್ತು. ಅದರೆ ಕಿವಿತನಕಲ್ಲ, ಮೀಸೆಗಳಿದ್ದಿಲ್ಲ. ಅವನ ಕಣ್ಣುಗಳು ವಿಶಾಲವಾಗಿದ್ದ ನರೆಗಪ್ಪು ಬಣ್ಣದವುಗಳಾಗಿದ್ದವು. ಅವುಗಳಲ್ಲಿ ತುಳುಕುವ ದಯಾ ಸ್ನಿಗ್ಧಭಾವ ಉರುಳಿನಲ್ಲಿ ಕೊರಳನ್ನಿಟ್ಟ ಯಾರ ಮುಖದಲ್ಲಿಯೂ ಕಾಣುವದು ಕಠಿಣವೇ. ಆತ ಒಬ್ಬ ಅಸಹ್ಯ ಕೊಲೆಗಡುಕನಿದ್ದಿಲ್ಲವೆಂಬುದು ಸ್ಪಷ್ಟವಿತ್ತು. ಸರ್ವ ಸ್ವತಂತ್ರವಾದ ಕಾಯಿದೆಯು ಗಲ್ಲಿಗೇರಿಸಲು ಅನುಕೂಲ ಮಾಡಿಕೊಡುತ್ತದೆ. ಎಂದ ಮೇಲೆ ಸಭ್ಯಗೃಹಸ್ಥರೂ ಅದಕ್ಕೆ ಹೊರಗಾದವರಲ್ಲ.

ಸಿದ್ಧತೆಗಳೆಲ್ಲ ಮುಗಿದವು. ಆ ಇಬ್ಬರು ಸಿಪಾಯಿಯರು ಬದಿಗೆ ಸರಿದು ನಿಂತರು. ಒಬ್ಬೊಬ್ಬರೂ ತಾನೂ ನಿಂತಿದ್ದ ಹಲಗೆಯನ್ನು ಎಳೆದು ದೂರ ಮಾಡಿದನು. ಸಾರ್ಜಂಟನು ಕ್ಯಾಪ್ಟನ್ನನಿಗೆ ಸಲಾಂ ಮಾಡಿ ತತ್‌ಕ್ಷಣ ಆ ಅಧಿಕಾರಿಯ ಹಿಂದುಗಡೆ ನಿಂತನು. ಆ ಅಧಿಕಾರಿಯು ಒಂದು ಹೆಜ್ಜೆ ಹಿಂದೆ ಸರಿದನು. ಈ ಚಲನವಲನಗಳು ಆ ಪ್ರಾಣದಂಡನೆಗೆ ಗುರಿಯಾದ ಪುರುಷನೂ ಸಾರ್ಜಂಟನೂ ಒಂದೇ ಹಲಗೆಯ ಎರಡು ತುದಿಗಳಿಗೆ ನಿಲ್ಲುವಂತೆ ಮಾಡಿದವು. ಆ ಹಲಗೆ ಸೇತುವೆಯ ಮೂರು ಅಡ್ಡ ಕೊರಡುಗಳ ಮೇಲೆ ಹಾಯ್ದಿತ್ತು. ಆ ಸಭ್ಯಗೃಹಸ್ಥನು ನಿಂತ ತುದಿ ನಾಲ್ಕನೇ ಕೊರಡನ್ನು

ಬಹುಮಟ್ಟಿಗೆ ಹೋಲುವಂತೆ ಇತ್ತು. ಈ ಹಲಗೆಯು ಕ್ಯಾಪ್ಟನನ ದೇಹಭಾರದಿಂದಲೇ ತನ್ನ ಸ್ಥಾನದಲ್ಲ ಕೂತಿತ್ತು. ಈಗ ಅದು ಸಾರ್ಜಂಟನ ಭಾರಕ್ಕೆ ಹಿಡಿದು ನಿಂತಿತು. ಆತನ ಒಂದು ಸನ್ನೆಗೆ ಈತನು ಬದಿಗೆ ಸರಿಯುವದೇ ತಡ ಆ ಹಲಗೆ ಕೆಳಗೆ ಜಾರುತ್ತಿತ್ತು. ಮತ್ತು ಆ ಮರಣ ಶಾಸನದ ಮನುಷ್ಯ ಎರಡು ಕೊರಡುಗಳ ನಡುವೆ ಇಳಿದು ತೂಗುತ್ತಿದ್ದನು. ಈ ವ್ಯವಸ್ಥೆ ಆತ ಪ್ರಶಸ್ತವೆಂದು ತೀರ್ಮಾನಿಸಿದ್ದನು. ಏಕೆಂದರೆ ಇದು ಪರಿಣಾಮಕಾರಿ ಇರುವಷ್ಟೇ ಸರಳವೂ ಆಗಿತ್ತು. ಆತನ ಮೋರೆಗೆ ಮುಸುಕು ಹಾಕಿದ್ದಿಲ್ಲ, ಕಣ್ಣ ಕಟ್ಟಿದ್ದಿಲ್ಲ. ಆತ ಒಂದು ಕ್ಷಣ ತನ್ನ ಆ ಅಸ್ಥಿರ ಪಾದಪೀಠದತ್ತ ನೋಡಿ ಮರುಕ್ಷಣ ತನ್ನ ಕಾಲ ಕೆಳಗೆ ಮರಳಿ ಉರುಳುತ್ತಿದ್ದ ಆ ಹೊಳೆಯು ಹುಚ್ಚು ರಭಸದಿಂದ ಕೊಚ್ಚಿ ಹರಿಯುವವರ ಕಡೆಗೆ ತನ್ನ ದೃಷ್ಟಿ ಹಾಯಿಸಿದನು. ಪ್ರವಾಹದ ಸೆಳತಕ್ಕೆ ಸಿಕ್ಕಿ ಕುಣಿಯುತ್ತಿದ್ದ ಮರದ ತುಂಡೊಂದು ಅವನ ಲಕ್ಷಣವನ್ನು ಸೆಳೆಯಿತು. ಮತ್ತು ಅವನ ಕಣ್ಣುಗಳು ಆ ತುಂಡನ್ನು ಆ ಪ್ರವಾಹದ ಗುಂಟ ಬಹು ದೂರದವರೆಗೂ ಹಿಂಬಾಲಿಸಿದವು. ಎಷ್ಟೊಂದು ನಿಧಾನವಾಗಿ ಚಲಿಸುವಂತೆ ತೋರುತ್ತಿತ್ತು! ಎಂಥ ಮಂದಪ್ರವಾಹ!

ತನ್ನ ಕೊನೆಯ ಗಳಿಗೆಯ ವಿಚಾರಗಳನ್ನು ಹೆಂಡತಿ ಮತ್ತು ಮಕ್ಕಳ ಮೇಲೆ ಏಕಾಗ್ರಗೊಳಿಸಲಿಕ್ಕೆ ಆತ ಕಣ್ಣು ಮುಚ್ಚಿಕೊಂಡನು. ಮುಂಜಾವಿನ ಸೂರ್ಯನಿಂದ ಬಂಗಾರದ ಸ್ಪರ್ಶವಾದ ಆ ನೀರು ಹೊಳೆಯಲ್ಲಿ ತುಸು ದೂರ ದಂಡೆಗಳ ಕೆಳಗೆ ಇನ್ನೂ ತೂಗಾಡುತ್ತಿರುವ ಮಂಜಿನ ಸುರುಳಿಗಳು, ಆ ಕೋಟೆ, ಆ ಸೈನಿಕರು, ಕುಣಿಯುವ ಮರದ ತುಂಡು - ಇವೆಲ್ಲ ಅವನ ಏಕಾಗ್ರತೆಗೆ ಭಂಗ ತರುತ್ತಿದ್ದವು. ಈಗ ಅವನಿಗೆ ಇನ್ನೊಂದು ಹೂಸ ಅಸ್ವಸ್ಥತೆಯ ಅರಿವು ಉಂಟಾಯಿತು. ತನ್ನ ವಿಚಾರಗಳ ನಡುವಿನಿಂದ ಭೇದಿಸಿಕೊಂಡು ಒಂದು ಧ್ವನಿ ಬರುತ್ತಿತ್ತು. ಆ ಸದ್ದನ್ನು ಅವನು ಅಲಕ್ಷಿಸಲೂ ಆರ, ಅರಿತುಕೊಳ್ಳಲೂ ಆರ. ಅದೊಂದು ತೀವ್ರವಾದ ಸುಸ್ಪಷ್ಟವಾದ ಲೋಹದ ಆಘಾತದಂತಹ ಸದ್ದು. ಕಮ್ಮಾರನ ಸುತ್ತಿಗೆ ಐರಣಿಯ ಮೇಲೆ ಬಡಿದಂಥ ಸದ್ದು ಅಂತಹದೇ ನಿನಾದ ಗುಣ, ಆ ಸದ್ದಿಗೆ ಬಹುದೂರದಿಂದ ಅಥವಾ ಬಹು ಹತ್ತಿರವಾಗಿ ಕೇಳುತ್ತಿರುವಂತಹ ಆ ಸದ್ದು ಏನಿರಬಹುದೆಂದು ಆಶ್ಚರ್ಯಗೊಂಡನು.

ಅದರ ಆವರ್ತ ನಿಯಮಿತವಾಗಿತ್ತು. ಮತ್ತೆ ಮತ್ತೆ ನಿಯಮಿತವಾಗಿ ಕೇಳಿಬರುತ್ತಿತ್ತು. ಆದರೆ ಎಷ್ಟು ನಿಧಾನವಾಗಿ!- ಚರ್ಚಿನಲ್ಲಿ ಬಡಿಯಲಾಗುತ್ತಿರುವ ಮೃತ್ಯು ಗಂಟೆಯಷ್ಟು! ಆತ ಪ್ರತಿ ಬಡಿತವನ್ನು ತಾಳ್ಮೆಯಿಂದ- ಅದೇಕೋ ಬಹು ಭಯದಿಂದ ಕಾಯುತ್ತಿದ್ದನು. ಕ್ರಮೇಣ ಬಡಿತಗಳ ನಡುವಿನ ಅವಧಿ ಹೆಚ್ಚು ಹೆಚ್ಚು ದೀರ್ಘವಾಗುತ್ತ ಹೋಯಿತು. ಈ ಕಾಲಹರಣ ಹುಚ್ಚು ಹಿಡಿಸುವಂತಹದೆನಿಸಿತು. ಚೂರಿಯ ಅಲಗಿನ ಇರಿತದಂತೆ ಅವು ಅವನ ಕಿವಿಯನ್ನು ನೋಯಿಸಿದವು. ತಾನು ಎಲ್ಲಿ ಗಟ್ಟಿಯಾಗಿ ಅರಚಿಬಿಡುವೆನೋ ಎಂದು ಆತ ಹೆದರಿದನು. ಆತ ಕೇಳುತ್ತಿದ್ದುದು ತನ್ನ ಕೈಗಡಿಯಾರದ 'ಟಿಕ್, ಟಿಕ್,' ನಿನಾದವನ್ನು.

ಆತ ಮುಚ್ಚಿದ ಕಣ್ಣನ್ನು ಮತ್ತೆ ತೆರೆದನು. ಪುನಃ ಕಂಡುದು ಅದೇ ಕೆಳಗೆ ಹರಿಯುವ ನೀರನ್ನು, “ನನ್ನ ಕೈಗಳನ್ನು ಬಿಡಿಸಿಕೊಳ್ಳಲು ಆಗುವಂತಿದ್ದರೆ...” ಆತ ಯೋಚಿಸಿದನು. ಈ ಉರುಳನ್ನು ಕಳಚಿ ಒಗೆಯುತ್ತಿದ್ದೆ. ಹಳ್ಳಕ್ಕೆ ಹಾರುತ್ತಿದ್ದೆ. ಹಳ್ಳದಲ್ಲಿ ಮುಳುಗಿದರೆ ತುಬಾಕಿಯ ಗುಂಡುಗಳಿಂದ ತಪ್ಪಿಸಿಕೊಳ್ಳಬಹುದಿತ್ತು. ರಭಸದಿಂದ ಈಜಿದರೆ ಆಚೆಯ ತೀರವನ್ನು ಸೇರಬಹುದಿತ್ತು. ಕಾಡನ್ನು ಹೊಕ್ಕು ಮನೆಗೆ ಪಾರಾಗಬಹುದಿತ್ತು. ನನ್ನ ಮನೆ ದೇವರ ದಯೆ- ದೊಡ್ಡದು. ಇವರ ದಂಡಿನ ಠಾಣ್ಯದ ಹೊರಗೆ ಇದೆ. ನನ್ನ ಹೆಂಡತಿ ನನ್ನ ಮಕ್ಕಳು ಇನ್ನೂ ಈ ದಾಳಿಗಾರರರ ಆಕ್ರಮಣ ಸೀಮೆಗಿಂತ ಬಹು ದೂರದಲ್ಲಿದ್ದಾರೆ. ಇಲ್ಲಿ ಶಬ್ದಗಳ ಮೂಲಕ ರೂಪಿಸಲಾದ ಭಾವನಾ ತರಂಗಗಳು ಆ ದುರ್ದೈವಿಯ ಮಿದುಳಿನಲ್ಲಿ ಒಂದೊಂದಾಗಿ ಒಡಮೂಡುವ ಬದಲು ಒಮ್ಮೆಲೇ ಮಿಂಚಿಹೋಗುಷ್ಟರಲ್ಲಿ ಕ್ಯಾಪ್ಟನನು ತಲೆಯಲ್ಲಾಡಿಸಿದನು. ಕೂಡಲೇ ಸಾರ್ಜಂಟನು ಬದಿಗೆ ಸರಿದು ನಿಂತನು.

೨

ವೈಟನ್ ಫರಕ್‌ಹಾರ ಒಬ್ಬ ಶ್ರೀಮಂತ ಬೇಸಾಯಗಾರ. ಅಲಬಾಮಾದ ಬಹಳ ಪ್ರತಿಷ್ಠವೂ ಹಳೆಯದೂ ಆದ ಮನೆತನದವನಾಗಿದ್ದನು. ಆತ ಒಬ್ಬ ಗುಲಾಮನ ಒಡೆಯನೂ ಇತರ ಗುಲಾಮರ ಒಡೆಯರಂತೆ ರಾಜಕಾರಣಿಯೂ ಆಗಿದ್ದನು. ಸ್ವಾಭಾವಿಕವಾಗಿಯೇ ಆತ ಮೂಲದ 'ಬೇರ್ಪಡೆಗಾರ'ನಿದ್ದನು. ಅಂದರೆ ಅಮೇರಿಕೆಯ ಸಂಯುಕ್ತ ಸಂಸ್ಥಾನ ಸಂಘದಿಂದ ತಮ್ಮ ಸಂಸ್ಥಾನಗಳನ್ನು ಹಿಂತೆಗೆಯಬೇಕೆಂದು ಪ್ರತಿಪಾದಿಸುವದರಲ್ಲಿ ಒಬ್ಬನಾಗಿದ್ದನು. ದಕ್ಷಿಣ ಸಂಸ್ಥಾನಗಳ ವ್ಯಾಜ್ಯದ ಪ್ರಶ್ನೆಗೆ ಆವೇಶದಿಂದ ಅಂಟಿಕೊಂಡವನಾಗಿದ್ದನು. ಅವನ ಅಂಕೆಯನ್ನು ಮೀರಿದ ಕೆಲವೊಂದು ಪರಿಸ್ಥಿತಿಯ ಮೂಲಕ- ಆ ಪರಿಸ್ಥಿತಿ ಏನೆಂಬುದು ಇಲ್ಲಿ ವಿವೇಚಿಸುವ ಅಗತ್ಯವಿಲ್ಲ. ಆತ ದಕ್ಷಿಣದ ಸಾಹಸಿಯಾದ ಸೇನೆಯಲ್ಲಿ ಸೇವೆ ಸಲ್ಲಿಸಲು ಆಗದೇ ಹೋಯಿತು. ಆ ಸೇನೆ ಮುಂದೆ ಕೊರಿಂಥದ ಪತನದ ದುರಂತದಲ್ಲಿ ಮುಕ್ತಾಯವಾದ ವಿನಾಶಕರವಾದ ದಂಡಯಾತ್ರೆಯಲ್ಲಿ ಹೋರಾಡಿತು. ಅದರೆ ಆತನು ಮಾತ್ರ ಗೌರವಗೇಡಿಯಾದ. ಪ್ರತಿಬಂಧದಲ್ಲಿ ಚಡಪಡಿಸುತ್ತ ತನ್ನ ಶಕ್ತಿಗಳಿಗೆ ಮುಕ್ತದ್ವಾರವನ್ನು ಮಾಡಿಕೊಡುವದರ ಸಲುವಾಗಿ ಬಲವಂತಪಡಿಸುತ್ತ-ಸೈನಿಕನ ವಿಶಾಲ ಜೀವನಕ್ಕಾಗಿ, ಖ್ಯಾತಿ ಗೌರವಗಳ ಸಂಧಿಗಾಗಿ ಹಾತೊರೆಯುತ್ತ ಹಿಂದೆ ಉಳಿದನು. ಆ ಸಂಧಿ ತನಗೂ ಯುದ್ಧಕಾಲದಲ್ಲಿ ಎಲ್ಲರಂತೆ ಬಂದೇ ಬರುವದೆಂದು ಆತ ಹಾರೈಸಿದ್ದನು. ಆತನಕ ಆತ ತನ್ನಿಂದ ಆಗುವದನ್ನೆಲ್ಲ ಮಾಡಿದರೂ ದಕ್ಷಿಣದವರ ಪಕ್ಷದ ನೆರವಿಗಾಗಿ ಆತ ನೆರವೇರಿಸಿದಷ್ಟು ಕೀಳಾದ ಕೆಲಸವೊಂದು ಇದ್ದಿಲ್ಲ. ಅಂಗೀಕರಿಸಲು ಅಸಾಧ್ಯವಾಗುವಷ್ಟು ಕೀಳಾದ ಕೆಲಸ ಒಂದೂ ಇದ್ದಿರಲಿಲ್ಲ. ಅಂಥ ಕೆಲಸ ಇಲ್ಲವೇ ಸಾಹಸ ಆತನ ನಾಗರಿಕ ಭೂಮಿಕೆಗೆ ಸರಹೋಗುವಂತೆ ಇದ್ದರೆ ಸರಿ. ಆತ ಯುದ್ಧ ದಲ್ಲಿ ಸೈನಿಕ; ಹೃದಯದಲ್ಲಿ ನಾಗರಿಕ ಮತ್ತು ಯುದ್ಧದಲ್ಲಿಯೂ ಪ್ರಣಯದಲ್ಲಿಯೂ ಏನೇ ಮಾಡಿದರೂ ಹೇಗೇ ನಡೆದರೂ ನ್ಯಾಯ-ಎಂಬ ಭಯಾನಕ ತತ್ವದ ಕೆಲವೊಂದಂಶವನ್ನಾದರೂ ಆತನು ವಿಶೇಷ ವಿಕಲ್ಪಗಳಿಲ್ಲದೆ ಒಳ್ಳೇ ವಿಶ್ವಾಸವಿರಿಸಿಕೊಂಡು ಒಪ್ಪಿಕೊಂಡು ಬಂದವನಾಗಿದ್ದನು.

ಒಂದು ಸಂಜೆ ಫರಕ್‌ಹಾರ ತನ್ನ ಹೆಂಡತಿಯೊಂದಿಗೆ ತನ್ನ ಆವಾರದ ದ್ವಾರದಲ್ಲಿ ಒಂದು ಕಗ್ಗ ಕಾಲ್ಮಂಚದ ಮೇಲೆ ಕೂತಿದ್ದನು. ಒಬ್ಬ ಸವಾರನು ಬಾಗಿಲಿಗೆ ಬಂದು ಕುಡಿಯಲು ನೀರು ಬೇಡಿದನು. ಫರಕ್‌ಹಾರನ ಹೆಂಡತಿ ತನ್ನ ಬಿಳಿ ಕೈಯಿಂದಲೇ ಆ ಸವಾರನಿಗೆ ನೀರು ಕೊಡಲು ಅತ್ಯಂತ ಹರ್ಷದಿಂದ ಸಿದ್ಧಳಾಗಿ ನೀರು ತರಲು ಎದ್ದು ಹೋದಳು. ಅಷ್ಟರಲ್ಲಿ ಆಕೆಯ ಗಂಡ ಆ ಧೂಳು ತುಂಬಿದ ಸವಾರನ ಹತ್ತಿರ ಹೋಗಿ ಯುದ್ಧರಂಗದ ವಾರ್ತೆಗಳನ್ನು ಒಳ್ಳೇ ಆಸ್ಥೆಯಿಂದ ವಿಚಾರಿಸಹತ್ತಿದ್ದನು.

"ಯಾಂಕರು ರೈಲುದಾರಿಯನ್ನು ಸರಿಪಡಿಸುತ್ತಾರೆ" ಆ ಸವಾರನು ಅಂದ. "ಮತ್ತು ಮುಂದೆ ದಾಳಿ ನಡಿಸಲು ಸಿದ್ಧತೆ ಮಾಡುತ್ತಿದ್ದಾರೆ.-ಅವರು ಔಲಕ್ರೀಕ ಸೇತುವೆಗೆ ತಲುಪಿದ್ದಾರೆ- ಅದನ್ನು ಸಂಪಡಿಸಿ ಆಚೆಯ ದಂಡೆಯ ಮೇಲೆ ಒಂದು ಮರದ ಆವಾರವನ್ನು ಕಟ್ಟಿ ನಿಲ್ಲಿಸಿದ್ದಾರೆ. ಸೇನಾಪತಿ ಒಂದು ಕಟ್ಟಪ್ಪಣೆ ಹೊರಡಿಸಿದ್ದಾರೆ- ಅದನ್ನು ಎಲ್ಲ ಕಡೆಗೆ ಅಂಟಿಸಿ ಜಾಹೀರುಪಡಿಸಿದ್ದಾರೆ- ರೈಲುದಾರಿ. ಅದರ ಸೇತುವೆ, ಸುರಂಗಮಾರ್ಗ ಇಲ್ಲವೇ ಉಗೆಬಂಂಡಿಗಳಿಗೆ ಆತಂಕ ಅಡೆ ತಡೆ, ಯಾರೇ ನಾಗರಿಕ ಉಂಟು ಮಾಡಿದರೆ ಅವನನ್ನು ವಿಚಾರಣೆಯ ವಿಲಂಬವಿಲ್ಲದೇ ಕೂಡಲೇ ಗಲ್ಲಿಗೇರಿಸಲಾದೀತು. ನಾನು ಆ ಅಜ್ಞಾಪತ್ರವನ್ನು ನೋಡಿದ್ದೇನೆ."

"ಔಲಕ್ರೀಕ ಸೇತುವೆ ಇಲ್ಲಿಂದ ಎಷ್ಟು ದೂರ?" ಪರಕ್‌ಹಾರ ಕೇಳಿದ.

"ಸುಮಾರು ಮೂವತ್ತು ಮೈಲು."

"ಆ ಕೋಡಿಯ ಆಚೆಯಲ್ಲಿ ದಂಡು ಯಾವುದೂ ಇಲ್ಲವೇ?"

"ಅರ್ಧ ಮೈಲು ಆಚೆಗೆ ರೈಲುದಾರಿಯ ಮೇಲೆ ಮುಂಗಾವಲಿನ ಪಡೆಯೊಂದಿದೆ. ಮತ್ತು ಸೇತುವಿನ ಆಚೆಯ ತುದಿಗೆ ಒಬ್ಬ ಕಾಪಿನ ಆಳು ನಿಂತಿರುತ್ತಾನೆ."

“ಅಲ್ಲ- ಹೀಗೆ ಕಲ್ಪನೆ ಮಾಡು- ಒಬ್ಬ ನಾಗರಿಕ, ಗಲ್ಲಿಗೇರುವದರ ಅಭ್ಯಾಸಿ, ಆ ಮುಂಗಾವಲಿನ ಪಡೆಯ ಕಣ್ಣು ತಪ್ಪಿಸಿ, ಆ ಕಾಪಿನ ಆಳಿನಿಂದ ಪಾರಾಗಿ ಬಂದರೆ ಆತ ಏನು ಮಾಡಬಲ್ಲ?”

ಸವಾರ ಆಲೋಚನೆ ಮಾಡಿದ. “ನಾನು ಒಂದು ತಿಂಗಳು ಹಿಂದೆ ಇದ್ದೆ. ಕಳೆದ ಚಳಿಗಾಲದ ಮಹಾಪುರವು ಸೇತುವಿನ ಆಚೆಯ ಕಟ್ಟಿಗೆಯ ಕಂಬಗಳಿಗೆ ತಾಗಿ ಬಹಳಷ್ಟು ಸೆಳುವಿನ ಸೌದೆಯ ರಾಶಿಯನ್ನು ಒಟ್ಟಿ ಇಟ್ಟದ್ದು ನಾನು ಆಗ ನೋಡಿದ್ದೆ. ಅದು ಈಗ ಒಣಗಿ ಬೆಂಡಾಗಿದೆ, ಹೊತ್ತಿಸಿದರ ನೆಣದಂತೆ ಉರಿದೀತು.”

ಅಷ್ಟರಲ್ಲಿ ಶ್ರೀಮತಿ ಫರಕ್‌ಹಾರಳು ನೀರು ತಂದಳು. ಸೈನಿಕ ಅದನ್ನು ಕುಡಿದ. ಆಡಂಬರದಿಂದ ಆಕೆಗೆ ನಮಸ್ಕಾರ ಮಾಡಿ ಆಕೆಯ ಯಜಮಾನನತ್ತ, ತಲೆದೂಗಿ ಕುದುರೆಯೋಡಿಸುತ್ತ ಹೊರಟುಹೋದ. ಒಂದು ತಾಸಿನ ನಂತರ ಕತ್ತರೆ ಕವಿದ ಮೇಲೆ ಆ ಸವಾರ ಆ ಬೇಸಾಯಗಾರನ ತೋಪನ್ನು ಉತ್ತರ ದಿಶೆಯಲ್ಲಿ ಮರಳಿ ಹಾಯ್ದುಹೋದ. ಆ ದಿಕ್ಕಿನಿಂದಲೇ ಮೊದಲು ಆತ ಬಂದಿದ್ದ, ಆತನು ಸಂಯುಕ್ತ ಸಂಘದ ಸರಕಾರಿ ಬೇಹಿನವನಾಗಿದ್ದನು.

೩

ಪೈಟನ್ ಫರಕ್‌ಹಾರ ನೇರವಾಗಿ ಸೇತುವೆಯೊಳಗಿಂದ ಕೆಳಗೆ ಬೀಳುತ್ತಿರುವಾಗಲೇ ಪ್ರಜ್ಞೆ ತಪ್ಪಿ ತೀರ ಮೃತಪ್ರಾಯನಾಗಿದ್ದ. ಈ ಅವಸ್ಥೆಯಿಂದ ಅವನು ಎಚ್ಚರವಾಗಿದ್ದು- ಅವನಿಗೆ ಎಚ್ಚರಬಂದದ್ದು ಎಷ್ಟೋ ಯುಗಗಳ ನಂತರ; ಹಾಗೇ ಅನಿಸಿತು ಅವನಿಗೆ. ಅವನ ಕೊರಳ ಮೇಲಿನ ಬಲವಾದ ನೋವಿನಿಂದ ಅದರ ಬೆನ್ನಿಗೇ ಅನುಭವಿಸಿದ ಉಸಿರು ಕಟ್ಟಿದಂಥ ಮುಗ್ಗಟ್ಟಿನಿಂದ, ತೀಕ್ಷ್ಣವೂ, ತೀವ್ರವೂ ಆದ ವೇದನೆಗಳು ಆತನ ಕುತ್ತಿಗೆಯಿಂದ ಕೆಳಗೆ ಅಂಗಾಂಗಗಳ ನರನಾಡಿಗಳ

ಎಳಎಳೆಯೊಳಗಿಂದಲೂ ಚಿಮ್ಮಿಚುಚ್ಚಿ ಪಸರಿಸಹತ್ತಿದವು. ಈ ನೋವುಗಳು ಒಳಗಿನ ನರಮಂಡಲಗಳ ಸ್ಫೋಟವಾದ ಸುಳಿಗಳ ಗುಂಟ, ಮಿಂಚುತ್ತಿರುವಂತೆ ಕಲ್ಪನೆಗೂ ಮೀರಿದ ವೇಗದಿಂದ ಮತ್ತೆ ಮತ್ತೆ ಹಬ್ಬುತ್ತಿರುವಂತೆ ಅನಿಸಿತು. ಅವನಿಗೆ ಅಸಹ್ಯ ಕಾವೇರುವಂತೆ ಮಾಡುವ ಮಿಡಿಯುವ ಬೆಂಕಿಯ ಹೊನಲುಗಳು ಹರಿದಾಡಿದಂತೆ ಅನಿಸಿತು. ತಲೆಯ ಮಟ್ಟಿಗೆ ಅವನಿಗೆ ನೆನಪುಳಿದಿದ್ದು ಒಂದೇ- ಅದೊಂದು ರಕ್ತ ಒತ್ತಿ ತುಂಬಿ ತುಳುಕುವ ಭಾರ. ಇವೆಲ್ಲ ವೇದನೆಗಳ ಜತೆಗೆ ವಿಚಾರಗಳ ಕ್ರಿಯೆ ಕೂಡಿದ್ದಿಲ್ಲ. ಅವನ ಸ್ವಭಾವದ ಬೌದ್ಧಿಕ ಭಾಗವು ಈಗಾಗಲೇ ಅಧಿಕ ಭಾಗವು ಈಗಾಗಲೇ ಅಧಿಕವಾಗಿ ಅಳಿದುಹೋಗಿತ್ತು. ಬರೇ ಅನಿಸಿಕೆಯ ಶಕ್ತಿ ಅವನಲ್ಲಿ ಉಳಿದಿತ್ತು. ಆ ಅನಿಸಿಕೆ ವೇದನೆ ಒಂದು ನರಕಯಾತನೆಯಾಗಿತು. ಗತಿಯ ಚಲನವಲನದ ಅರಿವು ಅವನಿಗಿತ್ತು. ತಾನೊಂದು ತೇಜೋಮೇಘದ ಸುತ್ತಿನಲ್ಲಿ ಇದ್ದೇನೆ. ಕೇವಲ ಅದರ ಬೆಂಕಿಯ ಕಂದವಾಗಿದ್ದೇನೆ. ಜಡವಸ್ತುವಿನ ಆಧಾರ ಆವರಣವೇನೂ ಇಲ್ಲದೇ ವಿಚಾರಕ್ಕೂ ನಿಲುಕದಂಥ ಆಂದೋಲನಗಳೊಳಗಿಂದ ಗಿರಕಿ ಹೊಡೆಯುವ ದೊಡ್ಡ ಲಂಬಕದಂತಿದ್ದೇನೆ- ಎಂದು ಅವನಿಗೆ ಭಾಸವಾಗುತ್ತಿತ್ತು. ಅನಂತರ, ಒಮ್ಮೆಲೇ ಭಯಂಕರ ಆಕಸ್ಮಿಕತೆಯಿಂದ ಅವನ ಸುತ್ತಲಿನ ಆ ಬೆಳಕಿನ ದೊಡ್ಡ ಕಲ್ಲೋಲದೊಡನೆ ಮೇಲಕ್ಕೆ ಸಿಡಿಯಿತು. ಭಯಾನಕ ಗರ್ಜನೆ ಅವನ ಕಿವಿಗಳನ್ನು ಗಡಚಿಕ್ಕಿತು. ಮತ್ತು ಎಲ್ಲವೂ ತಣ್ಣಗಾಯಿತು. ಕತ್ತಲಾಯಿತು. ವಿಚಾರದ ಶಕ್ತಿ ತಿರುಗಿ ಬಂದಿತು. ಆ ಹಗ್ಗ ಹರಿದಿತ್ತು. ತಾನು ಕೆಳಗೆ ಹಳ್ಳಕ್ಕೆ ಬಿದ್ದಿದ್ದೆನು, ಎಂದು ಅವನಿಗೆ ತಿಳಿಯಿತು. ಇನ್ನು ಹೆಚ್ಚಿನ ಕೊರಳು ಹಿಚುಕುವ ಬಿಗಿತ ಇದ್ದಿಲ್ಲ. ಕುತ್ತಿಗೆಯನ್ನು ಬಿಗಿದ ಉರುಳು ಈಗಾಗಲೇ ಅವನ ಉಸಿರು ಕಟ್ಟಿತ್ತು. ಮತ್ತು ಪುಪ್ಪುಸಗಳಿಗೆ ನೀರು ಸೇರದಂತೆ ಮಾಡಿತ್ತು. ಹೊಳೆಯ ತಳದಲ್ಲಿ ಗಲ್ಲಿಗೆ ಉರುಲುಬಿದ್ದು ಸಾಯುವದೇ?- ಈ ವಿಚಾರವೇ ಅಸಂಬದ್ಧ ಹಾಸ್ಯಾಸ್ಪದವೆನಿಸಿತು ಅವನಿಗೆ. ಆ ಕತ್ತಲೆಯಲ್ಲಿ ಅವನು ಕಣ್ಣು ಬಿಟ್ಟು ನೋಡಿದ. ಆದರೆ ಎತ್ತರ ಎಷ್ಟು ದೂರ, ಎಷ್ಟು ಕೈಮೀರಿದೆ! ಅವನು ಇನ್ನೂ ಮುಳುಗುತ್ತಲೇ ಇರಬೇಕು. ಏಕೆಂದರೆ ಆ ಬೆಳಕು ಇನ್ನೂ ಮಸಕು ಮಸುಕಾಗುತ್ತಲೇ ಇತ್ತು. ಕೊನೆಗೂ ಅದು ಒಂದು

ಮಿಣುಕು ಮಾತ್ರ ಉಳಿಯುವದು. ಆಗ ಅದು ಮತ್ತೆ ಬೆಳೆಯಲು ಬೆಳಗಲು ಹತ್ತಿತು. ತಾನೇ ನೀರಿನ ಮೇಲ್ಪಾತಳಿಗೆ ಏರಿ ಬರುತ್ತಿರುವದು ಅವನಿಗೆ ಗೊತ್ತಾಯಿತು. ಮನಸ್ಸಿಲ್ಲದ ಮನಸ್ಸಿಗೆ ಗೊತ್ತಾಯಿತು. ಏಕಂದರೆ ಈಗ ಅವನಿಗೆ ಸುಖವೆನಿಸಿತ್ತು. “ಗಲ್ಲಿಗೇರಿಸಿ ಮುಳುಗಿಸಲ್ಪಡುವದು.” ಆತ ಆಲೋಚಿಸಿದ. “ಇದೇನು ಅಷ್ಟು ಹಾಳಲ್ಲ. ಆದರೆ ನಾನು ಗುಂಡಿನೇಟು ಹೊಡೆಯಿಸಿಕೊಳ್ಳಲೊಲ್ಲೆ. ಅದು ನ್ಯಾಯವಲ್ಲ.”

ತಾನು ನಡೆಯಿಸಿದ ಹೆಣಗಾಟದ ಅರಿವು ಅವನಿಗೆ ಇದ್ದಿಲ್ಲ, ಆದರೆ ಮಣಿಕಟ್ಟುಗಳಲ್ಲಿ ಎದ್ದು ನೋವಿನುರಿಯಿಂದ ಅವನಿಗೆ ತಿಳಿದುಬಂತು, -ತನ್ನ ಕೈಗಳನ್ನು ತಾನು ಬಿಡಿಸಿಕೊಳ್ಳುತ್ತಿದ್ದನೆಂದು. ಆ ಹೆಣಗಾಟಕ್ಕೆ ಆತ ಲಕ್ಷ್ಯಗೊಟ್ಟನು. ಒಬ್ಬ ಡೊಂಬನ ಕಸರತ್ತನ್ನು ಅದರ ಪರಿಣಾಮದ ಕಡೆಗೆ ಆಸ್ಥೆ ಇರದೆ ಒಬ್ಬ ಆಲಸಿಗ ನೋಡುತ್ತಿದ್ದರೆ ಹೇಗೋ ಹಾಗೆ. ಎಂಥ ಉಜ್ವಲ ಪ್ರಯತ್ನ ಎಂಥ ಸಡಗರದ ಅತಿಮಾನುಷ ಸಾಮರ್ಥ್ಯ. ಆಹಾ! ಅದೊಂದು ಚಂದ ಯತ್ನವಾಗಿತ್ತು! ಬಾಪು! ನೇಣು ಕಳಚಿ ಬಿತ್ತು. ಅವನ ತೋಳುಗಳು ಬೇರೆಯಾದವು. ಮೇಲ್ಗಡೆಗೆ ತೇಲಿ ಬಂದವು. ತಿಳಿಯಾಗುತ್ತಿರುವ ಬೆಳಕಿನಲ್ಲಿ ಅವನ ಕೈಗಳು ಆಚೆ ಈಚೆ ಮಗ್ಗುಲಿಗೆ ಮಸುಮಸುಕಾಗಿ ಕಾಣತೊಡಗಿದವು. ಅವುಗಳನ್ನು ಆತ ಹೊಸ ಆಸ್ಥೆಯಿಂದ ನೋಡತೊಡಗಿದ. ಮೊದಲು ಒಂದು ನಂತರ ಇನ್ನೊಂದು. ಹೀಗೆ ಆ ಕೈಗಳು ಅವನ ಕೊರಳ ಉರುಲಿನ ಮೇಲೆ ಮುರದು ಬಿದ್ದವು, ಅದನ್ನು ಹರಿದೊಗೆದವು; ಭೀಕರ ಆವೇಶದಿಂದ ಬದಿಗೆ ಒತ್ತಿದವು. ಅದು ತೇಲುತ್ತ ಹೋಗುವಾಗ ನೀರ ಹಾವಿನಂತೆ ಕಂಡಿತು. “ಅದನ್ನು ಹಿಂದೆ ಸರಿಸು. ತಿರುಗಿ ಹಾಕಿಕೊ?” ತನ್ನ ಕೈಗಳಿಗೆ ಆತ ಹೀಗೆ ಕೂಗಿ ಹೇಳಿದಂತೆ ಅನಿಸಿತು. ಆ ಉರುಲು ಬಿಡಿಸಿಕೊಳ್ಳುವಾಗ ಆತ ಇದುವರೆಗೆ ಅನುಭವಿಸಿದಷ್ಟು ಪ್ರಖರ ನೋವು ಆತನಿಗೆ ಆಯಿತು. ಅವನ ಕುತ್ತಿಗೆ ಭಯಂಕರ ಶೂಲೆ ಅನುಭವಿಸಿತು. ಮೆದುಳಿಗೆ ಬೆಂಕಿ ಬಿದ್ದಂತೆ ಆಯಿತು. ಡವಡವಗುಡುತ್ತಿದ್ದ ಅವನ ಎದೆ ಒಮ್ಮೆಲೇ ನೆಗೆದು ಹಾರಿತು. ಅವನ ಬಾಯಿಯಿಂದ ಹೊರಗೆ ನುಗ್ಗಿ ಬರುವಂತೆ ಅನಿಸಿತು. ಅವನ ಇಡೀ ದೇಹ ಅಸಹನೀಯ ಯಾತನೆಯಿಂದ ನುಗ್ಗುನುಗ್ಗಾಯಿತು. ಆದರೆ ಅವನ ಕೈಗಳು ಅವನ

ಅಪ್ಪಣೆ ಪಾಲಿಸಲೇ ಇಲ್ಲ. ಅವು ಲಗುಬಗೆಯಿಂದ ಕಸುವಿನಿಂದ ನೀರಲ್ಲಿ ಬೀಸಿ ಬಡಿಯುತ್ತ ಅವನನ್ನು ಮೇಲೆ ಎತ್ತಿ ತರಹತ್ತಿದವು. ತನ್ನ ತಲೆ ನೀರ ಮೇಲೆ ಬಂದದ್ದು ಅವನಿಗೆ ಅನಿಸಿತು. ಬಿಸಿಲಿನಿಂದ ಅವನ ಕಣ್ಣುಗಳು ಕುಕ್ಕಿದವು. ಅವನ ಎದೆಯು ತನ್ನಾರೆ ಉಬ್ಬಿಕೊಂಡಿತು- ಸನ್ನಿಬಡಿದಂತೆ ಚಡಪಡಿಸುತ ಅವನ ಪುಪ್ಪುಸಗಳು ಉಸಿರನ್ನೊಮ್ಮೆ ಬಲವಾಗಿ ಎಳೆದುಕೊಂಡವು. ಆತನು ಮಿತಿಮೀರಿದ ಯಾತನೆಯನ್ನು ಅನುಭವಿಸಿದನು. ಚೀತ್ಕಾರ ಮಾಡುತ್ತ ನಿಟ್ಟುಸಿರುಗರೆದನು.

"ಈಗ ಆತನಿಗೆ ಪೂರ್ತಿ ಪ್ರಜ್ಞೆ ಬಂದಿತ್ತು. ಆತನ ಇಂದ್ರಿಯಗಳು ಸ್ವಭಾವಕ್ಕೆ ಮೀರಿ ತೀಕ್ಷ್ಣವಾಗಿದ್ದವು; ಜಾಗ್ರತವಾಗಿದ್ದವು. ಅವನ ಶರೀರದ ಒಳವ್ಯವಸ್ಥೆಯಲ್ಲಿ ಒದಗಿ ಬಂದ ಭಯಾನಕ ಕಲ್ಲೋಲದಲ್ಲಿ ಯಾವುದೇ ಒಂದು ಅಂಶ ಅವನ ಇಂದ್ರಿಯಗಳ ಪ್ರಜ್ಞೆಯನ್ನು ಒಮ್ಮೆಲೇ ಉನ್ನತಗೊಳಿಸಿದಂತೆ ಅತಿ ಸೂಕ್ಷ್ಮಗೊಳಿಸಿದಂತೆ ಆಗಿರಬೇಕು. ಆ ಮೊದಲು ಎಂದೂ ಆತ ಗಮನಿಸಿದಂಥ ಸಂಗತಿಗಳನ್ನು ಅವನ ಸಂವೇದನೆಗಳು ನಿರೂಪಿಸಹತ್ತಿದವು. ಮೋರೆಯ ಮೇಲೆ ಬಡಿಯುವ ಅಲೆಗಳ ಅನುಭವವಾಗುತ್ತಿತ್ತು. ಅವುಗಳ ಸದ್ದು ಬೇರೆ ಬೇರೆಯಾಗಿ ಅವನಿಗೆ ಕೇಳಿಸುತ್ತಿದ್ದವು. ಹೊಳೆಯ ದಂಡೆಯ ಅಡವಿಯತ್ತ ಅವನು ದೃಷ್ಟಿ ಬೀರಿದನು. ಅಲ್ಲಿಯ ಮರಗಳನ್ನು ಒಂದೊಂದಾಗಿ ನೋಡಿದನು. ಹಾಗೆಯೇ ಎಲೆಗಳನ್ನೂ ಎಲೆಯ ಮೇಲೆ ನರನಾರುಗಳನ್ನೂ ಅವುಗಳಲ್ಲಿ ಸರಿದಾಡುವ ಕ್ರಿಮಿಗಳನ್ನೂ, ಮಿಡಿತೆಗಳನ್ನು ಹೊಳೆಯುವ ಬಣ್ಣದ ನೊಣಗಳನ್ನೂ ರೆಂಬೆಯಿಂದ ರೆಂಬೆಗೆ ತಮ್ಮ ಜಾಳಿಗೆಯ ಜಾಡನ್ನು ಹಾಸುವ ನರೆಬಣ್ಣದ ಜೇಡಗಳನ್ನೂ ಅವನು ನೋಡಿದನು. ಲಕ್ಷಾಂತರ ಹುಲ್ಲ ಎಸಳುಗಳ ಮೇಲೆ ತೊಳಗುವ ಇಬ್ಬನಿಗಳ ಇಂದ್ರಧನುಷ್ಕಾಂತಿಯ ವರ್ಣಪಂಗ್ತಿಗಳನ್ನು ಅವನು ಗಮನಿಸಿದನು. ಪ್ರವಾಹದ ಸುಳಿಗಳ ಮೇಲೆ ಕುಣಿದಾಡುವ ಗುಂಗಾಡುಗಳು ಗುಂಯ್‌ಗುಡುವದನ್ನು ದೊಡ್ಡ ಚಿಕ್ಕೆಗಳ ರೆಕ್ಕೆ ಬಡಿತವನ್ನು ನೀರ ಜೇಡುಗಳ ಕಾಲ ತುಳಿತವನ್ನು -ದೋಣಿಗಳನ್ನೇ ಮೇಲೆತ್ತಿಕೊಂಡ ಹುಟ್ಟುಗಳಂತೆ ಇವಲ್ಲ ಸ್ಫುಟವಾದ ಸಂಗೀತವನ್ನು ರಚಿಸಿದವು. ಅವನ

ಕಣ್ಣೆದುರಿಗೇ ಒಂದು ಮೀನು ನೀರಿನಿಂದ ಮೇಲಕ್ಕೆ ನೆಗೆದು ಮರಳಿ ನೀರನ್ನು ಭೇದಿಸಿ ನುಗ್ಗುವ ಸದ್ದನ್ನು ಅವನು ಕೇಳಿದನು.

ಹೊಳೆಯು ಹರಿಯುವ ನಿಟ್ಟಿಗೆ ಮೋರಮಾಡಿ ಆತ ನೀರ ಮೇಲಕ್ಕೆ ಬಂದಿದ್ದ. ಒಂದು ನಿಮಿಷದಲ್ಲಿ ಈ ಪ್ರಪಂಚವೆಲ್ಲ ತನ್ನನ್ನೇ ಕೇಂದ್ರವಾಗಿಸಿಕೊಂಡು ಮೆಲ್ಲಗೆ ಒಂದು ಸುತ್ತು ತಿರುಗಿದಂತೆ ತೋರಿತು. ಅತ ಆ ಸೇತುವೆಯನ್ನೂ ಆಚೆಯ ಕೋಟೆಯನ್ನೂ ಸೇತುವೆಯ ಮೇಲಿನಿಂದ ಸೈನಿಕರನ್ನೂ- ಆ ಕ್ಯಾಪ್ಟನ್, ಆ ಸಾರ್ಜಂಟ, ಆ ಎರಡು ಕಾಪಿನ ಬಂಟರು, ತನ್ನನ್ನು ಗಲ್ಲಿಗೇರಿಸಿದ ಯಮದೂತರು - ಎಲ್ಲರನ್ನೂ ಕಂಡನು. ಅವರು ನೀಲಾಕಾರದ ಎದುರು ನಿಚ್ಚಳವಾದ ನೆಳಲುಗೊಂಬೆಗಳಿತಿದ್ದರು. ಅವರ ಆತನತ್ತ ಕೈಮಾಡಿ ಕೂಗಾಡುತ್ತಿದ್ದರು. ಕ್ಯಾಪ್ಟನ್ನನು ತನ್ನ ಪಿಸ್ತೂಲು ಹೊರತೆಗೆದಿದ್ದರು. ಆದರೆ ಗುಂಡು ಹಾರಿಸಲಿಲ್ಲ. ಉಳಿದವರು ನಿಃಶಸ್ತ್ರರಾಗಿದ್ದರು. ಅವರ ಚಲನವಲನವು ವಿಕಟವೂ ವಿಕರಾಳವೂ, ಆಕೃತಿಗಳು ದೈತ್ಯಾಕಾರವಾಗಿಯೂ ಕಂಡವು.

ಒಮ್ಮೆಲೇ ಒಂದು ಗುಂಡು ಹಾರಿಸಿದ್ದ ಸ್ಫೋಟವನ್ನು ಆತ ಕೇಳಿದನು- ಕಾಪಿನ ಆಳುಗಳಲ್ಲಿ ಒಬ್ಬನ ರೈಫಲ್ ಹೆಗಲಿಗೇರಿತ್ತು. ಅದರ ಕೊಳವೆಯ ಬಾಯಿಯಿಂದ ನೀಲಿಹೊಗೆಯ ಹಗುರಾದ ಮೋಡವೊಂದು ಹೊರಟಿತ್ತು. ನೀರಲ್ಲಿದ್ದ ಮನುಷ್ಯನು ಸೇತುವೆಯ ಮೇಲೆ ನಿಂತ ಮನುಷ್ಯನ ಕಣ್ಣು ರೈಫಲ್ಲಿನ 'ಕಣ್ಣು'ಗಳೊಳಗಿನಿಂದ ತನ್ನ ಕಣ್ಣುಗಳಲ್ಲಿ ನಟ್ಟ ದಿಟ್ಟಿಸುತ್ತಿರುವವನ್ನು ಕಂಡನು. ಆ ಗಣ್ಣು ನರೆಗಣ್ಣಾಗಿತ್ತು. ನರೆಗಣ್ಣು ಎಲ್ಲ ಕಣ್ಣುಗಳಿಗಿಂತಲೂ ಹೆಚ್ಚು ಚುರುಕು ಮತ್ತು ಪ್ರಸಿದ್ಧ ಗುರಿಕಾರರಿಗೆ ಕಣ್ಣು ನರೆಬಣ್ಣದವಿರುತ್ತದೆ – ಎಂದು ಎಲ್ಲೋ ಓದಿದ್ದು ಅವನಿಗೆ ನೆನಪಾಯಿತು. ಆದರೂ ಆ ಕಣ್ಣು ಗುರಿತಪ್ಪಿತ್ತು.

ಅಷ್ಟರಲ್ಲಿ ಒಂದು ಎಡಸುಳಿಯು ಫರಕ್‌ಹಾರನನ್ನು ಸುತ್ತಿತು. ಮತ್ತು ಅವನನ್ನು ಅರ್ಧ ಸುತ್ತು ತಿರುಗಿತು. ಅವನು ಮತ್ತೆ ಕೋಟೆಯ ವಿರುದ್ಧ ದಿಕ್ಕಿನ ದಂಡೆಯ ಮೇಲಿನ ಅಡವಿಯನ್ನು ನೋಡತೊಡಗಿದನು. ಒಂದು ಸ್ಪಷ್ಟ ಮರುದನಿಯ ಶಬ್ದವು

ಗುಡ್ಡಗಾಡಿನ ಜನರ ಸರಾಗರೀತಿಯದು ಅವನ ಬೆನ್ನಿಗೆ ಗಂಟೆಯಂತೆ ಕೇಳಬಂದಿತು. ಮತ್ತು ಬೇರೆ ಎಲ್ಲ ಸದ್ದುಗಳನ್ನು-ಅವನ ಏಗೆ ಬಡಿಯುವ ಅಲೆಗಳ ಸಪ್ಪಳವನ್ನು ಕೂಡ-ತಗ್ಗಿಸುವಂತೆ ನೇರದಲ್ಲಿ ನೀರಿನ ಆಚೆಯಿಂದ ಭೇದಿಸಿಬಂದಿತು. ಅವನು ಸೈನಿಕನಿದ್ದಿಲ್ಲ. ಆದರೂ ಆ ನಿದಾನವಾದ ಬುದ್ಧಿ ಪೂರ್ವಕವಾದ ಸರಾಗವಾದ ಶಬ್ದೋಚ್ಚಾರದ ಇಂಗಿತವನ್ನು ಅವನು ಮನಗಂಡನು. ಆಮಟ್ಟಿಗೆ ಸೈನ್ಯ ಶಿಬಿರಗಳಿಗೆ ಆಗಾಗ ಹೋಗಿ ಬಂದವನಾಗಿದ್ದನು. "ಪ್ರಾತರ್ವಿಧಿ"ಯಲ್ಲಿ ದಂಡೆಯ ಲೆಫ್ಟನಂಟ ಸಾಹೇಬನು ಭಾಗವಹಿಸಹತ್ತಿದನು. ಎಷ್ಟು ತಣ್ಣಗೆ ಕನಿಕರವೇನೂ ಇಲ್ಲದ - ತನ್ನ ಮಂದಿಯಲ್ಲಿ ಶಾಂತತೆಯನ್ನು ಸ್ಥಾಪಿಸುವಂತೆ ಸಮವೂ ಸ್ವಸ್ಥವೂ ಆದ ಧ್ವನಿಯಲ್ಲಿ - ಎಂಥ ಸರಿಯಾದ ತಾಲಬದ್ಧಲಯದಲ್ಲಿ ಆ ಕ್ರೂರ ಶಬ್ದಗಳು ಹೊರಬಿದ್ದವು. "ಸಾವಧಾನ, ಸೈನಿಕರೇ, ಶಸ್ತ್ರ ಹೆಗಲಿಗೇರಿಸಿರಿ. ಸಿದ್ಧರಾಗಿರಿ. ಗುರಿಯಿಡಿ. ಗುಂಡುಹಾರಿಸಿ."

ಫರಕ್‌ಹಾರ ನೀರೊಳಕ್ಕೆ ಇಳಿದನು. ಆದಷ್ಟು ಕೆಳಕ್ಕೆ ಸೇರಿದನು. ನೀರು ನೈಗರಾದ ಗರ್ಜನೆಯಂತೆ ಅವನ ಕಿವಿಯಲ್ಲಿ ಮೊರೆಯಿತು. ಆದರೂ ಅವನು ಗುಂಡುಹಾರಿಸುವ ಮಂದ ಗುಡುಗನ್ನು ಕೇಳಿದನು. ಮತ್ತೆ ಮೇಲ್ಭಾತಳಿಗೆ ಏರಿ ಅಲ್ಲಿ ಕೆಳಕ್ಕೆ ತೂಗಾಡುತ್ತ ಇರುವ ಹೊಳೆಯುವ ಲೋಹದ ವಿಚಿತ್ರವಾದ ತುಣಕುಗಳನ್ನು ನೋಡಿದನು. ಕೆಲವು ಅವನ ಮೋರೆಯ ಮೇಲೂ, ಕೆಲವು ಅವನ ಕೈಗಳ ಮೇಲೂ ಬಿದ್ದು ಮತ್ತೆ ಕೆಳಗೆ ನೀರೊಳಗೆ ಇಳಿಯಹತ್ತಿದವು. ಒಂದು ಅವನ ಕುತ್ತಿಗೆ ಮತ್ತು ಕೊರಳ ಪಟ್ಟಿಗಳ ನಡುವೆ ಸಿಲುಕಿತು. ಅದು ಅಸಹ್ಯ ಬಿಸಿಯಾಗಿತ್ತು. ಅವನ್ನು ಸೆಳೆದು ಒಗೆದುಬಿಟ್ಟನು.

ಉಸಿರಾಡುವದಕ್ಕೆ ಹಾತೊರೆಯುತ್ತ ನೀರಿನ ಮೇಲೆ ಬರುತ್ತಿರುವ ಆತನಿಗೆ ತಾನು ತುಂಬ ಸಮಯ ನೀರಿನೊಳಕ್ಕೆ ಉಳಿದಿದ್ದೇನೆಂಬ ಅರಿವಾಗಿತ್ತು; ಹೊಳೆಯ ಪ್ರವಾಹದಲ್ಲಿ ಕೆಳಗಡೆಗೆ ಸಾಕಷ್ಟು ದೂರ-ಸುರಕ್ಷಿತ ಸ್ಥಳಕ್ಕೆ ಬಂದಿದ್ದೇನೆಂದು ತಿಳಿದಕೂಡಲೇ ಅತ್ತ ಸೈನಿಕರು ತುಬಾಕಿಗಳನ್ನು ಮತ್ತೆ ಜಡಿದು ತುಂಬಿದರು. ಅವರ

ಜಡಿಗೋಲುಗಳು ಬಿಸಿಲಲ್ಲಿ ಲಕ್ಕನೆ ಹೊಳೆದವು. ಅವನ್ನು ತುಬಾಕಿಗಳ ಕೊಳವಿಗಳೊಳಗಿಂದ ಜಗ್ಗನೆ ಹೊರ ತೆಗೆದು ಗಾಳಿಯಲ್ಲಿ ಒಮ್ಮೆ ಝಳಪಿಸಿ ಸುತ್ತುಹಾಕಿ ತಮ್ಮ ಹಿಡಿಕೆಗಳಲ್ಲಿ ತೂರಿದರು. ಆ ಎರಡೂ ಕಾಪಿನ ಆಳುಗಳು ಮತ್ತೆ ಗುಂಡು ಹಾರಿಸಿದರು, ಪ್ರತ್ಯೇಕವಾಗಿ. ಆದರೆ ಏನೂ ಪ್ರಯೋಜನವಾಗಲಿಲ್ಲ.

ಬೇಟೆಗೊಳಗಾದ ಆ ಮನುಷ್ಯ ಇವನ್ನೆಲ್ಲ. ಹೆಗಲಮೇಲಿಂದ ನೋಟ ಹಾಯಿಸಿ ನೋಡಿದನು. ಈಗ ಅವನು ಸೆಳವಿನಗುಂಟ ರಭಸದಿಂದ ಈಜುತ್ತಿದ್ದನು. ಅವನ ಕೈಕಾಲುಗಳಷ್ಟೇ ಮೆದುಳೂ ಚೈತನ್ಯ ಪಡೆದಿತ್ತು. ಮಿಂಚಿನ ವೇಗದಿಂದ ಅವನ ವಿಚಾರ ನಡದಿತ್ತು.

“ಆ ಅಧಿಕಾರಿ” ಅವನು ತರ್ಕಿಸಿದ. “ಆ ಸೀಪಾಯಿಯು ತಪ್ಪನ್ನು ಇನ್ನೊಮ್ಮೆ ಮಾಡಲಾರ. ಬಿಡಿ ಗುಂಡುಗಳನ್ನು ತಪ್ಪಿಸಿಕೊಂಡಷ್ಟೇ ಸುಲಭವಾಗಿ ಗುಂಡುಗಳ ಸುರಿಮಳೆಯನ್ನು ತಪ್ಪಿಸಿಕೊಳ್ಳಬಹುದು ಅಥವಾ ಈಗಾಗಲೇ ಆ ಅಧಿಕಾರಿ ಮನಬಂದಂತೆ ಗುಂಡು ಹಾರಿಸಲು ಅಪ್ಪಣೆ ಕೊಟ್ಟಿರಬೇಕು. ದೇವರೇ ನನ್ನನ್ನು ಕಾಪಾಡಬೇಕು. ನಾನು ಅಷ್ಟೆಲ್ಲ ಗುಂಡುಗಳನ್ನು ತಪ್ಪಿಸಿಕೊಳ್ಳಲಾರೆ.”

ಅವನಿಂದ ಎರಡೇ ಗಜ ದೂರ ಭೀಷಣವಾದ ಜಲಕ್ಷೋಭ! ಅದರ ಬೆನ್ನಿಗೇ ನುಗ್ಗುವ ದೊಡ್ಡ ಶಬ್ದ- ಅದು ಗಾಳಿಯೊಳಗಿಂದ ಒಂದಕ್ಕೆ ಕೋಟೆಯ ಕಡೆಗೆ ಧಾವಿಸಿ ಹೊಳೆಯನ್ನೇ ಬಹಳ ಆಳಕ್ಕೆ ಕಲಕಿ ಕಲ್ಲೋಲಗೊಳಿಸುವಂಥ ದೊಡ್ಡ ಆ ಸ್ಫೋಟನದಲ್ಲಿ ಅಡಗಿತು. ಏರಿಬರುವ ದೊಡ್ಡ ನೀರಿನ ತೆರೆಯೊಂದು ಅವನನ್ನು ಅಪ್ಪಳಿಸಿತು. ಅವನ ಕಣ್ಣು ಕುರುಡುಮಾಡಿತು. ಉಸಿರು ಕಟ್ಟಿ ಕೊರಳು ಹಿಚುಕಿತು. ಈಗ ತೋಫು ಈ ಬೇಟೆಯ ಆಟದಲ್ಲಿ ಕೈಹಾಕಿತ್ತು. ಬಡಿದೆದ್ದ ನೀರಿನ ಕಲ್ಲೋಲದಿಂದ ತಲೆ ಝಾಡಿಸಿಕೊಳ್ಳುತ್ತಿರುವಾಗಲೇ ಚೆದರಿ ಹಾರಿಸಿದ ಗುಂಡು ಆಕಾಶದಲ್ಲಿ ಝುಂಯ್ಗುಡುವದನ್ನು ಆತ ಕೇಳಿದನು. ಆ ಗುಂಡು ಆಚೆಯ ಅಡವಿಯ ಟೊಂಗೆಗಳಿಗೆ ತಗಲಿ ಚಟಚಟನೆ ಮುಂದು ಪುಡಿಮಾಡಿತು.

"ಮತ್ತೊಮ್ಮೆ ಅವರು ಅದನ್ನು ಮಾಡಲಾರರು." ಆತ ವಿಚಾರಿಸಿದ "ಮತ್ತೊಮ್ಮೆ ಅವರು ಗ್ರೇಮಗುಂಡಿನ ಪ್ರಯೋಗ ಮಾಡುವರು. ನಾನು ಆ ತೋಫಿನ ಮೇಲೆ ಕಣ್ಣಿಡಬೇಕು. ಅದರ ಹೊಗೆ ನನಗೆ ಎಚ್ಚರಿಕೆ ಕೊಡುವದು- ಸ್ಫೋಟದ ಸದ್ದು ತೀರ ತಡವಾಗಿ ಬರುತ್ತದೆ. ಗುಂಡಿಗೂ ಹಿಂದೆ ಬೀಳುತ್ತದೆ. ಅದು ಒಳ್ಳೇ ತೋಫು."

ಒಮ್ಮೆಲೇ ತಾನು ಬುಗರಿಯಂತೆ ರಭಸದಿಂದ ಸುತ್ತುತ್ತಿರುವಂತ ಅನಿಸಿತು. ನೀರು, ದಂಡೆ, ಅಡವಿ ಈಗ ದೂರ ಇದ್ದ ಸೇತುವೆ, ಕೋಟೆ, ಮಂದಿ,- ಎಲ್ಲರೂ ಕಲಬೆರಕೆಯಾಗಿ ಮಸುಮಸುಕಾಗಿದ್ದರು. ವಸ್ತುಗಳು ಅವುಗಳ ಬಣ್ಣದಿಂದಲೇ ಗೊತ್ತಾಗುತ್ತಿದ್ದವು- ಬಣ್ಣದ ಗೋಲ ಇಲ್ಲವೇ ಅಡ್ಡಪಟ್ಟಿಗಳು, ಅವನಿಗೆ ಕಾಣುವದು ಅದಷ್ಟೇ. ಅವನೊಂದು ಸುಳಿಯಲ್ಲಿ ಸಿಲುಕಿ ಬಿದ್ದಿದ್ದನು. ಅದರ ಗತಿಯ ಭ್ರಮಣದ ವೇಗ ಅವನ ತಲೆ ತಿರುಗುವಂತೆ, ಅವನು ಸಂಕಟಪಡುವಂತೆ ಮಾಡಿತು. ಕೆಲವೇ ಕ್ಷಣದಲ್ಲಿ ಹೊಳೆಯ ಎಡದ ಅಂದರೆ ದಕ್ಷಿಣದ ದಂಡೆಯ ತಡಿಗೆ ಹರಳು ಮಳಲಲ್ಲಿ ಅವನು ಒಗೆದು ಬಂದು ಬಿದ್ದನು. ಬೆನ್ನಿಗೆ ಕಡಿದಾಗಿ ಎದ್ದ ಒಂದು ಮೊಣಚು ಬಂಡೆ ಅವನನ್ನು ಹಗೆಗಳಿಂದ ಮರೆಮಾಡಿತು. ಒಮ್ಮೆಲೇ ಗತಿಗೆ ಉಂಟಾದ ತಡೆ ಮಳಲಲ್ಲಿ ಅವನ ಒಂದು ಕೈಗೆ ಆದ ಜಜ್ಜುಗಾಯ ಅವನಿಗೆ ಹುರುಪು ತಂದುಕೊಟ್ಟವು. ಮತ್ತು ಅವನು ಆನಂದದಿಂದ ಅತ್ತನು. ಅವನು ಬೆರಳುಗಳನ್ನು ಮಳಲಲ್ಲಿ ಹೂಳಿ ಹೊರ ತೆಗೆದು ಹಿಡಿಹಿಡಿ ಮಳಲು ಮೈಮೇಲೆ ಚಲ್ಲಿಕೊಂಡನು. ಮತ್ತು ಅದನ್ನು ಗಟ್ಟಿಯಾಗಿ ಕೂಗಿ ಹರಿಸಿದನು. ಆ ಮಳಲು ಅವನಿಗೆ ರತ್ನದಂತೆ, ಬಂಗಾರದಂತೆ, ಮಾಣಿಕದಂತೆ, ಪಚ್ಚೆಯಂತೆ ತೋರಿತು. ಆ ಮಳಲನ್ನು ಹೊಲದ ಯಾವ ಚಲುವಾದ ವಸ್ತುವೂ ಅವನಿಗೆ ತೋಚಲಿಲ್ಲ. ದಂಡೆಯ ಮರಗಳು ಪ್ರಚಂಡ ಉದ್ಯಾನ ತರುಗಳಾಗಿದ್ದವು. ಅವುಗಳ ವ್ಯವಸ್ಥೆಯಲ್ಲಿ ಅವನು ಒಂದು ನಿಶ್ಚಿತ ಯೋಜನಾಶ್ರಮವನ್ನು ಕಂಡನು. ಅವುಗಳ ಅರಳುಗಳ ಪರಿಮಳವನ್ನು ಉಸುಕಿನೊಂದಿಗೆ ಹೀರಿಕೊಂಡನು. ಅವುಗಳ ಕಾಂಡಗಳ ನಡುವೆಲ್ಲ ಒಂದು ಗುಲಾಬಿ ಬೆಳಕು ತುಳುಕಾಡುತ್ತಿತ್ತು. ತನ್ನ ಪಲಾಯನವನ್ನು

ಪೂರ್ತಿಗೊಳಿಸುವ ಬಯಕೆ ಅವನಲ್ಲಿ ಉಳಿಯಲಿಲ್ಲ. ಮತ್ತೆ ಸೆರೆಹಿಡಿಯುವ ತನಕವೂ ಅದೇ ಮಾಂತ್ರಿಕ ಸ್ಥಳದಲ್ಲಿ ಬಿದ್ದಿರುವುದೇ ಅವನಿಗೆ ತೃಪ್ತಿಯೆನಿಸಿತು.

"ಗ್ರೇಪ್" ಗುಂಡುಗಳು ಅವನ ತಲೆಯ ಮೇಲೆ ಬಹು ಎತ್ತರಕ್ಕೆ ಟೊಂಗೆಗಳಲ್ಲಿ ಸಂಯ್ಗುಡುವದು, ಕಟಕಟಿಸುವದು ಅವನನ್ನು ಆ ಕನಸಿನಿಂದ ಎಬ್ಬಿಸಿತು. ದಿಙ್ಮೂಢನಾದ ತೋಪಿನವನು ಬೀಳ್ಕೊಡುವ 'ಸಲಾಮಿ'ಯನ್ನು ಹಾರಿಸಿದ್ದನು. ಅವನು ದಿಗ್ಗನೆ ಎದ್ದನು. ಇಳುಕಲಾದ ದಂಡೆಯನ್ನು ಏರಿದನು. ಅಡವಿಯಲ್ಲಿ ನುಗ್ಗಿದನು.

ಆ ದಿನವಲ್ಲ ಅವನು ನಡೆದದ್ದೇ ನಡೆದದ್ದು. ಬಾನು ಸುತ್ತುವ ಸೂರ್ಯನ ಹೆಜ್ಜೆಗನುಸಾರವಾಗಿ ತನ್ನ ಮಾರ್ಗಕ್ರಮಣದ ಹೆಜ್ಜೆಗನುಸಾರವಾಗಿ ಯೋಜನೆ ಹಾಕುತ್ತ ಮುನ್ನಡೆದನು. ಅಡವಿಗೆ ಮುಗಿತಾಯವೇ ಇಲ್ಲವೆನಿಸಿತು. ವನರಕ್ಷಕನ ಕಾಲುಹಾದಿ ಕೂಡ ಕಾಣಲಿಲ್ಲ. ಇಷ್ಟು ಕಗ್ಗಾಡಿನಲ್ಲಿ ತಾನು ವಾಸಿಸುತ್ತಿದ್ದೇನೆ- ಎಂಬುದು ಅವನಿಗೆ ಗೊತ್ತೇ ಇದ್ದಿಲ್ಲ. ಈ ಹೊಸ ತಿಳುವಳಿಕೆಯಲ್ಲಿ ಒಂದು ವಿಚಿತ್ರ ಅಂಶವಿತ್ತು.

ಕತ್ತಲಾದಾಗ ಅವನು ಬಹು ದಣಿದಿದ್ದನು. ಕಾಲುಗಳು ಒಡೆದು ನೋಯುತ್ತಿದ್ದವು. ಹೊಟ್ಟೆಗೆ ಏನೂ ಇಲ್ಲದೇ ಬಳಲುತ್ತಿದ್ದನು. ಹೆಂಡತಿ ಮತ್ತು ಮಕ್ಕಳ ವಿಚಾರ ಅವನನ್ನು ಮುಂದೆ ಅಟ್ಟುತ್ತಿತ್ತು. ಕೊನೆಗೆ ಅವನಿಗೆ ಒಂದು ರಸ್ತೆ ಸಿಕ್ಕಿತು. ಅದು ಅವನು ತಿಳಿದಂತೆ ಸರಿಯಾದ ನಿಟ್ಟಿನಲ್ಲಿ ಒಯ್ಯುತ್ತಿತ್ತು. ಅದು ಪಟ್ಟಣದ ಕೇರಿಯಂತೆ ಅಗಲವೂ ನೇರವೂ ಆಗಿತ್ತು. ಆದರೂ ಅದರ ಗುಂಟ ಜನ ಸಂಚರಿಸುವಂತೆ ಕಾಣಲಿಲ್ಲ. ಅದರ ಅಂಚಿಗೆ ಹೊಲಗಳಿದ್ದಿಲ್ಲ. ಸಮೀಪವೆಲ್ಲಿಯೂ ಜನವಸತಿ ಇದ್ದಿಲ್ಲ. ಮಾನವ ವಸತಿಗಳನ್ನು ಸೂಚಿಸುವ ಒಂದು ನಾಯಿಯ ಬೊಗಳುವಿಕೆಯೂ ಇದ್ದಿಲ್ಲ. ಹೆಮ್ಮರಗಳ ಕಪ್ಪುಕಾಂಡಗಳು ಎರಡೂ ಮಗ್ಗಲಿಗೆ ನೇರವಾಗಿ ಗೋಡೆಯನ್ನು ನಿಲ್ಲಿಸಿದ್ದವು. ಈ ಗೋಡೆಗಳು ಕ್ಷಿತಿಜದಲ್ಲ ಒಂದು ಬಿಂದುವಿನಲ್ಲಿ ಮುಗಿಯುತ್ತಿದ್ದವು- ವಸ್ತುಗಳ ಅನುಪಾತದ ಪಾಠದಲ್ಲಿಯ ಒಂದು ಉದಾಹರಣೆಯ ರೇಖಾಕೃತಿಯಂತೆ. ತಲೆಯ ಮೇಲ್ಗಡೆ ಅಡವಿಯ ಈ ಬಿರುಕಿನೊಳಗಿಂದ ಆತ ನೋಡುತ್ತಿದ್ದಂತೆಯೇ ದೊಡ್ಡ

ದೊಡ್ಡ ಹೊಂಬಣ್ಣದ ನಕ್ಷತ್ರಗಳು ಅಪರಿಚಿತವೆನಿಸುವಂತಹದು ವಿಚಿತ್ರ ರಾಶಿ ಪುಂಜಗಳಲ್ಲಿ ಗುಂಪಾಗಿ ತೊಳಗತೊಡಗಿದವು. ಇಕ್ಕೆಲದ ಅಡವಿಯು ವಿಶಿಷ್ಟ ಸಪ್ಪಳಗಳಿಂದ ತುಂಬಿತ್ತು- ಒಮ್ಮೆ ಇನ್ನೊಮ್ಮೆ ಮತ್ತೊಮ್ಮೆ ಅವುಗಳಲ್ಲಿ ಆತನಿಗೆ ತಿಳಿಯದ ಭಾಷೆಯಲ್ಲಿ ಯಾರೋ ಪಿಸುಗುಟ್ಟುತ್ತಿರುವದನ್ನು ಅವನು ಸ್ಪಷ್ಟವಾಗಿ ಕೇಳಿದನು.

ಅವನ ಕುತ್ತಿಗೆ ಅಸಹ್ಯವಾಗಿ ನೋಯುತ್ತಿತ್ತು. ಅದಕ್ಕೆ ಕೈ ಹಚ್ಚಿದಾಗ ಅದು ಭಯಂಕರ ಬಾತಿದ್ದುದು ಕಂಡುಬಂದಿತು. ಹಗ್ಗದ ಉರುಟು ಬಿಗಿದಲ್ಲಿ ಒಂದು ಕರ್ರಗಿನ ಗೆರೆ ಸುತ್ತಲೂ ಬಿದ್ದಿರಬೇಕೆಂದು ಅವನಿಗೆ ಗೊತ್ತು. ಅವನ ಕಣ್ಣುಗಳಲ್ಲಿ ಕತ್ತಲುಗಟ್ಟಿತ್ತು. ಅವು ಇನ್ನು ಮುಚ್ಚಲು ಬರುವಂತಿರಲಿಲ್ಲ. ಅವನ ನಾಲಿಗೆ ನೀರಡಿಕೆಯಿಂದ ಬಾತಿತ್ತು. ಅದನ್ನು ಹಲ್ಲುಗಳೊಳಗಿಂದ ಹೊರಗೆ ತಂಪು ಹವೆಗೆ ಚಾಚಿ ಅದರ ಕಾವನ್ನು ಕಡಿಮೆ ಮಾಡುತ್ತಿದ್ದನು. ಜನ ಸಂಚಾರವಿಲ್ಲದ ರಸ್ತೆಯಲ್ಲಿ ಕಿರಿಹಲ್ಲು ಎಷ್ಟು ಮೃದುವಾಗಿ ಹಾಸಿದೆ! ಕಾಲಕೆಳಗಿನ ರಸ್ತಯೇ ಅವನಿಗೆ ಅರಿವಾಗುತ್ತಿದ್ದಿಲ್ಲ!

ಅವನ ಬಳಲಿಕೆ ಎಷ್ಟೇ ಇದ್ದರೂ ನಿಸ್ಸಂಶಯವಾಗಿ ಅವನು ನಡೆಯುತ್ತಿರುವಾಗಲೇ ನಿದ್ದೆಹೋದನು. ಏಕೆಂದರೆ ಈಗ ಆತ ಇನ್ನೊಂದು ದೃಶ್ಯವನ್ನು ನೋಡುತ್ತಾನೆ-ಒಂದು ವೇಳೆ ಅವನು ಅಪಸ್ಮಾರದಿಂದ ಚೇತರಿಸಿದ್ದಾನೆ. ತನ್ನ ಮನೆಯ ಅಗಸೆಯ ಬಾಗಿಲಿಗೆ ಬಂದು ನಿಂತಿದ್ದಾನೆ. ಎಲ್ಲ ಅವನು ಬಿಟ್ಟು ಹೋದಂತೆಯೇ ಇತ್ತು- ಎಲ್ಲ ಪ್ರಸನ್ನ ಸುಂದರ ಮುಂಜಾವಿನ ಎಳೆ ಬಿಸಿಲಿನಲ್ಲಿ. ಇಡೀ ರಾತ್ರಿ ಆತ ನಡೆದಿರಬೇಕು. ಅಗಸೆಯ ಬಾಗಿಲನ್ನು ನೂಕಿ ಮುಂದೆ ಸಾಗಿದನು.- ಬಿಳುಪಾದ ಅಗಲವಾದ ದಾರಿಯಲ್ಲಿ ಆಗ ಹೆಣ್ಣಿನ ಉಡುಪಿನ ಸರಿದಾಟ ನೋಡುತ್ತಾನೆ. ಅವನ ಹೆಂಡತಿ ತಂಪಾಗಿ, ಸೊಗಸಾಗಿ, ಹೊಸ ಅರಳಿನಂತೆ ಕಾಣುತ್ತ ಅವನ ಭೆಟ್ಟಿಗೆ ಜಗಲಿಯಿಂದ ಇಳಿದು ಮುಂದೆ ಬಂದಳು. ಮೆಟ್ಟಿಲುಗಳ ಕೆಳಗೆ ಕಾಯುತ್ತ ನಿಂತಳು- ಅಳಿಸಲಾದ ಆನಂದದ ನಗುವಿನೊಂದಿಗೆ, ಅನುಪಮ ಬಿಂಕದ ಮತ್ತು ಮಾಟದ ನಿಲುವಿನಲ್ಲಿ. ಆಹಾ! ಎಷ್ಟು

ಚೆಲುವೆ ಆಕೆ! ಆತ ಚಾಚಿದ ಕೈಗಳೊಂದಿಗೆ ಅವಳ ಕಡೆಗೆ ನೆಗೆಯುತ್ತಾನೆ. ಅವಳನ್ನು ಆತ ಅವಚಿಕೊಳ್ಳಲಿದ್ದ. ಅಷ್ಟರಲ್ಲಿ ಅವನಿಗೆ ಒಂದು ಮರ್ಮಾಂತಿಕ ಪ್ರಹಾರ ಕುತ್ತಿಗೆಯ ಬೆನ್ನಿಗೆ ಬಿತ್ತ. ಅವನ ಸುತ್ತಲೆಲ್ಲ ಒಂದು ಶ್ವೇತಪ್ರಭೆಯು ಕಣ್ಣು ಕುಕ್ಕುವಂತೆ ಉರಿದೆದ್ದು ಹೋಯಿತು, ತೋಫಿನ ಗುಂಡಿನೇಟಿನ ಸದ್ದಿನಂತೆ. ಆಮೇಲೆ ಎಲ್ಲವೂ ಕತ್ತಲೆ, ಎಲ್ಲವೂ ಮೌನ.

ಪೈಟಾನ್ ಫರಕ್‌ಹಾರ್ ಸತ್ತಿದ್ದನು. ಅವನ ಕಳೇಬರ ಕುತ್ತಿಗೆ ಮುರಿದು ಔಲಕ್ರೀಕ ಸೇತುವೆಯ ಬಳಿಯ ಮರದ ಟೊಂಗೆಗಳ ನಡುವೆ ಅತ್ತಿಂದಿತ್ತ ಮೆಲ್ಲಗೆ ತೂಗಾಡುತ್ತಿತ್ತು.

## ೧. ಈಡಿಪಸ್ ದೊರೆ

*ಗ್ರೀಸಿನ ಮಹಾನಾಟಕಕಾರ ಸೊಫೋಕ್ಲಿಸನ ದುರಂತ ನಾಟಕದ ಈ ಕಥೆ ವಿಶ್ವದ ಆಖ್ಯಾಯಿಕೆಗಳಲ್ಲೇ ಪ್ರಖ್ಯಾತವಾಗಿದೆ. ದೈವವು ಮಾನವನನ್ನು ಆಡಿಸಿ ಆಡಿಸಿ ಕೊಲ್ಲುವ ಆಟ ಇಲ್ಲಿಗಿಂತ ಹೆಚ್ಚು ಹೃದಯಸ್ಪರ್ಶಿಯಾಗಿ ಬೇರೆಲ್ಲೂ ಮೂಡಿರಲಾರದು.*

ಗ್ರೀಸ್ ದೇಶದ ಥೀಬೀಸ್ ನಗರ ರಾಜ್ಯಕ್ಕೆ ಒಂದು ಘೋರ ಶಾಪವೇ ಕವಿದಿತ್ತು. ಅಲ್ಲಿಯ ಬೆಳೆಯುಳ್ಳ ಭೂಮಿ ಬಂಜರು ಬಿದ್ದಿತ್ತು. ಬಿತ್ತಿದರೆ ಯಾವ ಪೈರೂ ಬರುತ್ತಿದ್ದಿಲ್ಲ. ಹುಲ್ಲುಗಾವಲುಗಳಲ್ಲಿ ಮೇಯುವ ದನಗಳು ಹಾಲನ್ನೇ ಹಿಂಡುತ್ತಿದ್ದಿಲ್ಲ ಅಲ್ಲಿಯ ಹೆಂಡಂದಿರುಗಳಿಗೆ ಮಕ್ಕಳೇ ಆಗುತ್ತಿದ್ದಿಲ್ಲ. ಆದರೆ ಅವು ಹುಟ್ಟಿದಾಗಲೇ ಸಾಯುತ್ತಿದ್ದವು. ನಗರಕ್ಕೇ ಬೆಂಕಿ ಬಿದ್ದಂತಿತ್ತು.

ನಗರದ ಪ್ರಜೆಗಳಲ್ಲ ನಗರ ಮಧ್ಯದಲ್ಲಿ ಅರಮನೆಯ ಇದಿರಿನಲ್ಲಿ ದೇವರ ವೇದಿಕೆಯ ಸುತ್ತಲೂ ತಲೆತಗ್ಗಿಸಿ ಬಿದ್ದಿದ್ದರು - ನಗರದ ಅಧಿದೇವತೆ ಝ್ಯೂಸ್ ದೇವರಿಗೆ ಮೊರೆ ಇಡಲು. ದೇವರ ಅರ್ಚಕನು ಬಂದು ರಾಜಾ ಈಡಿಪಸರೆದುರಗೆ ಜನರ ಗೋಳನ್ನು ತೋಡಿಕೊಂಡನು.

ಪ್ರಜೆಗಳ ಪಾಲಿಗೆ ಅವರ ರಾಜ ಈಡಿಪಸ್‌ನೇ ಝ್ಯೂಸ್ ದೇವರು. ಥೀಬೀಸ್ ನಗರವು ಹಿಂದೆ ಕ್ರೂರಗಂಧರ್ವೆ ಸ್ಫಿಂಕ್ಸಳ ದಬ್ಬಾಳಿಕೆಗೆ ತುತ್ತಾಗಿದ್ದಾಗ ಈಡಿಪಸ್‌ನೇ ಬಂದು ಸ್ಫಿಂಕ್ಸಳ-ಸಿಂಹಕಾಯ ಮನುಷ್ಯ ಮುಖದ ದೇವತೆಯ- ಕೂಟ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಕೊಟ್ಟು ನಗರವನ್ನು ಬಿಡುಗಡೆ ಮಾಡಿ ಉಳಿಸಿದ್ದನು. ಕೇವಲ ದೈವೀಕೃಪೆಯೆಂಬಂತೆ ಎಲ್ಲಿಂದಲೋ ಬಂದು ಈಡಿಪಸ್‌ನು ಥೀಬೀಸ್ ನಗರವನ್ನು

ಸ್ಫಿಂಕ್ಸ್ ದೈವತಕ್ಕೆ ತೆರಬೇಕಾದ ಕಪ್ಪಕಾಣಿಕೆಗಳ ಹೇರಳ ಹೊರೆಯಿಂದ ಉಳಿಸಿ ರಾಜ್ಯಕ್ಕೆ ಸುಖ ಶಾಂತಿಯನ್ನು ತಂದಿದ್ದನು.

ಅದೇ ರಾಜ್ಯವು ಇಂದು ಶಾಪದಗ್ಧವಾಗಿತ್ತು. ಯಾರ ಶಾಪ? ಯಾವ ವಿಮೋಚನೆ?

ರಾಜಾ ಈಡಿಪಸ್‌ನು ಪ್ರಜಾವತ್ಸಲನು. ಪುರೋಹಿತನು ದೂರಿಡುವ ಮೊದಲೇ ಅವನಿಗೆ ತನ್ನ ಪ್ರಜೆಗಳ ಗೋಳು ಗೊತ್ತು. ಈಗಾಗಲೇ ರಾಜನು ತನ್ನ ರಾಣಿ ಜೋಕಾಸ್ಟಾಳ ತಮ್ಮ ಕ್ರಿಯಾನ್‌ನನ್ನು ಪೇಥಿಯನ್ ಮಂದಿರಕ್ಕೆ, ಅಪೋಲೋ ದೇವರ ಆಜ್ಞೆಯನ್ನು ಪಡೆಯಲಿಕ್ಕೆ ಕಳುಹಿಸಿದ್ದನು. ಯಾವ ರೀತಿಯಲ್ಲಿ ಯಾವ ಉಪಾಯದಿಂದ ನಗರವನ್ನು ಬದುಕಿಸಬೇಕೆಂಬ ಕುರಿತು ದೇವರ ಸೂಚನೆಯನ್ನೆ ಈತನು ನಿರೀಕ್ಷಿಸುತ್ತಿದ್ದನು.

ಕ್ರಿಯಾನ ದೈವಾಜ್ಞೆಯನ್ನು ಪಡೆದು ಬಂದನು. ಫೀಬಸ್ ದೇವ ರಾಜ ಅಪೋಲೊ ನಿಚ್ಚಳವಾಗಿಯೇ ಆಜ್ಞಾಪಿಸಿದ್ದನು; "ದೇಶದಲ್ಲಿ ಭ್ರಷ್ಟಾಚಾರವಾಗಿದೆ. ಅದನ್ನು ಹೋಗಲಾಡಿಸಬೇಕು. ನಗರದ ಶುದ್ಧೀಕರಣವಾಗಬೇಕು. ಈಡಿಪಸ್ ಆಳಲು ಬರುವ ಮುಂಚೆ ಈ ದೇಶಕ್ಕೆ ಲೇಯಸ್ ಎಂಬಾತನು ದೊರೆ ಆಗಿದ್ದನು. ಅವನನ್ನು ಕೊಲೆ ಮಾಡಿದವರು ಇಂದು ರಾಜ್ಯದಲ್ಲಿ ಇದ್ದಾರೆ. ಅವರನ್ನು ಹೊರದೂಡಬೇಕು. ಅಥವಾ ರಕ್ತದ ಶಾಪವನ್ನು ರಕ್ತದಿಂದ ತೊಳೆದುಹಾಕಬೇಕು. ಆ ಶಾಪವೇ ಆ ಕೊಲೆಪಾತಕವೇ ಈ ರಾಜ್ಯವನ್ನು, ಪ್ರಜೆಗಳನ್ನು ಸಾವಿನ ಸುಂಟರಗಾಳಿಯಲ್ಲಿ ಸಿಲುಕಿಸಿದೆ!"

ಆದರೆ ಈ ಕೊಲೆಗಾರರನ್ನು ದಂಡಿಸುವುದಾದರೂ ಹೇಗೆ? ಅವರು ಅಡಗಿರುವುದಾದರೂ ಎಲ್ಲಿ?

ಈಡಿಪಸ್‌ನಿಗೆ ಲೇಯಸ್ ದೊರೆಯ ಸಮಾಚಾರವೇನೂ ಗೊತ್ತಿದ್ದಿಲ್ಲ. ಈಡಿಪಸ್ ಥೀಬೀಸ್‌ಗೆ ಬಂದಾಗ ಈ ನಗರಕ್ಕೆ ದೊರೆಯೇ ಇದ್ದಿಲ್ಲ. ಈಡಿಪಸ್ ಬಂದು ಪಟ್ಟವೇರಿದೊಡನೆ ಕೊಲೆಯಾದ ಲೇಯಸ್‌ನ ವಿಧವೆ ಈ ಜೋಕಾಸ್ಟಾಳನ್ನೇ, ಅವಳು ಅವನಿಗಿಂತಲೂ ಪ್ರಾಯದಲ್ಲಿ ಹಿರಿಯಳಾದರೂ, ರೂಢಿಯಂತೆ ಮದುವೆಯಾಗಿದ್ದ ಈಡಿಪಸ್ ಮಹಾರಾಜ ಈಗ ಲೇಯಸ್‌ನ ಕೊಲೆಯ ವೃತ್ತಾಂತವನ್ನು ಕಲೆಹಾಕಿದನು. ಲೇಯಸ್ ಎಲ್ಲಿಗೋ ರಾಯಭಾರಕ್ಕೆ ಪರಿವಾರದೊಂದಿಗೆ ಹೋಗಿದ್ದವನು ತಿರುಗಿ ರಾಜಧಾನಿಗೆ ಬರಲೇ ಇಲ್ಲ. ದರೋಡೆಗಾರರು ಯಾರೊ ಅವನನ್ನು ಹಾದಿಯಲ್ಲಿಯೇ ಕೊಲೆ ಮಾಡಿದರೆಂದು ವಾರ್ತೆ ಹಬ್ಬಿತ್ತು. ಅವನ. ಪರಿವಾರವೂ ಅವನ ಜತೆಯಲ್ಲಿಯೇ ಹತವಾಗಿತ್ತು. ಅವರಲ್ಲಿ ಒಬ್ಬನಾರೋ ಜೀವ ಉಳಿಸಿಕೊಂಡು ಪಾರಾಗಿ ಬಂದನು. ಆದರೆ ಅವನು ಎಲ್ಲಿಯೋ ಪ್ರಾಣಭಯಕ್ಕಾಗಿ ಪರಾರಿಯಾಗಿಬಿಟ್ಟಿದ್ದನು.

ಈಡಿಪಸ್ ರಾಜ್ಯದಲ್ಲೆಲ್ಲ ಕಟ್ಟಪ್ಪಣೆಯನ್ನು ಸಾರಿದನು: “ಲೇಯಸ್ ದೊರೆಯ ಕೊಲೆಗಡಕನನ್ನು ಬಲ್ಲವರು ಕಂಡವರು ಆಶ್ರಯ ಕೊಟ್ಟವರು ಯಾರಾದರೂ ಇದ್ದರೆ ತಿಳಿಸಲಿ. ಸತ್ಯವು ಬಹಿರಂಗಕ್ಕೆ ಬರಲಿ, ರಾಜವಧೆ ಮಾಡಿದವರು ಒಬ್ಬರೊ ಹಲವರೊ - ಅವರನ್ನೆಲ್ಲಾ ದುರ್ದಶೆಗೆ ದುರಂತಕ್ಕೆ ಈಡು ಮಾಡಲಾಗುವದು!”

ಆದರೆ ಈ ಕಟ್ಟಪ್ಪಣೆ ಪ್ರಯೋಜನಕ್ಕೆ ಬೀಳಲಿಲ್ಲ.

ಥೀಬೀಸ್ ನಗರದಲ್ಲಿ ಥೆರೇಸಿಯಸ್‌ನೆಂಬ ಒಬ್ಬ ಪ್ರವಾದಿಯೂ (ಭವಿಷ್ಯ ಕಥಕನು) ಇದ್ದನು. ಈತನಿಗೆ ಕಣ್ಣು ಇದ್ದಿಲ್ಲ. ಆದರೆ ಅಪೋಲೋ ಕಾಣುವುದನ್ನೆಲ್ಲ ಅವನೂ ಕಾಣಬಲ್ಲನು. ಈಡಿಪಸ್ ಅಂಥ ಥೆರೇಸಿಯಸ್‌ನನ್ನು ಕರೆಯಿಸಿ ಬೆಸಗೊಂಡನು. ಆದರೆ ತ್ರಿಕಾಲಜ್ಞಾನಿಯಾದ ಆ ವೃದ್ಧ ಪ್ರವಾದಿ ಯಾವ ಉತ್ಸಾಹವನ್ನೂ ತೋರಲಿಲ್ಲ. ಅವನಿಗೆ ತನ್ನ ಜ್ಞಾನವೇ ಭಯಾವಹವೆನಿಸಿತು. ಅಪ್ರಿಯ ಸತ್ಯವನ್ನು ಆಡಲು ಅವನು ಅಂಜಿ ಬಂದ ಹಾದಿ ಹಿಡಿದು ಮನೆಗೆ ಹಿಂದಿರುಗಲು ಹವಣಿಸಿದನು.

ಆದರೆ, ಈಡಿಪಸ್ ಬೆದರಿಸಿ ಗದರಿಸಿ ಕೇಳಿದಾಗ ಪ್ರವಾದಿ ವಿಧಿಯಿಲ್ಲದೆ "ನೀನೇ ಈ ದೇಶದ ಪಾತಕ, ನೀನೇ ರಾಜ್ಯವನ್ನು ಭ್ರಷ್ಟಗೊಳಿಸಿದವನು. ಯಾರನ್ನು ನೀನು ಅರಸುತ್ತಿರುವಿಯೋ ಅವನೇ ನೀನು! ಅಲ್ಲದೆ ನೀನು ಯಾರನ್ನು ಅತಿಯಾಗಿ ಪ್ರೀತಿಸುವೆಯೋ ಅವರೊಡನೆಯೇ ಅತಿ ನಿಂದ್ಯವಾದ ನಾಚಿಕೆಗೆಟ್ಟ ಸಂಬಂಧವನ್ನು ನಿನಗೆ ಗೊತ್ತಿರದಂತೆಯೇ ಇಟ್ಟುಕೊಂಡಿರುವಿ!" ಎಂದು ಸತ್ಯದ ನಿಷ್ಠುರತೆಯಿಂದ ಗರ್ಜಿಸಿದನು.

ಅಷ್ಟಕ್ಕೇ ನಿಲ್ಲದೆ ಥೆರೇಸಿಯಸ್ ಘಂಟಾಘೋಷವಾಗಿ ಆಡಿಬಿಟ್ಟನು. "ತಾಯಿ ತಂದೆಗಳ ಇಮ್ಮಡಿ ಶಾಪವು ನಿನ್ನನ್ನು ರಾಜ್ಯದಿಂದ ಹೊರಗೆ ಅಟ್ಟುವದು-ಅದೂ ನಿನ್ನ ಕಣ್ಣಿನಲ್ಲಿ ಕತ್ತಲೆ ತುಂಬಿ!"

ಆ ಕುರುಡ ಮುದುಕನ ಧಾರ್ಷ್ಟ್ಯಕ್ಕೆ ಈಡಿಪಸ್ ಚಕಿತನಾದನು: ಚಿತ್ರದಲ್ಲಿ ಕ್ಷೋಭೆಗೊಂಡನು. ಒಮ್ಮೆಲೆ ತನ್ನ ಹೆಂಡತಿಯ ತಮ್ಮ ಕ್ರಿಯಾನನ ಮೇಲೆ ಸಂಶಯವಿಟ್ಟನು. ಅವನೇ ಈ ಪ್ರವಾದಿಯ ಬಾಯಿಯಿಂದ ತನ್ನ ಮೇಲೆ ಈ ಘೋರ ಆರೋಪವನ್ನು ಹೊರಿಸಿರಬೇಕು.

ಸಿಟ್ಟಿನ ಕೈಗೆ ಬುದ್ಧಿಯನ್ನು ಕೊಟ್ಟು ಕ್ರಿಯಾನವನ್ನು ಒಳಸಂಚುಗಾರನೆಂದೂ ರಾಜದ್ರೋಹಿಯೆಂದೂ ಜರೆದನು. ಆದರೆ ಕ್ರಿಯಾನ್ ಎಲ್ಲವನ್ನೂ ನಿರಾಕರಿಸಿ "ನನ್ನ ಸಂಚು ಹೊಂಚು ಸಿದ್ಧವಾದರೆ ನನ್ನನ್ನು ಕೊಲ್ಲಬಹುದು" ಎಂದು ಹೇಳಿದನು.

ವಿಕೋಪಕ್ಕೆ ಹೋಗುತ್ತಿರುವ ಈ ವ್ಯಾಜ್ಯವನ್ನು ತಣಿಸಲಿಕ್ಕೆ ರಾಣಿ ಜೋಕಾಸ್ಟಾಳೇ ನಡುವ ಬೀಳಬೇಕಾಯಿತು. ಅವಳು ಲೇಯಸನ ಕಥೆಯನ್ನು ಈಡಿಪಸ್‌ನಿಗೆ ನಿವೇದಿಸಿದಳು. ಫೀಬಸ್ ಅಪೋಲೋ ದೇವನ ದೈವದವನು ಲೇಯಸನಿಗೊಂದು ಭವಿಷ್ಯ ಹೇಳಿದ್ದನು, ಜೋಕಾಸ್ಟಾಳಲ್ಲಿ ಹುಟ್ಟಿದ ಮಗನ ಕೈಯಲ್ಲಿಯೇ ಲೇಯಸನ ಕೊಲೆಯಾಗುವುದೆಂದು. ಆದರೆ ಹಾಗೆ ಆಗಲಿಲ್ಲ, ಮಗನಿಂದ

ಸಾವು ಬರಬಾರದೆಂದು ಲೇಯಸ್ ತನ್ನ ಮಗ ಹುಟ್ಟಿದ ಮೂರು ದಿನಗಳಲ್ಲಿಯೇ ಮಗುವಿನ ಕಾಲ ಹರಡುಗಳನ್ನು ಭೇದಿಸಿ ಆ ಛಿದ್ರಗಳಲ್ಲಿ ಬೇಡಿಗಳನ್ನು ಜಡಿದು ಈ ಕೂಸನ್ನು ಯಾವುದೋ ಬಟ್ಟೆಗಟ್ಟಿ ಗುಡ್ಡದ ಓರೆಯಲ್ಲಿ ಯಾರಿಂದಲೊ ಒಗೆಯಿಸಿಬಿಟ್ಟಿದ್ದನು. ಕಾಲಾಂತರದಲ್ಲಿ ಲೇಯಸ್ ದೊರೆ ರಾಜಧಾನಿಯಿಂದ ಎಲ್ಲೋ ಮೂರು ದಾರಿಗಳ ಕೂಟದಲ್ಲಿ ಕೊಳ್ಳೆಗಾರರ ಕೈಯಿಂದ ಮಡಿದನು.

ಅಂದಮೇಲೆ ಅಪೋಲೋ ಒಡನುಡಿದ ಭವಿಷ್ಯ ಸುಳ್ಳಾಯಿತು. ಲೇಯಸ್ ಮಗನ ಕೈಯಿಂದ ಸಾಯಲೇ ಇಲ್ಲ! ಆದರೆ ಈ ಹಿಂದಿನ ಕತೆಯನ್ನು ರಾಣಿಯ ಬಾಯಿಂದ ಕೇಳುತ್ತಿದ್ದಂತೆ ಈಡಿಪಸ್ ಶಾಂತವಾಗುವ ಬದಲು ಇನ್ನೂ ಉದ್ವಿಗ್ನನಾದನು. ಲೇಯಸ್ ಮೂರು ದಾರಿಗಳ ಕೂಟದಲ್ಲಿ ಮಡಿದನೆಂಬುದನ್ನು ಕೇಳಿದಾಗ ಅವನಲ್ಲಿ ಹಳೆಯ ನೆನಹು ಒಂದು ಜಾಗೃತವಾಯಿತು.

ಈಡಿಪಸ್ ರಾಣಿಯನ್ನು ಕೇಳಿದನು. “ಲೇಯಸ್ ಕಾಣಲು ಹೇಗೆ ಇದ್ದ?” ಜೋಕಾಸ್ಟಾ ಅಂದಳು, “ಆತ ಆಕಾರದಲ್ಲಿ ನಿನ್ನಂತೆಯೇ ನಿಲುವಿಕೆ ಎತ್ತರ. ಕೂದಲು ಆಗಲೆ ಅದೇ ನೆರೆತಿದ್ದವು.” ಇದನ್ನು ಕೇಳಿದೊಡನೆ ಈಡಿಪಸ್ ಬೆಚ್ಚಿಬಿದ್ದನು.

ಲೇಯಸನ ಕೊನೆಯ ಪ್ರಯಾಣದ ಕುರಿತು ಈಡಿಪಸನಿಗೆ ವಿವರಗಳು ತಿಳಿದುಬಂದವು. ರಾಯಭಾರಕ್ಕೆಂದು ಹೊರಟಾಗ ಲೇಯಸನೊಂದಿಗೆ ಐದು ಜನರ ಸಿಬ್ಬಂದಿ ಇತ್ತು. ಲೇಯಸ್ ರಥದಲ್ಲಿ ಇದ್ದನು. ಎಲ್ಲರ ಕೊಲೆ ಆದಾಗ ಒಬ್ಬ ಆಳು ಮಾತ್ರ ಜೀವ ಹಿಡಿದುಕೊಂಡು ಹೇಗೋ ಬಂದಿದ್ದನು. ಆದರೆ ಈಡಿಪಸ್ ದೊರೆ ಆದದ್ದನ್ನು ಅವನು ಕಂಡಾಗ ರಾಣಿಯ ಬಳಿಗೆ ಬಂದು ಹಟ ಹಿಡಿದು ನಿವೃತ್ತಿ ಹೊಂದಿ ಥೀಬೀಸ್‌ನಿಂದ ಬಲುದೂರ ಗುಡ್ಡಗಾಡಿನಲ್ಲಿ ತುರುಗಳನ್ನು ಕಾಯಲು ಹೋಗಿಬಿಟ್ಟನು.

ಈ ತುರುಗಾಹಿಯ ಸುದ್ದಿಯನ್ನು ಕೇಳಿದ್ದೇ ತಡ, ಈಡಿಪಸ್ ಅವನನ್ನು ಕರೆಯಿಸಿಕೊಂಡು ಈ ರಹಸ್ಯದ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲಿಸಲು ಆತುರಪಟ್ಟನು. ಒಂದು ಗಾಢವಾದ ಗೂಢವಾದ ಮೂಢ ಸೆಳವಿಗೆ ಅವನ ಕುತೂಹಲ ಸಿಲುಕಿ ಸಾಗಿತ್ತು.

ಈಡಿಪಸ್ ತನ್ನ ಪೂರ್ವ ವೃತ್ತವನ್ನು ರಾಣಿಗೆ ಅರುಹಿದನು. ಕೊರಿಂಥ್ ದೇಶದ ದೊರೆ ಪೊಲಿಬಸ್ ಈಡಿಪಸ್‌ನ ತಂದೆ. ದೋರಿಯನ್ ರಾಜಕುಮಾರಿ ಮಿರೋಪ ಅವನ ತಾಯಿ. ಇಬ್ಬರೂ ಈಡಿಪಸ್‌ನನ್ನು ಬಹಳ ಮುದ್ದಿನಲ್ಲಿ ಬೆಳೆಯಿಸಿದ್ದರು. ಆದರೆ ಒಮ್ಮೆ ಒಂದು ಮೇಜವಾನಿಯಲ್ಲಿ ಸೆರೆಯನ್ನು ತುಸು ಹೆಚ್ಚು ಕುಡಿದ ಒಬ್ಬನು ಈಡಿಪಸನನ್ನು "ಜಾರಜ"ನೆಂದು ಜರೆದನು. ಅವಮಾನಿತರಾದ ಈಡಿಪಸ್ ಅರಮನೆಗೆ ಬಂದವನೆ ತಾಯಿ ತಂದೆಗಳಿಗೆ "ನಾನು ನಿಮ್ಮ ಮಗನಲ್ಲವೇ?" ಎಂದು ಕೇಳಿದನು. ಅವರು ನೇರವಾಗಿ ಉತ್ತರ ಕೊಡಲಿಲ್ಲ. ಸೆರೆಗುಡುಕನ ಪ್ರಲಾಪಗಳಿಗೆ ಕಿವಿಗೊಡಬಾರದೆಂದು ಮಗನನ್ನು ಸಂತೈಸಿದರು ಮಾತ್ರ.

ಈ ಕಟಕಿಯನ್ನು ಇತ್ಯರ್ಥ ಮಾಡಿಕೊಳ್ಳಲು ಅವನು ದೇವರ "ಕೌಲು" ಕೇಳಲು ಹೋದನು. ಆದರೆ ಅಪೋಲೊನ ದೈವದವನು ಅವನ ಜನ್ಮ ರಹಸ್ಯವನ್ನು ತಿಳಿಸದೆ ಅದಕ್ಕೂ ಘೋರವಾಗಿದ್ದ ಇನ್ನೇನೆಲ್ಲ ಭವಿಷ್ಯವನ್ನು ನುಡಿದನು: "ನೀನು ಮಾತೃಗಾಮಿಯಾಗುವಿ, ನಿನ್ನ ಮಕ್ಕಳೇ ನಿನ್ನ ಒಡಹುಟ್ಟಿದವರಾಗುವರು. ಅದಕ್ಕೆ ಮೊದಲು ನೀನು ತಂದೆಯನ್ನೇ ಕೊಲ್ಲುವಿ, ಹಗಲ ಕಣ್ಣಿಗೆ ಅಸಹ್ಯವಾದ ಪೀಳಿಗೆ ನಿನ್ನದಾಗುವುದು."

ಈ ಭಯಾನಕ ಭವಿಷ್ಯದಿಂದ ಪಾರಾಗಲು ಈಡಿಪಸ್ ಕೊರಿಂಥದಿಂದಲೇ ಕಾಲ್ದೆಗೆದನು. ಅಲ್ಲಿಂದ ದೂರ, ಬಲುದೂರ ದಿಕ್ಕುಗೆಟ್ಟು ಅಲೆಯುತ್ತ ಫ್ಲೆಕಿನ್ ಎಂಬಲ್ಲಿಗೆ ಬಂದು ತಲುಪಿದನು. ಇಲ್ಲಿ ಡೆಲ್ಫಿಯಿಂದ ಒಂದು, ಡೌಲಿಯಿಂದ ಒಂದು ಬಾರಿ ಬಂದು ಕೂಡಿದ ಮೂರು ದಾರಿಗಳ ಕೂಟವಾಗಿತ್ತು. ಈ ದಾರಿ ಕೂಟವನ್ನು ಸಮೀಪಿಸುತ್ತಿರುವಾಗಲೇ ಒಬ್ಬ ದೊರೆಯ ವಂದಿ ಮಾಗಧನು ಪಾದಚಾರಿಯಾದ

ಈಡಿಪಸನನು ಅಡ್ಡೈಸಿದನು. ಅವನ ಬೆನ್ನಿಗೇ ರಥದಲ್ಲಿ ದೊರೆ ಇದ್ದನು. ದೊರೆಗೆ ದಾರಿ ಬಿಡೆಂದು ಅವನನ್ನು ಈ ರಥದವರು ಹಾದಿಯಿಂದ ತಳ್ಳಲು ಏರಿಬಂದರು. ಅದಕ್ಕೆ ಸಿಡಿದೆದ್ದ ಈಡಿಪಸ್ ಸಾರಥಿ ವಂದಿ ಮಾಗದರಿಗೆ ಬಲವಾಗಿ ಏಟು ಬಿಗಿದನು. ಈಗ ದೊರೆ ತನ್ನ ಕೈಯೊಳಗಿನ ಎರಡು ಮುಳ್ಳಿನ ಶೂಲದಿಂದ ಈಡಿಪಸ್‌ನ ತಲೆಯನ್ನು ತಿವಿದನು. ಕ್ಷುಬ್ಧನಾಗಿ ಈಡಿಪಸ್ ತನ್ನ ಕೈಯ ದೊಣ್ಣೆಯಿಂದಲೆ ಈ ದೊರೆಯನ್ನು ಬಲವಾಗಿ ಬಡಿದನು. ಈ ಪಟ್ಟಿಗೆ ದೊರೆ ರಥದಿಂದ ಉರುಳಿದನು. ಈಡಿಪಸ್ ಕೈಗೆ ಸಿಕ್ಕ ಎಲ್ಲರನ್ನೂ ಸಾಯ ಹೊಡೆದು ಮುನ್ನಡೆದನು.

ಆದರೆ ಈ ಸತ್ತ ದೊರೆ ಜೋಕಾಸ್ಟಾಳ ಗಂಡ ಲೇಯಸ್ ಎಂದು ಮಾತ್ರ ಈಡಿಪಸನಿಗೆ ಗೊತ್ತಿದ್ದಿಲ್ಲ. ಈಗ ಗೊತ್ತಾಯಿತು. ಅವನಿಗೆ ಅರಿಯದೇ ಆದ ಈ ಕೊಲೆಪಾತಕಕ್ಕಾಗಿ ಈಡಿಪಸ್ ಬಹಕ ಹಳಹಳಿಸಿದನು. ಮಾತೃಗಮನದ ಮಹಾಪಾತಕದಿಂದ ತಪ್ಪಿಸಿಕೊಳ್ಳಲು ಓಡಿ ಬಂದು ತಾನೇ ವಧಿಸಿದವನ ವಿಧವೆಯ ಸಮಾಗಮದ ಪಾಪವನ್ನು ಆತನು ಅಪ್ಪಿಕೊಂಡಂತಾಗಿತ್ತು!

ಇದ್ದುದರಲ್ಲಿ ರಾಣಿ. ಜೋಕಾಸ್ಟಳಿಗೆ ಒಂದು ಸಮಾಧಾನ – ಈಡಿಪಸ್ ಪಿತೃಹತ್ಯಾದೋಷದಿಂದ ಮುಕ್ತನೆಂದು. ಏಕೆಂದರೆ ಅವನೇ ಲೇಯಸ್‌ನ್ನು ಕೊಂದವನೆಂದು ಇಟ್ಟುಕೊಂಡರೂ ಅವನ ತಂದೆ ಕೋರಿಂಥದ ಪೊಲಿಬಸ್ ದೊರೆ. ಲೇಯಸ್‌ನ ಮಗ ಎಂದೋ ಹುಟ್ಟಿದಾಗಲೇ ಸಾಯಲು ಕಾಡುಪಾಲಾಗಿದ್ದನು.

ಆದರೂ ರಾಜಾ ಈಡಿಪಸ್‌ನಿಗೆ ಈ ಒಗಟು ಒಡೆಯಲೇಬೇಕು. ಗೂಢ ಗೊತ್ತಾಗಬೇಕು. ಅವನ ವಿಧಿ ಅವನನ್ನು ಮುನ್ನೂಕುತ್ತಿತ್ತು. ಅವನು ರಾಣಿಗೆ ಹೇಳಿದನು: "ಆ ಮುದಿ ಕುರುಬನನ್ನು ಕರೆಯಿಸಿಕೊಳ್ಳು."

ಅಷ್ಟರಲ್ಲಿ ಕೋರಿಂಥದಿಂದಲೇ ಒಬ್ಬ ದೂತನು ಬಂದನು. ಆ ಮುದುಕನು ಈಡಿಪಸನಿಗೆ ಆನಂದದ ವಾರ್ತೆಯನ್ನು ತಂದಿದ್ದನು. ಅವನ ತಂದೆ ಪೊಲಿಬಸ್

ವೃದ್ಧಾಪ್ಯದಿಂದ ಮಡಿದಿದ್ದು ಇನ್ನು ಕೋರಿಂಥ ರಾಜ್ಯಕ್ಕೆ ಈಡಿಪಸನೇ, ರಾಜನಾಗಬೇಕು. ತಂದೆಯ ಸಾವಿನ ಈ ಸಮಾಚಾರವು ಈಡಿಪಸನಿಗೆ ಅದಕ್ಕೆ ಹೆಚ್ಚಾಗಿ ರಾಣಿಗೆ ಆನಂದವನ್ನೇ ತಂದಿತು. ಏಕೆಂದರೆ ಈ ಮಗನು ದೂರ ದೇಶದಲ್ಲಿ ಇರುವಾಗಲೇ ಆ ತಂದೆ ಸತ್ತನಷ್ಟೇ ಈಡಿಪಸನಿಗೆ ಪಿತೃಹತ್ಯಾದೋಷವು ತಾಗಲಿಲ್ಲವಲ್ಲ!

ಆದರೆ ಮಾತೃಗಮನದ ಮಹಾಪಾತಕ? ಅದಕ್ಕೆ ಹೆದರಿ ಈಡಿಪಸ್ ಕೋರಿಂಥಕ್ಕೆ ಹೋಗಲು ಸಿದ್ಧನಾಗಲಿಲ್ಲ. ಜೋಕಾಸ್ಟಾ ಬುದ್ಧಿ ಹೇಳಿದಳು: "ಹೆದರಬೇಡ, ಎಲ್ಲವೂ ಯೋಗಾಯೋಗ ಮಾತೃತಲ್ಪಗಮನ ಸಾಧ್ಯವಿಲ್ಲ, ಮಾತೆ ಮಿರೋಪಳು ತೀರ ಮುದುಕಿ, ಅಲ್ಲದೆ ಎಷ್ಟು ಜನರು ಕನಸಿನಲ್ಲಿ ಈ ಪಾಪವನ್ನು ಆಚರಿಸಿದ್ದಿಲ್ಲ? ನನಸೇನು ಕನಸೇನು. ದೋಷ ಯಾರಿಗೆ ತಪ್ಪಿದೆ?"

ಆದರೂ ಈಡಿಪಸ್‌ನಿಗೆ ಅಪೋಲೊನ 'ದೈವ' ದವನು ಒರೆದ ಭವಿಷ್ಯ ವಾಣಿಯ ಭಯ, ಆದರೆ ಕೋರಿಂಥದ ಆ ವೃದ್ಧ ದೂತನು ಆ ಭಯವನ್ನು ನಿವಾರಿಸಲು ಈಡಿಪಸ್‌ನ ಬಾಲ್ಯದ ವೃತ್ತಾಂತವನ್ನು ಹೇಳಿದನು.

ನಿಜವಾಗಿ ಈಡಿಪಸ್ ಪೋಲಿಬಸ್ ಮಿರೋಪರ ಮಗನೇ ಅಲ್ಲ! ಅವರು ಆ ಕೂಸನ್ನು ಸಾಕಿ ಬೆಳೆಸಿದ್ದು ಹಾಗಾದರೆ ಈಡಿಪಸ್ ಆ ನಿಪುತ್ರಿಕ ರಾಜದಂಪತಿಯ ಕೈಗೆ ಬಂದದ್ದು ಹೇಗೆ? ಅದಕ್ಕೆ ಮುದುಕ ಹೇಳಿದನು:

"ಆಗ ನಾನು ಸಿಥೆಯಿರಾನ್ ಗುಡ್ಡಗಳಲ್ಲಿ ಕುರಿ ಕಾಯುತ್ತಿದ್ದೆನು. ಅಲ್ಲಿ ಇನ್ನೊಬ್ಬ ಕುರುಬನು ಆ ಕೂಸನ್ನು ನನಗೆ ಕೊಟ್ಟನು. ಕೂಸಿನ ಕಾಲಿನ ನರಗಳನ್ನು ಬಿಗಿದ ಬೇಡಿಗಳನ್ನು ಕಡಿದುಹಾಕಿ ಅದನ್ನು ನಾನು ಕಕುಲಾತಿಯಿಂದ ಆರೈಸಿದೆನು. ಕೂಸನ್ನು ಸುತ್ತಿದ ಬಟ್ಟೆಯಿಂದಲೇ ನಿನಗೆ ಈಡಿಪಸ್ ಎಂದು ಹೆಸರು ಇಟ್ಟದ್ದು."

ಈ ಮಾತು ಕೇಳುತ್ತಲೆ ಈಡಿಪಸ್‌ನಿಗೆ ಗರ ಬಡಿದಂತೆ ಆಯಿತು. ಕಾಲೂರಿದಲ್ಲಿ ನೀರಿನ ಆಳ ಹೆಚ್ಚುತ್ತ ಹೋದಂತೆ ಅನಿಸಿತು. ಲೇಯಸನ ಆಳಾಗಿದ್ದ ಕುರುಬನನ್ನು

ಕಂಡುಹಿಡಿಯಲೇಬೇಕು. ಬೇಡ ಬೇಡವೆಂದು ಜೋಕಾಸ್ಟಾ ಅಂಗಲಾಚಿ ಬೇಡಿಕೊಂಡಳು. ಆ ಗುಟ್ಟು ರಟ್ಟಾಗುವುದು ಬೇಡ. ಅದರಲ್ಲಿ ಯಾರಿಗೂ ಹಿತವಲ್ಲ, ಸುಖವಿಲ್ಲ ಎಂದು ಆಕೆಗೆ ಗೊತ್ತು.

ಆದರೆ ಈಡಿಪಸ್ ಸತ್ಯದ ಬೇಟೆಗೆ ಹೊರಟಿದ್ದನು. ಬೇಟೆಯ ಕಾವು ನೆತ್ತಿಗೇರಿತು. ಅವನು ಕುರುಬನನ್ನು ಕರೆದು ತರಲು ಇನ್ನೊಬ್ಬ ಆಳನ್ನು ಅಟ್ಟಿದನು.

ಕೊನೆಗೂ ಆ ಮುದಿ ಕುರುಬನು ಬಂದನು. ಮೊದಲಿಗೆ ಆತನು ಆ ಪೂರ್ವಚರಿತ್ರವನ್ನು ಹೇಳಲು ಒಪಲಿಲ್ಲ. ಆದರೆ ರಾಜನು ಬಿಡುವನೇ? ಆಳುಗಳಿಂದ ಆ ಮುದುಕನ ತೋಳುಗಳನ್ನು ತಿರುಗಿಸಿ ಹಿಂಡಿಸಹಚ್ಚಿದನು. ಸೈರಿಸಲಾರದೆ ಮುದುಕನು ತನ್ನ ಕಥೆಯನ್ನೂ ರಾಜನ ಕರ್ಮಕಥೆಯನ್ನೂ ವಿವರಿಸಿದನು.

ಸಿಥೆಯಿರಾನ್ ಗುಡ್ಡದೋರೆಯಲ್ಲಿ ಆತನು ದೊರೆ ಲೇಯಸ್‌ನ ಕುರಿ ಹಿಂಡುಗಳನ್ನು ಕಾಯುತ್ತಿದ್ದಾಗ ಈ ಕೋರಿಂಥದ ಕುರುಬನಿಗೆ ಅವನೇ ಈ ಕೂಸನ್ನು ಒಪ್ಪಿಸಿದ್ದನು. ಅದು ಲೇಯಸ್ ದೊರೆಯದೇ ಕೂಸಾಗಿತ್ತು. “ಅದನ್ನು ನಿನ್ನ ಕೈಗೆ ಕೊಟ್ಟವರು ಯಾರು?” ಈಡಿಪಸ್ ಕೂಗಿದನು, ಮುದುಕ ಗಡುಸಾಗಿಯೇ ಅಂದನು: “ನಿಮ್ಮ ರಾಣಿಯನ್ನೇ ಕೇಳಿರಿ ಅವರೇ ಆ ಕೂಸನ್ನು ನನ್ನ ಕೈಗೆ ಒಪ್ಪಿಸಿ ಬೆಟ್ಟದಲ್ಲಿ ಒಗೆದು ಬರಲು ಕಟ್ಟಪ್ಪಣೆ ಮಾಡಿದರು.” ಲೇಯಸ್‌ನ ಕುರಿತ ದೇವರ ಪ್ರವಾದ ಸುಳ್ಳಾಗಬೇಕೆಂದು ಅವಳು ಹಾಗೆ ಮಾಡಿದ್ದಳು.

ಆದರೆ ಕುರುಬರಿಗೂ ಕರುಳುಂಟು, ಕೊಲ್ಲಲು ಕೊಟ್ಟ ಕೂಸನ್ನು ಅವನು ಕೋರಿದಂಥ ಕುರುಬನಿಗೆ ಒಪ್ಪಿಸಿದನು. ಹೀಗೆ ಈ ಶಿಶುವು ಬೇರೆಡೆಯಲ್ಲಿ ಬೆಳೆದು ಬಂದು ಅಪೋಲೋನ ಶಾಪವಾಣಿಯನ್ನು ಕೊನೆಗೂ ಸತ್ಯ ಮಾಡಿತು.

ಎಂಥ ಮಹಾಪಾತಕ ಘಟಿಸಿತ್ತು. ಈಡಿಪಸನಿಂದ ತಂದೆಯನ್ನು ಕೊಂದನು ಮಾತ್ರವಲ್ಲ ತನ್ನ ತಾಯಿಗೇ ಗಂಡನಾದನು! ಅವನ ಮಕ್ಕಳಿಗೆ ಅವನೇ ಅಣ್ಣ! ತಾನು ಹುಟ್ಟಿದ ಕ್ಷೇತ್ರದಲ್ಲಿಯೇ ತನ್ನ ಬೀಜವನ್ನು ಬಿತ್ತಿ ಈ ಪಾಪದ ಪೈರು ಬೆಳೆದುಕೊಂಡನು.

ಜೋಕಾಸ್ಟಾ ಅಂತಃಪುರಕ್ಕೆ ಓಡಿದಳು. ತನ್ನ ರಾಜಶಯ್ಯೆಯ ಬಳಿಗೆ ಹೋಗಿ ಅದನ್ನು ಶಪಿಸಿದಳು. ಸತ್ತ ಪತಿಯ ಹೆಸರೆತ್ತಿ ಆಕ್ರೋಶ ಮಾಡಿದಳು: "ನಮ್ಮ ಉದರದಲ್ಲಿ ಹುಟ್ಟಿದವನೇ ನಿನ್ನನ್ನು ಕೊಂದು ನನ್ನಲ್ಲಿ ತನ್ನ ಪಾಪದ ಪೀಳಿಗೆಯನ್ನು ಹುಟ್ಟಿಸುವಂತೆ ಆಯಿತೇ!" ಎಂದು ಹಲುಬಿದಳು. ಕೂದಲು ಕಿತ್ತುಕೊಂಡಳು. ಅಷ್ಟರಲ್ಲಿ ಈಡಿಪಸ್ ಅಲ್ಲಿಗೆ ದುಃಖೋನ್ಮತ್ತನಾಗಿ ತತ್ತರಿಸುತ್ತ ಧಾವಿಸಿ ಬಂದನು. ಅಂತಃಪುರದ ಬಾಗಿಲು ಒಡೆದು ಒಳನುಗ್ಗಿದನು.

ಅಲ್ಲಿ ರಾಣೀ ಜೋಕಾಸ್ಟಾಳ ಹೆಣವು ನೇಣಿಗೆ ನೇತಾಡುತ್ತಿತ್ತು- ಅವಳ ಮಂಚದ ಹತ್ತಿರ, ಈ ನೇಣನ್ನು ಕೊಯ್ದು ಈಡಿಪಸ್ ರಾಣಿಯ ಕಳೇಬರವನ್ನು ಕೆಳಗೆ ನೆಲಕ್ಕೆ ಇಳಿಸಿ ಒರಗಿದನು. ಅನಂತರ ಅವನ ರೌದ್ರಾವತಾರ ಭಯಾನಕವಾಗಿತ್ತು. ಜೋಕಾಸ್ಟಳು ಬಟ್ಟೆಗಳಲ್ಲಿ ಸಿಕ್ಕಿಸಿಕೊಂಡ ಬಂಗಾರದ ಮುಳ್ಳುಗಳನ್ನು ಈಡಿಪಸ್ ಕಿತ್ತುಕೊಂಡು ಅವನ್ನು ಮೇಲಕ್ಕೆತ್ತಿ ಒಂದೇ ಸಮನೆ ತನ್ನ ಕಣ್ಣುಗುಡ್ಡೆಗಳಲ್ಲಿ ಚುಚ್ಚಿಕೊಳ್ಳಹತ್ತಿದನು! ಕಣ್ಣುಗಳಿಂದ ರಕ್ತದ ಜೀಕಳೆಗಳು ಚಿಳ್ಳೆಂದು ಚಿಮ್ಮಿ ಹಾರಿದವು. ತಾನು ಮಾಡಿದ ಮಹತ್ಪಾಪವನ್ನು ತಾನು ಇನ್ನು ನೋಡಲಾಗದು ಎಂದು ಅಂಧದೈವದ ಆಟಿಗೆಯ ಗೊಂಬೆಯಾದ ತಾನೂ ಅಂಧನಾದನು.

ಆಮೇಲೆ ರಾಜ್ಯವನ್ನೆಲ್ಲ ಕ್ರಿಯಾನನಿಗೆ ಅರ್ಪಿಸಿ ಈಡಿಪಸ್ ದೇಶಭ್ರಷ್ಟನಾಗಿ ಪಿಶಾಚಿಯಂತೆ ಬೆಟ್ಟ ಬಯಲು ತುಳಿದಾಡಲು ಹೊರಟನು. ಹೊರಡುವ ಮುಂಚೆ ಅವನ ಇಬ್ಬರು ಹೆಣ್ಣು ಮಕ್ಕಳು ಅಂತಿಗೊನೆ ಮತ್ತು ಇಸೋನೆ ಅವನಲ್ಲಿಗೆ ಬಂದರು. ಅವರನ್ನು ಎದೆಗವಚಿಕೊಂಡು ಗೋಳಿಟ್ಟನು. ಅಯ್ಯೋ? ಇಂದು ಅವನು ಅವರಿಗೆ ಯಾರು? ಅಪ್ಪನೊ? ಅಣ್ಣನೊ?

ದೇವರ ದ್ವೇಷಕ್ಕೆ ದೈವದ ಶಾಪಕ್ಕೆ ಬಲಿಯಾದ ಪಿತೃಹಂತಕ ಮಾತೃಗಾಮಿ ಈಡಿಪಸ್ ನಗರವನ್ನು ಬಿಟ್ಟು ಹೊರಬಿದ್ದನು.

ಘನವಂತ, ಪರಾಕ್ರಮಿ, ಪ್ರಜಾವತ್ಸಲ, ರಾಜ್ಯಕ್ಕೆ ಪ್ರತ್ಯಕ್ಷ ಝೂಸ್ ದೇವರಂತೆ ಇದ್ದ ದೊರೆ, ಸ್ಫಿಂಕ್ಸಳ ಎಲ್ಲ ಕೂಟ ಪ್ರಶ್ನೆಗಳಿಗೆ ಉತ್ತರ ಕೊಡಬಲ್ಲ ಜಾಣ, ಈಡಿಪಸ್! ಆದರೇನು? ದೈವದಿದಿರು ಅವನು ತಡೆಯಲಿಲ್ಲ. ಅವನು ಗೆದ್ದು ಆಳಬಯಸಿದ ಬಾಳೇ ಅವನ ಕೈಯಿಂದ ಜಾರಿತು. ದೇವರ ಶಾಪದಿಂದ ಈಡಿಪಸ್ ದೂರ ದಿಗ್ದೇಶಗಳಿಗೆ ಓಡಿದನು. ಆದರೆ ಈ ಶಾಪವು ಹೆಡೆಯೆತ್ತಿ ಬೆನ್ನಟ್ಟಿ ಬಂದು ಕರಾಳ ನೆರಳನ್ನು ಅವನ ಮೇಲೆ ಚೆಲ್ಲಿ ಅವನನ್ನು ಬೇಟೆಯಾಡಿತು.

ಯಾತನೆ-ವೇದನೆಗಳಿಂದ ಪಾರಾಗಿ ಬಾಳಿನ ಕೊನೆಯನ್ನು ಮುಟ್ಟುವ ತನಕವೂ ಯಾವ ಮರ್ತ್ಯನನ್ನೂ ಸುಖಿಯೆಂದೂ ಎಣಿಸಲಾಗದು.

# ೨. ರಿಪ್ ವಾನ್ ವಿಂಕಲ್

ಈ ಕಥೆಗೆ ೧೫೦ ವರ್ಷಕ್ಕೂ ಮಿಕ್ಕಿ ಕಾಲ ಸಂದಿರಬೇಕು. ಆಗ ಅಮೆರಿಕೆಯ ವಸಾಹತುಗಳು ಇನ್ನೂ ಬ್ರಿಟಿಷರ ಅಂಕೆಯಲ್ಲಿಯೇ ಇದ್ದವು.

ಉತ್ತರ ಅಮೇರಿಕೆಯ ನ್ಯೂಯಾರ್ಕ ರಾಜ್ಯದಲ್ಲಿ ಹಡ್ಸನ್ ಹೊಳೆಯ ಪಶ್ಚಿಮಕ್ಕೆ ಕ್ಯಾಟ್‌ಸ್ಕಿಲ್ ಗುಡ್ಡಗಳು ಇವೆ. ಆ ಗುಡ್ಡಗಳು ಕಡಿದಾಗಿವೆ. ಕಗ್ಗಾಡಿನಿಂದ ಹೊದ್ದಿವೆ. ಅವುಗಳ ಕಣಿವೆಗಳು ಕೋಟೆಯಂತೆ ನೀಟಾಗಿ ಎದ್ದು ನಿಂತಿವೆ. ಹವೆ ಚೆನ್ನಾಗಿದ್ದಾಗ ಈ ಗುಡ್ಡ ಬೆಟ್ಟಗಳು ನೀಲಿ ನೇರಲವಾಗಿ ಒಪ್ಪುತ್ತವೆ. ಆದರೆ ಬಹಳ ಸಲ ಅವುಗಳ ತುದಿಗೋಡುಗಳು ಮಂಜಿನ ಮುಸುಕಿನಲ್ಲಿ ನೆರೆಯ ಬಣ್ಣದ ಬುರುಕಿ ಮುಚ್ಚಿಕೊಂಡಂತೆ ತೋರುತ್ತದೆ. ಆ ಬುರಕಿಯ ಹಿಂದೆ ನಡೆದ ಅದ್ಭುತವಿದು.

ಸುಮಾರು ೨೦೦ ವರ್ಷಗಳ ಆಚೆಗೆ ಹಿಂಡ್ರಿಕ್ ಹಡ್ಸನ್ ಎಂಬ ಒಬ್ಬ ಸಾಹಸಿ ನಾವಿಕನು 'ಹಾಫ್ ಮೂನ್' (ಅರ್ಧ ಚಂದ್ರ) ಎಂಬ ಹಡಗದಲ್ಲಿ ತನ್ನ ನಾವಿಕ ಸಂಗಡಿಗರೊಂದಿಗೆ ಇಲ್ಲಿಗೆ ಬಂದು ಈ ಹೊಳೆಯನ್ನು ಪತ್ತೆಹಚ್ಚಿದನು. ಈ ನಾಡಿನ ಜನ ಈ ಹೊಳೆಗೆ ಅವನ ಹೆಸರನ್ನೇ ಇಟ್ಟರು. ಅವನೂ ಅವನ ನಾವಿಕ ಸಂಗಡಿಗರೂ ಸತ್ತು ಎಷ್ಟೋ ತಲೆಮಾರುಗಳು ತೀರಿದವು ಆದರೂ ಆ ನಾಡಿನವರಲ್ಲಿ ನಡೆದು ಬಂದ ಒಂದು ನಂಬಿಕೆಯೆಂದರೆ ೨೦ ವರ್ಷಕ್ಕೆ ಒಮ್ಮೆ ಹೆಂಡ್ರಿಕ್ ಹಡ್ಸನ್ ತನ್ನ ಜೊತೆಗಾರರೊಂದಿಗೆ 'ಅರ್ಧ ಚಂದ್ರ' ದಲ್ಲಿ ಈ ಕ್ಯಾಟ್‌ಸ್ಕಿಲ್ ಗುಡ್ಡಗಳ ಓರೆಗೆ ತೇಲಿ ಬರುತ್ತಾನೆ ಮತ್ತು ಒಂದು ರಾತ್ರಿ ಇಲ್ಲಿ ಅವರೆಲ್ಲರೂ ಆಟಪಾಟಗಳಲ್ಲಿ ವಿನೋದವಾಗಿ ಕಳೆಯುತ್ತಾರೆ.

ಅಂಥ ಒಂದು ರಾತ್ರಿಗೆ ಆರಂಭವಾದ ಕಥೆ ಇದು, ರಿಪ್ ವಾನ್ ವಿಂಕಲ್‌ನ ಬಣ್ಣವಿಲ್ಲದ ನುಣ್ಣಗಿನ ನಿರುಪಯೋಗಿ ಬದುಕಿನಲ್ಲಿ.

ರಿಪ್‌ವಾನ್ ವಿಂಕಲ್ ಮನೆ ಕ್ಯಾಟ್‌ಸ್ಕಿಲ್ ಗುಡ್ಡಗಳ ಬಂಡದಲ್ಲಿತ್ತು. ಹಳೆಯ ಡಚ್ ವಸಾಹತುಗಾರರು ಈ ಚಿಕ್ಕ ಊರನ್ನು ಊರಿದ್ದರು. ಮನೆ ನೋಡಲು ಅಸಡ್ಡಾಳ ಕಾಣುತ್ತಿತ್ತು. ಅದು ಹಳದಿ ಬಣ್ಣದ ಇಟ್ಟಿಗೆಗಳಿಂದ ಕಟ್ಟಿದ್ದು ಇಳಿಜಾರು ಚಪ್ಪರದ ಮೊಗಸಾಲೆ, ಚಪ್ಪರದ ತುದಿಗೆ ಗಾಳಿಯ ನಿಟ್ಟು ಕಾಣಿಸುವ 'ಗಾಳಿಕೋಳಿ'.

ರಿಪ್‌ನ ಮನೆ ಯಾವಾಗಲೂ ಹಾಳು ಸುರಿಯುತ್ತಿತ್ತು. ಮಳೆಗಾಲದಲ್ಲಿ ಮಾಡಿಸಿದ ಅಲ್ಲಲ್ಲಿ ಧಾರಾಕಾರವಾಗಿ ಸೋರುತ್ತಿತ್ತು. ಗೋಡೆಯ ಬಣ್ಣ ಮಾಡಿ ಸುಣ್ಣ ಅಳಿಸಿ ಎಷ್ಟೋ ಕಾಲವಾಗಿತು. ಮರಗೆಲಸವಲ್ಲ ಸವೆದು ಬಳಸಿ ಅಂದಗೆಟ್ಟಿತ್ತು. ಹ ಯಾವ ಬಾಗಿಲ ಕದವೂ ತಿರುಗಣೆಯ ಮೇಲೆ ಸರಿಯಾಗಿ ತಿರುಗುತ್ತಿದ್ದಿಲ್ಲ.

ಇದೇ ಅವಕಳೆಯು ರಿಪ್‌ನ ಹೊಲಕ್ಕೂ ಕವಿದಿತ್ತು. ಅಲ್ಲಿಯ ಬೇಲಿ ಎಲ್ಲ ಮುರಿದು ಬಿದ್ದಿತ್ತು. ಅವನ ಮನೆಯ ದನ ಅಥವಾ ನೆರೆಹೊರೆಯವರ ಹಂದಿಗಳು ಆ ಹೊಲದಲ್ಲಿ ಯಥೇಚ್ಛ ಅಲೆಯುತ್ತಿದ್ದವು- ಅಲ್ಲಿ ಬೆಳೆಯುವ ಬಟಾಟೆ (ಆಲೂಗಡ್ಡೆ) ಮತ್ತು ಕ್ಯಾಬೇಜು ಮೇಯುತ್ತ.

ರಿಪ್ ಇದನ್ನೆಲ್ಲ ನೋಡಿಯೂ ನೆಮ್ಮದಿಯಾಗಿದ್ದನು. ಹೀಗೆ ಪ್ರಾಣಿಗಳು ಹಾಯಾಗಿ ಹೆದರಿಕೆಯಿಲ್ಲದೆ ತನ್ನ ಹೊಲದಲ್ಲಿ ಸುಳಿದಾಡುವುದು ಕಂಡೇ ಅವನಿಗೆ ಬಂದು ಬಗೆಯ ಸುಖ. ಆದರೆ ಅವನ ಹೆಂಡತಿಗೆ ಗಂಡನ ಈ ತುಕಾರಾಮೀ ತೃಪ್ತಿಯ ಬಗೆಗೆ ತುಂಬ ಮನಸ್ತಾಪ. ಈತ ಇಷ್ಟು ಸೋಮಾರಿಯಾಗಿ ಉದಾಸೀನನಾಗಿ ಇರುವದು ಅವಳಿಗೆ ಏನೂ ಸೇರುತ್ತಿದ್ದಿಲ್ಲ. ಆದರೆ ಅವನನ್ನು ತಿದ್ದಲು ಹೆಣಗಿ ಅವಳು ಸೋತುಹೋಗಿದ್ದಳು. ಅವನ ಮೈಗೆ ಹೊಸ ಅಂಗಿ ಏರಿದ್ದು ಯಾರೂ ಕಂಡಿದ್ದಿಲ್ಲ. ಅವನು ಹ್ಯಾಟು ಎಂದೂ ತೊಟ್ಟಿದ್ದಿಲ್ಲ. ಅವನ ಚಣ್ಣದ ಮೊಣಕಾಲಿಗೆ ಯಾವಾಗಲೂ ತೇಪೆಹಾಕಿದ್ದೇ ಮತ್ತು ಅವನ ಅಚ್ಚನೀಲಿ ಶರ್ಟು ಸದಾ ಕಾಲವೂ ಕೂರಳಪಟ್ಟಿ ತೆರೆದೇ ಇರುತ್ತಿತ್ತು.

ರಿಪ್‌ನ ವೇಷಭೂಷೆ ಹೀಗಿದ್ದರೆ ಅವನ ನೀಲಿ ಕಣ್ಣುಗಳು ಯಾವಾಗಲೂ ಹಿಗ್ಗಿನ ನಗೆ ಸೂಸುವವು. ನಡಿಗೆಯಲ್ಲಿ ಒಂದು ಹಗುರಾದ ಸೊಬಗಿನ ಮೋಡಿ ಊರ ಮಕ್ಕಳಿಗೆಲ್ಲ ರಿಪ್ ಎಂದರೆ ಹಿಗ್ಗೇ ಹಿಗ್ಗು. ಮಕ್ಕಳ ಹಿಂಡು ಹಿಂಬಾಲಿಸುತ್ತಲಿರಲು ಕೇರಿ ಎಲ್ಲ ಅಲೆದಾಡುವ ರಿಪ್ ಊರಿಗೆ ಒಂದು ನಿತ್ಯದ ನೋಟ.

ಅವರಿಗಾಗಿ ರಿಪ್ ಆಟಿಗೆ ತಯಾರಿಸುವವನು, ಪಟ ಹಾರಿಸುವನು, ತಿರ್ರನೆ ಬೊಗರಿ ತಿರುಗಿಸುವನು, ಹಾಳೆಯ ಹಡಗಗಳನ್ನು ಮಾಡಿ ಹಾಯಿಕಟ್ಟಿ ತೇಲಿ ಬಿಡುವನು, ಏನೂ ಇಲ್ಲದಿದ್ದರೆ ಪುಟ್ಟ  ಕೈತಟ್ಟಿ ತಾಳ ಹಾಕಿ ಪುಟ್ಟ ಕಾಲುಗಳು ಥೈ ಥೈ ಕುಣಿಯುವಂತೆ ರಿಪ್ ತನ್ನ ಹಳೆಯ ಪಿಟೀಲು ತೆಗೆದು ಮೇಲೆ ಒಳ್ಳೆಯ ಹುರುಪಿನ ಗತ್ತುಗಳನ್ನು ನುಡಸುತ್ತಿದ್ದನು. ಊರಲ್ಲಿ ಅತಿ ಜಾಣನು ಯಾರೆಂದು ಯಾವ ಮಕ್ಕಳಿಗೂ ಕೇಳಿ, ಅಂದರೆ ಅವರ ಒಕ್ಕೊರೊಳ ಉತ್ತರ ಒಂದೇ- “ರಿಪ್ ವಾನ್ ವಿಂಕಲ್!”

೨

ರಿಪ್‌ನ ಹೆಂಡತಿಗೆ ಇದೆಲ್ಲ ಸೇರುತ್ತಿದ್ದಿಲ್ಲ. ಅವನು ಹಾಗೆಯೇ ಕೆಲಸ ಗೇಡಿಯಾಗಿ ಹೊತ್ತುಗಳೆದರೆ ಮನೆಯೇ ಹಾಳಾಗುವದೆಂದು ಆಕೆಗೆ ಹೆದರಿಕೆ. ಆದರೇನು? ಆಕೆ ಹಾಗೇನಾದರೂ ಎಚ್ಚರಿಕೆ ಕೊಟ್ಟರೆ, ರಿಪ್ ಹೆಗಲು ಹಾರಿಸಿ ಕಣ್ಣು ಮಿಟುಕಿಸಿ ಅವಳತ್ತ ನೋಡಿ ಲೋಕಾಭಿರಾಮವಾಗಿ ನಕ್ಕುಬಿಡುವನು. ಆಕೆ ಪುಟ್ಟ ಬಾಲೆ ಜ್ಯೂಡಿಥ್‌ಳನ್ನು ಅವನ ಕೆಗೆ ಕೊಟ್ಟು ಮನೆಗೆಲಸಕ್ಕೆ ಹೊರಡುವಳು. ಕಿರಿಯ ರಿಪ್ ತಂದೆಯ ಹಳೆಯ ಅಂಗಿಯಿಂದಲೇ ಹೊಲಿದ ಬಟ್ಟೆ ತೊಟ್ಟುಕೊಂಡು ತಾಯಿಯ ಬೆನ್ನಿಗೆ ಓಡುವನು.

ರಿಪ್ ಕೆಲಸಗೇಡಿ ಅಹುದು, ಆದರೆ ಆತ ಮೈಗಳ್ಳನಾಗಿದ್ದಿಲ್ಲ. ಮಂದಿಯ ಯಾವ ಕೆಲಸಕ್ಕೂ ಆತ ಸದಾಕಾಲ ಒಂದು ಕಾಲ ಮೇಲೆ ಸಿದ್ಧ! ನೆರೆಹೊರೆಯವರ

ಹಿತ್ತಲು ಅಗೆಯುವದಕ್ಕೆ ಹೋಗಿ ತನ್ನ ಹೊಲವನ್ನು ಬಿರುಸು ಕಲ್ಲಾಗುವಂತೆ ಹಾಳುಗೆಡಹುತ್ತಿದ್ದನು. ಊರ ಹೆಂಗಳೆಯರಿಗಾಗಿ ಬಿಟ್ಟಿಚಾಕರಿಗೆ ಓಡಾಡಲು ರಿಪ್‌ನಿಗೆ ಹೇಳಬೇಕು. ಒಂದೆರಡು ಹಕ್ಕಿ ಹೊಡೆಯಲು ಆತ ಕೋವಿ ಹೆಗಲಿಗೇರಿಸಿ ದೂರ ಬೆಟ್ಟದಲ್ಲಿ ಅಲೆದಾಡುತ್ತಿದ್ದ. ಅಥವಾ ದಿನವೆಲ್ಲ ಹೊಳೆಯಲ್ಲಿ ಗಾಳಹಾಕುತ್ತ ಎಲ್ಲಿಯೊ ಒದ್ದೆ ಬಂಡೆಯ ಮೇಲೆ ದಿನವಿಡೀ ಕೂತುಬಿಡುತ್ತಿದ್ದ. ಅವನ ದೈವ ತೆರೆದು ಏನಾದರೊಂದು ಹಕ್ಕಿ ಮೀನು ಕೈಗೆ ಸಿಕ್ಕರೆ ಆತ ಮನೆ ಸೇರುವ ಮುಂಚೆಯೇ ಅದನ್ನು ನೆರೆಹೊರೆಯ ಯಾರಿಗಾದರೂ ಕಾಣಿಕೆಯಾಗಿ ಕೊಟ್ಟೊ ಬರುತ್ತಿದ್ದನು.

ಇದೆಲ್ಲ ದಿನಚರಿಯಲ್ಲಿ ರಿಪ್‌ನ ಎಡೆಬಿಡದ ಒಡನಾಡಿ ಅವನ ನಾಯಿ "ವೂಲ್ಫ್" ಮರದಡಿಯಲ್ಲಿ ಕೂತು, ತನ್ನ ಬುತ್ತಿ ಬಿಚ್ಚಿ ನಾಯಿಯೊಂದಿಗೆ ಹಂಚಿ ತಿನ್ನುತ್ತ ಗಂಟೆಗಟ್ಟಳೆ ಆ ಮೂಕ ಪ್ರಾಣಿಯೊಂದಿಗೆ ರಿಪ್ ಹರಟೆ ಹೊಡೆಯುತ್ತಿದ್ದನು. ಅದು ಎಲ್ಲವನ್ನೂ ತಿಳಿದಂತೆ ತಲೆದೂಗುತ್ತಿತ್ತು!

ಸಂಜೆಯಾದೊಡನೆ ರಿಪ್‌ನು ಸಿಗುವ ಸ್ಥಳ ನಿಕೊಲಸ್ ವೆಡ್ಡರನ ಖಾನಾವಳಿ. ಅಲ್ಲಿ ಬೇಸಿಗೆಯಲ್ಲಿ ಬಾಗಿಲ ಹೊರಗೆ ಬೆಂಚಿನ ಮೇಲೆ, ಚಳಿಗಾಲದಲ್ಲಿ ಒಳಗೆ ಬೆಂಕಿಯ ಹತ್ತರ ರಿಪ್ ಇತರ ಗ್ರಾಮಪ್ರಮುಖರ ಗುಂಪಿನಲ್ಲಿ ಮದ್ಯ ಹೀರುತ್ತ ಕೂಡ್ರುತ್ತಿದ್ದನು. ಖಾನಾವಳಿಯ ಬಾಗಿಲಲ್ಲಿ ಬ್ರಿಟಿಷ್ ರಾಜ ಮೂರನೇ ಜಾರ್ಜನ ಬಣ್ಣದ ಚಿತ್ರ ತೂಗಹಾಕಿತ್ತು. ಅಲ್ಲಿ ನೆರೆದವರು ರಾಜನ ಆರೋಗ್ಯಕ್ಕಾಗಿ ಸ್ವಪ್ತಿಪಾನ ಮಾಡುತ್ತಿದ್ದರು.

೨

ಒಂದು ಬೇಸಿಗೆಯ ಸಂಜೆಗೆ, ರಿಪ್‌ವಾನ್ ವಿಂಕಲ್ ಕೋವಿಯನ್ನು ಹೆಗಲಿಗೇರಿ 'ವೂಲ್ಫ್' ನಾಯಿಯನ್ನು ಅನುಯಾಯಿಯಾಗಿಟ್ಟುಕೊಂಡು ಕ್ಯಾಟ್‌ಸ್ಕಿಲ್ ಗುಡ್ಡಗಳಲ್ಲಿ ಸುತ್ತಾಡಲು ಹೊರಟನು. ಆ ಸಂಜೆಗೆ ಅವನು ರಾಜನಿಷ್ಠೆಯನ್ನು

ಎಂದಿಗಿಂತ ತುಸು ಹೆಚ್ಚಾಗಿಯೇ ಪ್ರದರ್ಶಿಸಿದ್ದನು. ರಾಜನ ಆಯುರಾರೋಗ್ಯಕ್ಕಾಗಿ ನಿತ್ಯಕ್ಕಿಂತ ಹೆಚ್ಚು ಸಲ ಗ್ಲಾಸು ಬರಿದು ಮಾಡಿದ್ದನು.

ಅವನಿಗೆ ತಾನು ಎತ್ತ ಸಾಗಿದ್ದೇನೆಂಬ ಎಚ್ಚರವೇ ಪೂರ್ತಿ ಇದ್ದಿಲ್ಲ. ಇಲ್ಲವಾದರೆ ಗಾಳಿ, ಗುಡುಗು ಮಿಂಚು, ಬಿರುಗಾಳಿ ಬೀಸುವ ಆ ಸಂಜೆಗೆ ಆತ ಆ ಗುಡ್ಡಗಳಲ್ಲಿ ಹೋಗಬೇಕೆ? ವಿಚಾರ ಮಾಡದೇ ರಿಪ್ ಬೆಟ್ಟದ ಒಂದು ಎತ್ತರದ ತುದಿಯನ್ನು ಏರಿ ಉಬ್ಬಸವಿಡುತ್ತ ಮೈಕೈ ಸೋತುಹೋಗಿ ಒಂದು ಕಡಿದಾದ ಬಂಡೆಯ ಅಂಚಿಗೆ ನೆಲದ ಮೇಲೆ ಅಡ್ಡಾದನು- ದಣಿವಾರಿಸಿಕೊಳ್ಳಲಿಕ್ಕೆ ದೂರದಿಂದ ಒಂದು ದನಿ ಕೇಳಿಬಂದಿತು. “ರಿಪ್ ವಾನ್ ಏಂಕಲ್! ರಿಪ್ ವಾನ್ ವಿಂಕಲ್!”

ಒಂದು ಕೋಲ್ಮಿಂಚು ಕಳಗಿನ ಇಕ್ಕಟ್ಟಿನ ಕಣಿವೆಯನ್ನು ಬೆಳಗಿತು. ಅದು ಹೆಬ್ಬಂಡೆಗಳಿಂದ ತುಂಬಿತ್ತು. ಒಮ್ಮ ದೊಡ್ಡ ಶಿಲೆಗಳು ಮೇಲೆ ತೂಗುಬಿದ್ದವು. ಯಾವ ಜೀವಂತ ಪ್ರಾಣಿಯೂ ಕಣ್ಣಿಗೆ ಬೀಳುತ್ತಿದ್ದಿಲ್ಲ. ಇನ್ನೊಮ್ಮೆ ಸಿಡಿಲು ಮಿಂಚಿತು. ಅದರ ಪ್ರಭೆಯಲ್ಲಿ ಕೆಳಗೆ ದೂರ ಮಂದವಾಗಿ ಹರಿಯುವ ಹಡ್ಸನ್ ಹೊಳೆಯು ಹೊಳೆಯಿತು. ಆದರೆ ಚಿರಿ ಚಿರಿ ಬೀಳತೊಡಗಿದ ಮಳೆಯ ಹೊರತು ಬೇರೆ ಸದ್ದು ಇದ್ದಿಲ್ಲ. ಒಂದು ಕಾಗೆ ಬೆಟ್ಟದ ಮೇಲಿಂದ ರಕ್ಕೆ ಬೀಸಿ ಹಾರುತ್ತಿತ್ತು.

“ರಿಪ್ ವಾನ್ ವಿಂಕಲ್! ರಿಪ್ ವಾನ್ ವಿಂಕಲ್!” ಮತ್ತೆ ಆ ಕೂಗು ಕೇಳಿ ಕಣಿವೆಯಲ್ಲಿ ಮೊಳಗಿತು. 'ವೂಲ್ಫ್' ಕತ್ತೆತ್ತಿ ಹೆದರಿ ಕಣಿವೆಯತ್ತ ಕಣ್ಣು ಕೆಕ್ಕರಿಸಿ ಒಮ್ಮೆ ಗುರ್ರ್ ಎಂದಿತು. ಇಷ್ಟರಲ್ಲಿ ರಿಪ್ ಕೂಡ ಗಾಬರಿ ಆಗಿದ್ದ. ಈ ಗುಡ್ಡಗಳಲ್ಲಿ ಕಾಡು ಪಿಶಾಚಿಗಳು ಸುಳಿದಾಡುವ ಸುದ್ದಿ ಅವನು ಕೇಳಿದ್ದ. ಅವನು ಅಸ್ವಸ್ಥನಾಗಿ ನಂಬಿಕೆಯ ನಾಯಿಯತ್ತ ನೋಡಿದನು. ಅಷ್ಟರಲ್ಲಿ ಒಂದು ವಿಚಿತ್ರ ಗಿಡ್ಡ ವ್ಯಕ್ತಿ ಬೆನ್ನ ಮೇಲೆ ದೊಡ್ಡ ಭಾರ ಹೊತ್ತು ಬಂಡೆಗಲ್ಲುಗಳನ್ನು ಏರುತ್ತ ಬೀಳುತ್ತ ಕಷ್ಟದಿಂದ ಮೇಲೆ ಬರುತ್ತಿರುವುದನ್ನು ರಿಪ್ ಕಂಡನು. ಇಂಥ ಗಡ್ಡದ ಗಿಡ್ಡನನ್ನು ಆತ ಹಿಂದೆಂದೂ

ಕಂಡಿದ್ದಿಲ್ಲ. ಆ ವ್ಯಕ್ತಿ ಅಗಲನಿದ್ದ ಗಿಡ್ಡನಿದ್ದ ತಲೆ ಗಡ್ಡ ಎಲ್ಲ ನೆರತು ಪೂದೆ ಆಗಿತ್ತು. ಆತ ಬಹಳ ಮುದುಕನಾಗಿ ಕಾಣುತ್ತಿದ್ದನು.

ಅವನ ಬೆನ್ನ ಮೇಲಿನ ಹೊರೆ ಸರಾಯಿಯ ದೊಡ್ಡ ಹೂಜಿ, ರಿಪ್‌ನನ್ನು ಅದಕ್ಕೆ ನೆರವಾಗಲು ಆತ ಕರೆದನು. ಮಾತುಕತೆ ಬರೆ ಸನ್ನೆಗಳಿಂದ. ರಿಪ್ ತನ್ನ ಭಾವಕ್ಕೆ ತಕ್ಕಂತೆ ತಟ್ಟನೆ ಮುಂದಾಗಿ ಹೂಜೆಯನ್ನು ಹೆಗಲಿಗೆ ಹೊತ್ತನು, ಇಬ್ಬರೂ ಗುಡ್ಡದ ಮಗ್ಗಲಿನಲ್ಲಿಯ ಬತ್ತಿಹೋದ ಹೊಳೆಯ ಪಾತ್ರದ ಗುಂಟ ಕಷ್ಟದಿಂದ ಏರಿ ಹೋದರು. ಆದರೆ 'ವೂಲ್ಫ್' ನಾಯಿಯು ಮಾತ್ರ ಜೀವನದಲ್ಲಿಯೇ ಮೊದಲಬಾರಿ ರಿಪ್‌ನನ್ನು ಹಿಂಬಾಲಿಸಲು ಒಪ್ಪಲಿಲ್ಲ, ಆ ಗುಡ್ಡದ ಗಿಡ್ಡ ಮತ್ತು ಇಬ್ಬರೂ ಕಣಿವೆಯಲ್ಲಿ ಕಣ್ಮರೆಯಾಗುವ ತನಕವೂ 'ವೂಲ್ಫ್' ಬೆನ್ನು ಜಗ್ಗಿಸಿ ಮೈ ನಿಮಿರಿಸಿಕೊಂಡು ಗುರ್ರ್ ಎಂದು ಸಿಟ್ಟಿನಿಂದ ಗೊಣಗುತ್ತ ಹೆದರಿ ಕಂಗೆಟ್ಟು ಹಿಂದೆಯೆ ಉಳಿಯಿತು.

೪

ಸೀಳು ಬಂಡೆಗಳ ಕಣಿವೆ ದಾಟಿ ಅವರು ಒಂದು ಪೊಳ್ಳು ಸ್ಥಳಕ್ಕೆ ಬಂದರು. ಅವರ ಸುತ್ತಲೂ ಕಡಿದಾದ ಶಿಲೆಗಳು ನಿಂತಿದ್ದವು. ಅವುಗಳ ಮೇಲಿಂದ ಅಲ್ಲಲ್ಲಿ ಬೆಳೆದ ಹೆಮ್ಮರಗಳು ರೆಂಬೆ ಕೊಂಬೆಗಳನ್ನು ಚಾಚಿ ಹೆಣೆದು ಹಸಿರು ಹಂದರವನ್ನೆ ಉಂಟುಮಾಡಿದ್ದುವು. ದಾರಿಯುದ್ದಕ್ಕೂ ರಿಪ್‌ನ ಹೆಗಲ ಹೊರೆಯನ್ನು ಆಗಾಗ್ಗೆ ಆ ಗಿಡ್ಡ ಸಂಗಾತಿ ತಾನು ಹೊತ್ತುಕೊಳ್ಳುತ್ತಿದ್ದನು. ಆದರೆ ಆತ ಪಿಟ್ ಎಂದು ತುಟಿ ಬಿಚ್ಚುತ್ತಿದ್ದಿಲ್ಲ, ರಿಪ್‌ನಿಗೂ ಅವನನ್ನು ಮಾತಾಡಿಸುವ ಮನಸ್ಸು ಆಗಲಿಲ್ಲ. ಹೂಜೆ ಹೆಗಲು ಬದಲಿಸುವಾಗೆಲ್ಲ ಆ ಗಿಡ್ಡನ ಮೈ ಕೈ ಸೋಂಕುತ್ತಿತ್ತು. ಆಗ ರಿಪ್‌ನ ಬೆನ್ನಹುರಿ ಗುಂಟ ಚಳಿಯ ತೆರೆಯೊಂದು ಜುಮ್ಮನೆ ಕೊರೆದು ಹರಿಯುತ್ತಿತ್ತು.

ಆ ಪೊಳ್ಳು ಬಯಲಲ್ಲಿ ಒಂದು ವಿಚಿತ್ರ ಮಂಡಳಿಯು ನೆರೆದಿತ್ತು. ಅಂಥ ಸೋಗುಗಳನ್ನು ರಿಪ್ ಹಿಂದೆ ಎಂದೂ-ನಿಕೊಲಸ್ ವಡ್ಡರನ ಮದ್ಯದಂಗಡಿಯಲ್ಲಿ ಕೂಡ-ನೋಡಿದ್ದಿಲ್ಲ. ಕೆಲವರು ಜಾಕೀಟು, ಕೆಲವರು ವಾಸ್ಕೋಟು, ಕಿರಿಯಗಲ ಚಣ್ಣ ತೊಟ್ಟಿದ್ದರು. ಸೊಂಟದ ಪಟ್ಟಿಗೆ ಚೂರಿ ಕಠಾರಿಗಳನ್ನು ಸಿಕ್ಕಿಸಿಕೊಂಡಿದ್ದರು. ಅವರಲ್ಲಿ ಹಿರಿಯನಂತೆ ಕಾಣುವ ಒಬ್ಬನು ತಲೆಯ ಹ್ಯಾಟಿಗೆ ಒಂದು ಗರಿಯನ್ನೂ ಸೊಂಟದ ಅಗಲಪಟ್ಟಿಯಲ್ಲಿ ಒಂದು ಖಡ್ಗವನ್ನೂ ಕೆಂಪು ಕಾಲುಚೀಲಗಳನ್ನೂ ಎತ್ತರ ಹಿಮ್ಮಡಿಗಳ ಬೂಟುಗಳನ್ನೂ ತೊಟ್ಟಿದ್ದನು.

ಆ ಗುಂಪಿನಲ್ಲಿ ಎಲ್ಲರೂ ಗಿಡ್ಡರು. ಉದ್ದನ್ನ ಗಡ್ಡದ ಉರಿಮೋರೆಯವರು. ಯಾರ ಮುಖವೂ ನೋಡಲು ಪ್ರಸನ್ನವಾಗಿದ್ದಿಲ್ಲ. ಒಬ್ಬನ ಗಲ್ಲಗಳು ಚಪ್ಪಟೆ ಆಗಿದ್ದರೆ ಇನ್ನೊಬ್ಬನ ಮೂಗು ಅವನ ಗದ್ದವನ್ನು ನಿಲುಕುವಷ್ಟು ಉದ್ದ! ಅವರೆಲ್ಲರೂ ಚೆಂಡಾಟದಲ್ಲಿ ತೊಡಗಿದ್ದರು. ಒಂಭತ್ತು ಕೋಲಿನ ಚೆಂಡಾಟ, ಚೆಂಡು ಒಗೆದು ಕೋಲುಗಳನ್ನು ಉರುಳಿಸುವುದೇ ಆ ಆಟ. ಆಟ ರಭಸದಲ್ಲಿ ಸಾಗಿತ್ತು. ಆದರೂ ಒಬ್ಬ ಪ್ರಾಣಿಯೂ ನಗುತ್ತಿದ್ದಿಲ್ಲ. ಕೂಗಿ ಕಲೆಯುತ್ತಿದ್ದಿಲ್ಲ. ಯಾರೂ ಮಾತಾಡುತ್ತಲೇ ಇದ್ದಿಲ್ಲ. ಬರೇ ಚೆಂಡುಗಳು ಅಪ್ಪಳಿಸುವ ಸದ್ದು, ಕೋಲು ಕುಪ್ಪಳಿಸುವ ಸದ್ದು, ಆ ಸದ್ದೇ ಗುಡುಗಿನಂತೆ ಆ ಕೊಳ್ಳದ ಪೊಳ್ಳಿನಲ್ಲಿ ಮೊಳಗುತ್ತಿತ್ತು. ಕೋಲು ಉರುಳಿದಾಗೊಮ್ಮೆ ಆಟದ ತಂಡವು ಚಪ್ಪಾಳೆ ಬಾರಿಸುತ್ತಿತ್ತು. ಅದೊಂದೇ ದೊಡ್ಡ ಸಪ್ಪಳ.

ರಿಪ್‌ನೊಂದಿಗೆ ಹೂಜೆಯ ಗಿಡ್ಡ ಗುಡ್ಡವೇರಿ ಬರುತ್ತಲೇ ಅವರೆಲ್ಲರೂ ಆಟ ನಿಲ್ಲಿಸಿ ಆ ಆಗಂತುಕನನ್ನೇ ಮಿಕಿಮಿಕಿ ದಿಟ್ಟಿಸಹತ್ತಿದರು. ಅವರ ಬೆಣಚುಗಲ್ಲಿನಂತೆ ಹೊಳೆಯುವ ಕಾಜುಗಣ್ಣುಗಳನ್ನು ಕಂಡಾಗ ರಿಪ್‌ನ ನೆತ್ತರವೇ ಆರಿ ತಣ್ಣಗಾಯಿತು! ರಿಪ್‌ನ ಸಂಗಾತಿಯು ಆ ದೊಡ್ಡ ಹೂಜೆಯಿಂದ ಮದ್ಯವನ್ನು ಅಗಲವಾದ ಸೀಸೆಗಳಲ್ಲಿ ಬಗ್ಗಿಸಿ ಆಟಿಗರಿಗೆಲ್ಲ ಹಂಚಹತ್ತಿದನು. ರಿಪ್‌ನಿಗೂ ಕುಡಿಯೆಂದು ಕೈಸನ್ನೆ ಮಾಡಿದನು.

ಹೂಜೆಯ ಹತ್ತಿರವಿದ್ದೂ ಅಷ್ಟು ಹೊತ್ತು ರಿಪ್ ಸುಮ್ಮನೇ ಕೂತಿದ್ದೇ ಒಂದು ಆಶ್ಚರ್ಯ, ಆ ಆಶ್ಚರ್ಯಕ್ಕೆ ಕಾರಣ ಅವನ ಹೆದರಿಕೆ, ಕಂಗೇಡು, ಆದರೆ ಹೆದರಿಕೆ ಕಡಿಮೆ ಆದಂತೆ ರಿಪ್‌ನು ಹೂಜೆಯನ್ನೆತ್ತಿ ದೊಡ್ಡ ಸೀಸೆಯಲ್ಲಿ ಮದ್ಯವನ್ನು ಸುರುವಿ ತುಟಿಗೆ ಎತ್ತಿ ಒಮ್ಮೆ ಹೀರಿ ರುಚಿ ನೋಡಿದನು. “ಇದು ಗಿನ್” ರಿಪ್ ತಜ್ಞನಂತೆ ಉದ್ಗರಿಸಿ ನಾಲಿಗೆ ಚಪ್ಪರಿಸಿದನು. ಎರಡನೆಯ ಹೀರಿಕೆ ದೊಡ್ಡ ಗುಟುಕಾಯಿತು. ಮೂರನೆಯ ಗುಟುಕಿಗೆ ಸೀಸೆಯೇ ಬರಿದಾಯಿತು.

ಸೀಸೆಯನ್ನು ಅವನು ಕೆಳಗೆ ಇಡಲಿಲ್ಲ. ಅದು ಕೆಳಗೆ ಬಿದ್ದಿತು. ಅವನ ಕೈ ಸಡಿಲಾಗಿ ಜೋಲು ಬಿತ್ತು. ಅವನು ತೇಲುಗಣ್ಣು ಹಾಕಿದನು. ತಲೆ ತೂಕಡಿಸಿ ಎದೆಗೆ ತಗ್ಗಿತು. ಅವನಿಗೆ ನಿದ್ದೆ ಬಂದಿತು. ರಿಪ್ ಅಲ್ಲಿಯೇ ಹುಲ್ಲಿನ ಹಸಿರ ಹಸೆಯಲ್ಲಿ ಮಲಗಿ ಮೈಮರೆತನು.

ಆ ಒಂದು ಸೀಸೆ ಮದ್ಯವು ಅವನ ಬದುಕಿನ ಇಪ್ಪತ್ತು ವರ್ಷಗಳನ್ನು ಬೆಲೆಯಾಗಿ ತೆಗೆದುಕೊಂಡಿತು.

೫

ಬೆಚ್ಚಗಿನ ಬೆಳಗಿನ ಬಿಸಿಲು ಬಿದ್ದಿತ್ತು. ರಿಪ್ ಎಚ್ಚತ್ತು ಕುಳಿತಾಗ ಕಣ್ತೆರೆದು ನೋಡುತ್ತಾನೆ. ಆತ ಆಟದ ಬಯಲಲ್ಲಿ ಇದ್ದಿಲ್ಲ. ಕಡಿದಾದ ಗುಡ್ಡದ ಮಗ್ಗಲಿನ ಅಂಚಿಗೆ, ಆತ ಆ ಹೂಜೆ ಹೊತ್ತ ಗಡ್ಡದ ಗಿಡ್ಡನನ್ನು ಮೊದಲು ಕಂಡ ಸ್ಥಳದಲ್ಲಿ ಕುಳಿತಿದ್ದಾನೆ!

ಮೈ ಮುರಿದುಕೊಂಡಾಗ ಕೈಕಾಲುಗಳೆಲ್ಲ ಸೆಟೆದು ಬಿಗಿದುಕೊಂಡಂತೆನಿಸಿತು. ರಿಪ್‌ನಿಗೆ. ತೋಳು ವಾತ ಬಡಿದುತೆ ಆಗಿತ್ತು ಮೈ ಮುದುಡಿಕೊಂಡು, ಚರ್ಮ ಸುಕ್ಕಿತ್ತು! ಎದ್ದು ಕೂಡುವದೇ ಕಷ್ಟವೆನಿಸಿತು. ಬೆನ್ನು ನೇರಾಗಿ ಹಿಡಿಯಹೋದರೆ ಅದು ಬಗ್ಗಿತ್ತು. ಕುತ್ತಿಗೆ ಸೆಟೆಯ ನಿಲ್ಲುತ್ತಿದ್ದಿಲ್ಲ. ಎದೆಗೆ ಬಗ್ಗುತ್ತಿತ್ತು. ಹತ್ತಿರ ಬಿದ್ದ ತುಬಾಕಿಯತ್ತ ಆತ ಕೈ

ಚಾಚಿದನು. ತುಬಾಕಿಯ ನಳಿಕೆಗೆ ತುಕ್ಕು ಹಿಡಿದಿತ್ತು. ಅದರ ದಸ್ತುಹುಳ ಹಿಡಿದು ಬರಡಾಗಿತ್ತು. ಅವನಿಗೆ ಬಹಳ ದುಃಖವೆನಿಸಿತು. ತನ್ನ ಕೋವಿಯೆಂದರೆ ಅವನಿಗೆ ಯಾವಾಗಲೂ ಹಮ್ಮೆ ಪ್ರತಿದಿನ ಅದನ್ನು ಉಜ್ಜಿ ಸ್ವಚ್ಛ ಮಾಡುತ್ತಿದ್ದನು. ಇದೀಗ ಅದು ಮುಸುಕಾಗಿತ್ತು. ಅಷ್ಟೇ ಏನು? ಸುತ್ತಲಿನ ನೋಟ ಮುಸುಮುಸುಕಾಗಿ ತೋರಿತು. “ಎಲಾ ರಿಪ್, ಇಷ್ಟು ಲಗು ಮುದುಕನಾಗಿಬಿಟ್ಟಿಯಾ?” ಆತ ನಕ್ಕು ತನ್ನನ್ನೇ ಕೇಳಿಕೊಂಡನು ಈ ಗುಡ್ಡದ ಗಿಡ್ಡರು ತನ್ನ ಕೋವಿ ಕದ್ದು ಈ ಹಳೆಯ ತಂಬಾಕಿ ಬಿಟ್ಟುಹೋದರೆಂದು ಕಾಣುತ್ತದೆ. ಖದೀಮರನ್ನು ನೋಡಿಕೊಳ್ಳುತ್ತೇನೆ.”

ಆತ ಎದ್ದು ಕುಳಿತು ತನ್ನನ್ನು ಮತ್ತೆ ನೋಡಿಕೊಂಡನು. ಅವನ ಬಟ್ಟೆಗಳೆಲ್ಲ ಹರಿದು ಚಿಂದಿ ಆಗಿದ್ದವು. ಎಂಥ ಅಸಡ್ಡಾಳ ಉಡಿಗೆ ತೊಡಿಗೆ ಇದ್ದರೂ ಅವನು ಹರಕು ಹೊಲಸು ಧರಿಸಿದ್ದೇ ಇಲ್ಲ. ಇದಕ್ಕೂ ಸೋಜಿಗವೆಂದರೆ ರಿಪ್‌ನ ಗದ್ದದಿಂದ ಅವನ ಸೊಂಟದ ಮಟ್ಟಕ್ಕೆ ದೊಡ್ಡ ಬಿಳಿಯಗಡ್ಡ ಹುಲುಸಾಗಿ ಬೆಳೆದು ಜೋಲು ಬಿದ್ದಿತ್ತು! ಸರಿ. “ಸರಿ, ರಿಪ್‌ನೇ ನಾನು, ಒಳಗೆಲ್ಲ ನಾನೇ. ಹೊರಗೆ ಮಾತ್ರ ಬೇರೇನೆ! ಇರಲಿ ವೂಲ್ಫ್‌ನನ್ನು ಕೇಳುವಾ! ಅವನಿಗೆ ಇದೆ ನನ್ನ ಗುರುತು.” ಆದರೆ ಅಲ್ಲ ಎಲ್ಲೂ ವೂಲ್ಫ್ ಇದ್ದಿಲ್ಲ.

ಸರಿ, ಎಲ್ಲಿಯೋ ಹಕ್ಕಿಯನ್ನೋ ಅಳಿಲನ್ನೋ ಬೆನ್ನಟ್ಟಿ ಹೋಗಿರಬೇಕು. ವೂಲ್ಫ್ ಇದೀಗ ಬರುವನು. ಬಂದೊಡನೆ ಕೆಲವು ಕವಡೆ ಹಕ್ಕಿಕೊಂಡು ಮನೆಗೆ ಹೆಂಡತಿಗೆ ಅಡುಗೆಗಾಗಿ ಒಯ್ಯಬೇಕು. ಇಂದು ಅವನಿಗೆ ಹೆಂಡತಿಯ, ಮನೆಯ ನೆನಪು ಬಲವಾಯಿತು. ಯಾವಾಗಲೂ ಪರೋಪಕಾರಕ್ಕೆ ದುಡಿಯುವ ರಿಪ್‌ನಿಗೆ ಇಂದು ಮನೆಯ ಹಂಬಲ ತೀವ್ರವಾಯಿತು. ಇನ್ನು ಮನೆಯ ಕಡೆಗೇ ಹೆಚ್ಚು ಲಕ್ಷ್ಯ ಕೊಡಬೇಕು:- ಎಂದು ಎಂದಿಗಿಂತಲೂ ಹೆಚ್ಚು ಸಂಕಲ್ಪಗಳನ್ನು ಮಾಡಿದನು!

ವೂಲ್ಫ್! ವೂಲ್ಫ್! ನಾಯಿಗಾಗಿ ರಿಪ್ ಕೂಗಿದನು. ಆದರೆ ಪ್ರತಿಧ್ವನಿಯೇ ಉತ್ತರ ಕೊಟ್ಟಿತು. ಸರಿಧಿವಾತ ಹಿಡಿದಂತೆ ಆಗಿದ್ದ ಆತ ಪ್ರಯಾಸದಿಂದ ಎದ್ದು ನಿಂತನು. “ಈ ಗುಡ್ಡದ ಕಲ್ಲಹಸೆ ಒಳ್ಳೆ ಗಾಳಿಯ ಚಿಟ್ಟೆ, ಆದರೆ ಬಹಳ ಚಳಿ ಮತ್ತು ಒದ್ದೆ ಮುದ್ದೆ

ಅದರಿಂದಲೇ ಕೈಕಾಲು ಸೊಂಟ ಬೆನ್ನು ಎಲ್ಲ ಜಡಿದು ಹಿಡಿದ ಹೋದವು." ಎಂದು ಗೊಣಗುಡುತ್ತ ರಿಪ್ ಈ ಕಡಿದಾದ ಕಣಿವೆ ಇಳಿದು ಮನೆಯತ್ತ ಹೊರಟನು-ಹಳೆಯ ಕೋವಿಯನ್ನು ಹೆಗಲಿಗೇರಿಸಿ ರಿಪ್ , ತನ್ನ ಪ್ರೀತಿಯ ನಾಯಿಯ ಆಸೆ ಬಿಟ್ಟನು. ಹೊಟ್ಟೆಯಲ್ಲಿ ಹಸಿವೆಯ ಹೆಗ್ಗಣ ಕೊರೆಯಹತ್ತಿತ್ತು. ಹಿಂದಿರುಗಿ ಊರ ಹಾದಿ ಓಡಿದ.

೬

ಆದರೆ ಊರಲ್ಲಿ ಅವನನ್ನು ಗುರುತಿಸುವವರು ಯಾರು? ಅವನಾದರೂ ಯಾರನ್ನು ಗುರುತಿಸಬಲ್ಲನು? ತನ್ನ ಊರನ್ನು ತನ್ನ ಅಂಗೈಯ ಗೆರೆಗಳಷ್ಟು ನಿಚ್ಚಳವಾಗಿ ಬಲ್ಲೆನೆಂದು ರಿಪ್‌ನಿಗೆ ಹೆಮ್ಮೆ. ಆದರೆ ಇಂದು ಆ ಹೆಮ್ಮೆ ಆರಿ ಉಗಿಯಾಯಿತು. ಆತ ಕಂಗೆಟ್ಟು ತಲೆಕೂದಲು ಕೆರೆದುಕೊಂಡನು. ಆದರೆ ಕೆದರಲಿಕ್ಕಾದರೂ ತಲೆಯಲ್ಲಿ ಕೂದಲು ಎಷ್ಟಿದ್ದವು? ತಲೆ ಬೊಕ್ಕು ಬೋಳಾಗಹತ್ತಿತ್ತು- ಕೂದಲೆಲ್ಲ ಉದುರಿಹೋಗಿದ್ದವು. ಆದರೂ ರಿಪ್ ಹುಟ್ಟಾ ಆಶಾವಾದಿ. ಆತ್ಮವಿನೋದಿ, ಹಲ್ಲಿಲ್ಲದ ಬಚ್ಚಬಾಯಿ ತೆರೆದು ತನ್ನಷ್ಟಕ್ಕೆ ನಕ್ಕನು. ಹಾದಿಯ ಹುಡುಗರು ಅವನ ವಿಚಿತ್ರ ವೇಷ ಚರ್ಯೆ ಕಂಡು ಇವನು ಯಾರೋ ಮಂದಿ ಹುಚ್ಚನೆಂದು ಕೈ ತಟ್ಟಿ ಖೊಳ್ಳನೆ ನಕ್ಕರು.

ಒಬ್ಬ ಎಳೆಯ ಹುಡುಗಿ ನೀರಿನ ಕೊಡ ಹೊತ್ತುಕೊಂಡು ನಡೆದಿದ್ದಳು. ಅವಳನ್ನು ತಡದು ರಿಪ್ ಕೇಳಲು ಮಾಡಿದನು! ಆದರೆ ಅವನ ಒಡಕು ಕಂಠದ ಗೊಗ್ಗರು ದನಿ ಕಿವಿಗೆ ಬೀಳುತ್ತಲೆ ಆ ಹುಡುಗಿ ಹೆದರಿ ತುಂಬಿದ ಕೊಡವನ್ನು ಅಲ್ಲಿಯ ಬೀದಿಯಲ್ಲಿ ನೆಲಕ್ಕೆ ಜಡಿದು ಹೌಹಾರಿ ಕಾಲು ಕಿತ್ತುಬಿಟ್ಟಳು!

ಮುಂದೆ ಹೋದಂತೆ ಅವನ ಸೋಜಿಗ ಹೆಚ್ಚುತ್ತಲೇ ಹೋಯಿತು. ಕಣ್ಣನ್ನು ಕಿವಿ ನಂಬಲಿಲ್ಲ; ಕಿವಿಯನ್ನು ಕಣ್ಣು ನಂಬಲಿಲ್ಲ, ಎಲ್ಲ ಹೊಸತು. ಎಲ್ಲ ವಿಪರೀತ, ಹಳೆಯ ಕೇರಿ ಇಲ್ಲ. ಹೊಚ್ಚ ಹೊಸ ಮನೆಗಳ ಸಾಲುಗಳು ಹಿಂದೆ ಗುಡಿಸಲು ಇದ್ದಲ್ಲಿ ಒಂದು

ಮಹಡಿಯ ಮನೆ. ಹಿಂದೆ ಮನೆ ಇದ್ದಲ್ಲಿ ಇಂದು ಮದ್ಯದಂಗಡಿ, ಹಿಂದೆ ಅಂಗಡಿ ಇದ್ದಲ್ಲಿ ಇಂದು ದೊಡ್ಡ ಗಿರಣಿ! ಮನೆಗಳ ಮುಂದೆ ತಲೆಬಾಗಿಲಲ್ಲಿ ಹೊಸ ಹೊಸ ಹೆಸರಪಾಟಿಗಳು ಕಿಡಿಕಿಗಳಲ್ಲಿ ಹೊಸ ಹೊಸ ಮೋರೆಗಳು.

ಕೊನೆಗೂ ರಿಪ್ ತನ್ನ ಮನೆಯ ಮುಂದೆ ಬಂದನು. ಅಹುದು. ಅದೇ ಮನೆ. ತೀರ ಮುರುಕಲಿಗೆ ಬಂದಿತ್ತು. ಮಾಡು ಕುಸಿದಿತ್ತು. ಕಿಡಿಕಿಯ ಕಾಜುಗಳೆಲ್ಲ ಒಡೆದಿದ್ದವು. ಒಂದೂ ಕದ ಇದ್ದಿಲ್ಲ. ಆದರೂ ಅದೇ ಮನೆ. ರಿಪ್‌ನ ಹಳೆಯ ಮನೆ. ಆದರೆ ಮನೆಯಾಕೆ ಎಲ್ಲಿ? ಅವಳ ರಿಪಿರಿಪಿ ಗರಳೆಯ ಸದ್ದು ಕೇಳುತ್ತಲೇ ಇದ್ದಿಲ್ಲ! ರಿಪ್ ಹೊರಗೆ ಬಹಳ ಹೊತ್ತು ಕಾಯುತ್ತ ನಿಂತನು.

ಒಂದು ನಾಯಿ ಹಿಂದಿನಿಂದ ಓಡಿ ಬಂದಿತು. ಅದು ತನ್ನ ವೂಲ್ಫ್ ಎಂದೇ ರಿಪ್‌ನ ಹಟ, "ಹಲೊ ವೂಲ್ಫ್! ಯಜಮಾನತಿ ಒಳಗೆ ಇದ್ದಾಳೇ? ಅವಳಿಗೆ ತಿಳಿಸು, ಯಜಮಾನರು ಬಂದಿದ್ದಾರೆ. ಮುಂಜಾವಿನ ಉಪಹಾರಕ್ಕಾಗಿ ಕಾಯುತ್ತಿದ್ದಾರೆ. ನಿನ್ನೆ ರಾತ್ರಿ ಕ್ಯಾಟ್‌ಸ್ಕಿಲ್ ಗುಡ್ಡಗಳಲ್ಲಿ ಒಂದು ಸಂತೋಷ ಕೂಟದಲ್ಲಿ ನಾನು ಸೇರಿದ್ದೆ. ಈಗ ಹೊಟ್ಟೆಯಲ್ಲಿ ಏನೋ ಕಸಿವಿಸಿ. ಅಂಥ ಊಟದ ಉಪಟಳವೇ ಇದು" — ಎಂದೆಲ್ಲ ರಿಪ್ ಮಾತನಾಡಿದನು. ಆದರೆ ಆ ನಾಯಿ ಒಮ್ಮೆಲೆ ಕೋರೆಯ ಹಲ್ಲುಗಳನ್ನು ಹೊರಗೆಡಹಿ ಸಿಟ್ಟಿನಿಂದಲೋ ಹೆದರಿಕೆಯಿಂದಲೋ ಬೊಗಳಿ ಬಾಲ ಮುದುಡಿಸಿಕೊಂಡು ಓಡಿಯೇ ಹೋಯಿತು. "ಅಯ್ಯೋ ವಿಧಿಯೇ, ನನ್ನ ನಾಯಿಯೂ ನನ್ನನ್ನು ಗುರುತಿಸದೇ ಹೋಯಿತೇ!" ಎಂದು ಮುದಿ ರಿಪ್ ಅಲ್ಲಿಯೇ ನೆಲಕ್ಕೆ ಕುಸಿದನು. ಕಣ್ಣಿನಿಂದ ಉಕ್ಕುವ ನೀರನ್ನು ಒರಸಿಕೊಳ್ಳುತ್ತ.

ರಿಪ್ ಹೆಂಡತಿಯನ್ನು ಕೂಗಿದನು. ಮಕ್ಕಳನ್ನು ಕೂಗಿದನು. ಯಾರ ದನಿಯೂ ಮಾರುತ್ತರ ಕೊಡಲಿಲ್ಲ. ಅಲ್ಲಿ ಕೋಣೆಗಳೂ ಖಾಲಿ. ಕಸಕಡ್ಡಿ ತುಂಬ ಬಿಕೋ ಅನ್ನುತ್ತಿವೆ. ಇಲ್ಲಿ ಮುದಿ ರಿಪ್‌ನಿಗೆ ಆಸರೆ ಇಲ್ಲ. ಅಂದಾಗ ಅವನಿಗೆ ಎರಡನೆಯ ಆಶ್ರಯ ಸ್ಥಾನ ನಿಕೋಲಸ್ ವೆಡ್ಡರನ ಮದ್ಯದಂಗಡಿಯೇ.

ಅಲ್ಲಿ ಹೋದರೆ ಹಲಿಗೆಯ ಮೇಲೆ ಹೊಸ ಹೆಸರು. "ಯೂನಿಯನ್ ಹಾಟೆಲ್. ಒಡೆಯ ಜೊನೊಥನ್ ಡೂಲಿಟ್ಲ್" ಹಾಟೆಲಿನ ಎದುರಿಗೆ ಎತ್ತರದ ಕಂಬದ ಮೇಲೆ ಒಂದು ಬಾವುಟ. ಅದು ಹೊಸತು. ಚಿಕ್ಕೆಗಳ ಮತ್ತು ಪಟ್ಟಿಗಳ ಒಂದು ರಚನೆಯ ಚಿಹ್ನೆ. ರಿಪ್ ಅದನ್ನು ಈ ಮೊದಲು ನೋಡಿದ್ದೇ ಇಲ್ಲ. ನೋಡುವದಾದರೂ ಹೇಗೆ? ಅವನು ಕ್ಯಾಟ್‌ಸ್ಕಿಲ್ ಗುಡ್ಡಗಳನ್ನು ಹೊಕ್ಕಾಗ ಅಮೇರಿಕೆಯ ವಸಾಹತುಗಳು ಸ್ವತಂತ್ರವಾಗಿಯೇ ಇದ್ದಿಲ್ಲ. ಇದೀಗ ಹೊಸ ರಾಷ್ಟ್ರ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು. ಹಾಟೆಲಿಗೆ ಹತ್ತಿರ ಬಂದಾಗ ಅವನು ಕಣ್ಣೆತ್ತಿ ನೋಡಿದನು. ಆದರ ಬಾಗಿಲ ಬಳಿಯ ಙನೆಯ ಜಾರ್ಜನ ಚಿತ್ರವಿದ್ದಿಲ್ಲ. ಅಲ್ಲಿ ಮುಕುಟ ರಾಜದಂಡಗಳ ಬದಲು ನೀಲಿ ರಣವೇಷದಲ್ಲಿದ್ದ ಜಾರ್ಜ್ ವಾಶಿಂಗ್‌ಟನ್ನನ ಚಿತ್ರವಿತ್ತು! ರಿಪ್‌ನಿಗೆ ಜಾರ್ಜ್ ಗೊತ್ತು. ಆದರೆ ವಾಶಿಂಗ್‌ಟನ್? ಊ ಹೂಂ. ಇದು ಹೊಸ ಹೆಸರು. ಆದರೂ ಈ ದೊರೆ ವಾಶಿಂಗ್‌ಟನ್ ಒಳ್ಳೆಯ ಸದ್ಗೃಹಸ್ಥನಾಗಿ ತೋರಿದ. ಅವನು ಸ್ವಾತಂತ್ರ್ಯ ಯುದ್ಧದ ಸೇನಾಪತಿ. ಸ್ವತಂತ್ರ ಅಮೇರಿಕೆಯ ಪ್ರಥಮ ಅಧ್ಯಕ್ಷನೆಂಬುದರ ಸುದ್ದಿಯೇ ರಿಪ್ ವಾನ್ ವಿಂಕಲ್‌ನಿಗೆ ಇದ್ದಿಲ್ಲ!

ಅವನು ಒಂದೆ ಕುಳಿತುಕೊಳ್ಳುತ್ತಿದ್ದ ಬೆಂಚು, ಅದರ ಮೇಲಿನ ಅವನ ಹಳೆಯ ಗೆಳೆಯರು-ಯಾವುದೂ ಅಲ್ಲಿ ಇದ್ದಿಲ್ಲ. ಸಿಗಾರಿನ ಹೊಗೆಯನ್ನು ಒಂದೇಸವನೆ ಎಂಜಿನ್ನಿನಂತೆ ಬಿಡುವ ನಿಕೋಲಸ್ ವೆಡ್ಡರನ ಬದಲು ಒಬ್ಬ ಗಡಿಬಿಡಿಯ ತರಳ ಬಾಗಿಲ ಚೌಕಿಗೆ ಆನಿಸಿ ನಿಂತು ಒಂದೇ ಸಮನೆ ಮಾತಾಡುತ್ತಿದ್ದ. ಕಾಂಗ್ರೆಸ್ ಅಂತೆ, ಚುನಾವಣೆಯಂತೆ. ಸ್ವತಂತ್ರ ಅಮೇರಿಕನ್‌ರಂತ ಸ್ವಾತಂತ್ರ್ಯದ ಘೋಷಣೆಯಂತೆ!

ರಿಪ್‌ನಿಗೆ ಏನೂ ಅರ್ಥವಾಗಲಿಲ್ಲ. ಇಂದೊಂದು ಹೊಸ ಪ್ರಪಂಚ! ಆದರೂ ಅದು ತನ್ನ ಹಳೆಯ ಊರು. ಅವನ ಸುತ್ತಲೂ ಈ ವಿಚಿತ್ರ ಪ್ರಾಣಿ ಯಾರೆಂದು ನೋಡಲು ಹಿಂಬಾಲಿಸಿ ಬಂದ ಜನರ ಗುಂಪಿನ ಗದ್ದಲ ಬೇರೆ! ಹಿಂದೆ ಮಕ್ಕಳಿಗೆಲ್ಲ ಅವನು ಮೆಚ್ಚಿನ ಸಂಗಾತಿ. ಇಂದು ಈ ತುಂಟರ ತಂಡ ಶುದ್ಧ ಕಿಲಾಡಿ. ಇವರ ನಾಯಿಗಳೂ ಮೈ ಮೇಲೆ ಏರಿಬರುತ್ತವಲ್ಲ!

ಆ ದಿನ ಅಲ್ಲಿ ಚುನಾವಣೆ ನಡೆದಿತ್ತು. ಸಾರ್ವತ್ರಿಕ ಚುನಾವಣೆ. ಜನಸಂದಣಿ ಅದಕ್ಕಾಗಿ. “ಏನ್ರಿ ಸ್ವಾಮಿ, ಮತಕಟ್ಟೆಗೆ ಬರುವಾಗ ಹಳೆಯ ಕೋವಿಯನ್ನು ಹೆಗಲಿಗೇರಿಸಿಯೇ ಬಂದಿರಲ್ಲ? ಬೆನ್ನಿಗೆ ಜನಜಂಗುಳಿಯನ್ನೂ ತಂದಿರಿ! ಇದೇನು ದಂಗೆ ಎಬ್ಬಿಸುವ ಹೊಂಚೋ ಏನು ಮುದುಕನಿಗೆ!”

“ಇಲ್ಲ ಸ್ವಾಮೀ, ಇದು ನನ್ನ ಕೋವಿಯಲ್ಲ. ಗುಡ್ಡದ ಮೇಲೆ ಅಡ್ಡಾದಾಗ ಯಾರೋ ಕಳ್ಳರು ಇದನ್ನು ಇಟ್ಟು ನನ್ನ ಕೋವಿ ಕದ್ದು ಒಯ್ದರು. ನಾನು ಡೊಂಬಿಗಾರನೇ ಅಲ್ಲ. ಜಾರ್ಜ ದೊರೆಯ ರಾಜನಿಷ್ಠ ಪ್ರಜೆ. ಈ ವಾಶಿಂಗ್‌ಟನ್ ರಾಜನ ಬಗೆಗೆ ನನಗೆ ಏನೂ ಗೊತ್ತಿಲ್ಲ!”

ಸರಿ. ಈ ನಿರುಪದ್ರವಿ ಶಬ್ದಗಳು ಒಂದು ಕಾಡುಕಿಚ್ಚನ್ನೇ ಹೊತ್ತಿಸಿದವು. “ಜಾರ್ಜ್ ದೊರೆಯ ರಾಜನಿಷ್ಠೆ?” “ಇವನು ಟೋರಿ!” “ಇಂಗ್ಲಿಷರ ಗುಪ್ತಚಾರ!” “ಜಾರ್ಜ್ ವಾಶಿಂಗ್‌ಟನ್ನರ ಹಗೆ!” “ಇವನನ್ನು ಓಡಿಸಿರಿ!” “ಹೊಡೆದು ಅಟ್ಟಿರಿ ಇವನನ್ನು!” ಎಂಬ ಕೂಗೇ ಕೂಗು. ಕೆಲವರ ಪುಂಡು ಕೈಗಳು ಅವನನ್ನು ನೂಕಲು ಬಂದವು!

ಆಗ ಜೊನೊಥನ್ ಡೂಲಿಟ್ಲ್ ನಡುವೆ ಬಿದ್ದು ಗಲಾಟೆಯನ್ನು ನಿಲ್ಲಿಸಿದನು. ರಿಪ್‌ನೊಡನೆ ಮಾತಾಡಿ ಆತನು ಯಾರು ಎಲ್ಲಿಯವನು ಎಂದು

ಆರಿತುಕೊಳ್ಳಹತ್ತಿದನು. “ನಾನು ನಿರುಪದ್ರವಿ, ಸ್ವಾಮಿ. ನಾನು ಇಲ್ಲಿಯವನೆಂದು ಬಂದೆ. ಆದರೆ ಈ ಸ್ಥಳ ನನಗೆ ಹೊಸತು. ನನ್ನ ಹಳೆಯ ಗೆಳೆಯರು ಇಲ್ಲಿ ಇಲ್ಲ.”

೮

ರಿಪ್ ವಾನ್ ವಿಂಕಲ್‌ನಿಗೆ ಆದದ್ದೇನೆಂದು ನಮಗೆ ಗೊತ್ತು. ಆತ ನಡುರಾತ್ರಿಗೆ ಕ್ಯಾಟ್‌ಸ್ಕಿಲ್ ಗುಡ್ಡಗಳನ್ನು ಹೊಕ್ಕಿದ್ದನು. ಆ ಹೊತ್ತಿಗೆ ಅಲ್ಲಿ ಹೋದವರಿಗೆ ದೆವ್ವಗಳು ಭೆಟ್ಟಿ ಆಗುವವು. ಆತ ಆ ಗಿಡ್ಡರನ್ನು ಮುಟ್ಟಿದ್ದರೆ ಅವನಿಗೆ ಗೊತ್ತಾಗುತ್ತಿತ್ತು. ಅವರು ಮಂದಿಯಲ್ಲ, ಪಿಶಾಚಿಗಳೆಂದು. ಆಗ ಅವರ ಆ ಮದ್ಯವನ್ನೂ ಆತನು ಸವಿಯುತ್ತಿರಲಿಲ್ಲ. ಸವಿದು ಈ ಮಹಾಮೋಹನಿದ್ರೆಗೂ ೨೦ ವರ್ಷಕಾಲ ಬಲಿಯಾಗಿ ಬೀಳುತ್ತಿರಲಿಲ್ಲ! ಈಗ ಎದ್ದು ಕಣ್ಣುಜ್ಜಿಕೊಂಡು ಬಂದು ನೋಡಿದರೇನು? ಎಲ್ಲ ಹೊಸ ಜಗತ್ತು!

ಅವನಿಗೆಷ್ಟು ಸೋಜಿಗವೋ, ಅಷ್ಟೇ ಊರವರಿಗೂ ಅವನನ್ನು ಕಂಡು ಸೋಜಿಗ. ಒಬ್ಬಿಬ್ಬರಿಗೆ ಅವನ ಆ ವಿಚಿತ್ರ ಹಳಬ ವೇಷದಲ್ಲಿಯೂ ಅವನ ಚರ್ಯೆ ಮುದ್ರೆ ಏನೋ ಹಳೆಯ ಗುರುತನ್ನು ಕೆರಳಿಸುವಂತೆ ಅನಿಸಿತು.

“ನಿನ್ನ ಹಳೆಯ ಗೆಳೆಯರಾದರೂ ಯಾರು?” ಒಬ್ಬ ಹೆಂಗಸು ಮುಂದೆ ಬಂದು ಮರುಕದ ದನಿಯಲ್ಲಿ ಕೇಳಿದಳು. “ನಿಕೋಲಸ್ ವೆಡ್ಡರ್ ಎಲ್ಲಿ?” ರಿಪ್ ತಿರುಗಿ ಕೇಳಿದನು.

“ವೆಡ್ಡರ್? ಅಯ್ಯೋ ಅವನು ಸತ್ತುಹೋಗಿ ಹದಿನೆಂಟು ವರ್ಷ ಕಳೆದವು!”

ಇದೇ ರೀತಿ ಅವನ ಇತರ ಗೆಳೆಯರ ಕತೆ. ಬ್ರಾವರ್ ಡಚರ್ ಸ್ವಾತಂತ್ರ್ಯ ಯುದ್ಧದಲ್ಲಿ ಸತ್ತಿದ್ದನು; ಡೆರಿಕ್ ವಾನ್ ಬುಮ್ಮೆಲ್, ಪತ್ರಿಕೆ ಓದಿ ಹೇಳುತ್ತಿದ್ದ ಹಳೆಯ

ಮೇಷ್ಟ್ರು ಯುದ್ಧದಳಪತಿಯಾಗಿ ಹೆಸರು ಗಳಿಸಿ ಇಂದು ಕಾಂಗ್ರೆಸ್ಸಿನಲ್ಲಿ ಸದಸ್ಯನಾಗಿದ್ದನು. ಆದರೆ ಬಂಕರ್‌ಹಿಲ್ ಕಾಳಗದಲ್ಲಿ ಅವನು ಒಂದು ತೋಳನ್ನೇ ಕಳೆದುಕೊಂಡಿದ್ದಾನೆ! ಇದೆಲ್ಲವೂ ರಿಪ್‌ನಿಗೆ ಅದ್ಭುತ ವಾರ್ತೆ, ಕೊನೆಗೆ ಆತ ಕೇಳಿದನು: "ಹಾಗಾದರೆ ರಿಪ್ ವಾನ್ ವಿಂಕಲ್‌ನನ್ನು ಬಲ್ಲವರು ಇಲ್ಲಿ ಯಾರೂ ಇಲ್ಲವೇ?"

"ಹಾಗೆಂದರೆ? ನಾವೆಲ್ಲರೂ ಅವನನ್ನು ಬಲ್ಲೆವು. ಅದೊ ಅಲ್ಲಿ ಆತ ನಿಂತಿದ್ದಾನೆ ಆ ಮರಕ್ಕೆ ಆನಿಸಿಕೊಂಡು. ನಿರುದ್ಯೋಗಿ, ನಿರುಪಯೋಗಿ!" ಹಲವು ಕಂಠಗಳು ಒಮ್ಮೆಯೇ ಕೂಗಿ ಕಲಕಲ ಮಾಡಿದವು.

ಮತ್ತು ಅಹುದು, ಅಲ್ಲಿ ನಿಂತಿದ್ದ ಹರೆಯದ ಎಳೆಯ ರಿಪ್. ಈ ಮುದುಕನದೇ ಪ್ರತಿಬಿಂಬ! ಇವನಪ್ಪೇ ಸೋಮಾರಿ. ಅಸಡ್ಡಾಳ, ಮನೆ-ಹಾಳ! ಅವನ ಹರಿದ ಬಟ್ಟೆಗಳ ಕಿಸೆಗಳಲ್ಲಿ ಉಂಡಾಡಿ ಮಕ್ಕಳು ಹುಲ್ಲು ಹೂವುಗಳನ್ನು ತುಂಬಿ ಅವನನ್ನು ಗದ್ದೆಯ ಬೆಚ್ಚಿನಂತೆ ಸಿಂಗರಿಸಹತ್ತಿದ್ದರು. ಅತ ನಗುತ್ತ ನಿಂತಿದ್ದನು!

"ಅಯ್ಯೋ! ಅವನೇ ನಾನು! ಅಲ್ಲ, ನಾನೇ ಅವನು! ಹಾಗಾದರೆ ಈ ನಾನು ಯಾರು? ನಾನು ಗುಡ್ಡದ ಮೇಲೆ ನಿದ್ದೆ ಹೋದೆ, ನಿನ್ನೆ ರಾತ್ರಿ ನನ್ನ ನಾಯಿ ವೂಲ್ಫ್ ಓಡಿಹೋಯಿತು, ಕೋವಿ ಬದಲಾಯಿತು. ಈಗ ನಾನೇ ಬೇರೆ ಆಗಿದ್ದೇನೆ. ನಾನು ಯಾರೆಂದು ನೀವು ಯಾರಾದರೂ ಹೇಳುವಿರಾ?" ಮುದುಕನು ಬಿಕ್ಕಿ ಬಿಕ್ಕಿ ಕೇಳಿದನು.

ಈ ವಿಚಿತ್ರ ಮಾತು ಕೇಳಿ ಹಲವರು ತಲೆದೂಗಿದರು. ಕೆಲವರು ತಲೆಯನ್ನು ಬೆರಳಿನಿಂದ ತಟ್ಟಿಕೊಂಡು ಈ ಮುದುಕ ಮರುಳನೆಂದು ಸೂಚಿಸಿದರು. ಒಬ್ಬ ತಾಯಿಯ ಟೊಂಕವೇರಿ ಕೂತ ಒಂದು ಮುದ್ದು ಮುದ್ದೆಯಾದ ಕೂಸು ಕೂಗಿತು! ಆಗ ಅದರ ತಾಯಿ ಅಂದಳು. "ಕಂದ ರಿಪ್ ಕೂಗಬೇಡ, ಈ ಮುದುಕ ಪಾಪ ಒಳ್ಳೆಯವನು. ಹೆದರಬೇಡ. ಈ ಅಜ್ಜನನ್ನು ನಮ್ಮಲ್ಲಿ ಈಗ ಊಟಕ್ಕೆ ಕರೆದೊಯ್ಯುವಾ, ನೀನು ಅವನ ಕೋವಿಯನ್ನು ನೋಡುವಿಯಂತೆ!"

ಈಗ ಮುದಿ ರಿಪ್‌ನಿಗೆ ಈ ಹೆಂಗಸಿನ ದನಿ ಗುರುತಿನದೆನಿಸಿತು. “ನೀನು ಯಾರು ತಾಯಿ? ನಿನ್ನ ತಂದೆ ಯಾರು? ನಿನಗಾದರೂ ನನ್ನ ಗುರುತು ಹತ್ತುವುದೋ ನೋಡುವಾ?”

“ಅಜ್ಜಾ ನಾನು ಜೂಡಿಥ್ ಗಾರ್ಡಿನೇರ್. ಆದರೆ ತಂದೆಯನ್ನು ನಾನು ಬಾಲ್ಯದಲ್ಲಿಯೇ ಕಳೆದುಕೊಂಡೆನು. ಅವನ ಹೆಸರು ರಿಪ್‌ವಾನ್ ವಿಂಕಲ್. ಇಪ್ಪತ್ತು ವರ್ಷ ಹಿಂದೆ ಅವನು ತನ್ನ ನಾಯಿ ಕೋವಿಗಳೊಂದಿಗೆ ಗುಡ್ಡಗಳನ್ನು ಹೊಕ್ಕವನು ಹಿಂದಿರುಗಿ ಬರಲೇ ಇಲ್ಲ. ನನ್ನ ಬಡಪಾಯಿ ಅಪ್ಪ” ಆಕೆ ನಿಟ್ಟುಸಿರು ಬಿಟ್ಟಳು!

“ಮತ್ತೆ ನಿನ್ನ ತಾಯಿ?” ರಿಪ್ ಕೇಳಿದನು. ಅವನ ಎದೆಯಲ್ಲಿ ಹೊಸ ಆಸೆ ಚಿಗುರಿತು. “ಅಯ್ಯೋ ನನ್ನ ತಾಯಿ, ತಂದೆಯ ಶೋಕಕ್ಕೆ ಎದೆಯೊಡೆದುಕೊಂಡಳು. ಆಕೆ ತೀರಿಕೊಂಡಾಗ ಜಾನ್ ಗಾರ್ಡಿನೇರನ ಮನೆಯವರು ನನ್ನನ್ನು ನೋಡಿಕೊಂಡರು. ನಾನು ಮುಂದೆ ಜಾನ್‌ನನ್ನು ಮದುವೆ ಆದೆನು.”

ಇನ್ನು ರಿಪ್‌ನಗೆ ತಡೆಯಲು ಆಗದಾಯಿತು. ಆತ ಮುಂದ ನುಗ್ಗಿ ಮಗಳನ್ನು ಎದೆಗೆ ಬಿಗಿದಪ್ಪಿಕೊಂಡನು. “ಜ್ಯೂಡಿಥ್, ಜ್ಯೂಡಿಥ್, ನಾನೇ ನಿನ್ನ ಅಪ್ಪ, ನಾನೇ ರಿಪ್ ವಾನ್ ವಿಂಕಲ್. ನನ್ನನ್ನು ನಿನ್ನ ಮನೆಗೆ ಒಯ್ಯಿ ಅಯ್ಯೋ! ನಾನು ಬಹಳ ಬಳಲಿದ್ದೇನೆ. ಸೋತಿದ್ದೇನೆ ಬಾ ಮಗು ಮುದ್ದು ರಿಪ್” ಎಂದು ಬೊಗಸೆಗಣ್ಣಿನ ಮೈತುಂಬಿದ ಬಾಲೆಯನ್ನು ತನ್ನ ತೋಳಿನಲ್ಲಿ ಎತ್ತಿಕೊಂಡು ಮುದ್ದಾಡಿದನು.

ಇಷ್ಟು ಹೊತ್ತಿಗೆ ಜನಸಂದಣಿ ಹೆಚ್ಚುತ್ತ ಹೋಯಿತು. ರಿಪ್ ವಾನ್ ವಿಂಕಲ್‌ನ ಪುನರಾಗಮನದ ಪವಾಡಕಥೆ ಬಾಯಿಂದ ಬಾಯಿಗೆ ಹಬ್ಬಿತು. ಒಬ್ಬ ಮುದುಕಿ ಈ ಗುಂಪಿನೊಳಗಿಂದ ಮುಂದೆ ಬಂದು ರಿಪ್‌ನ ಕಣ್ಣಲ್ಲಿ ಕಣ್ಣಿಟ್ಟು ನೋಡಿ ಅಂದಳು, “ಸರಿ ಸರಿ. ಇವನೇ ರಿಪ್ ವಾನ್ ವಿಂಕಲ್, ಹಳೆಯ ಕಾಲ ಮತ್ತೆ ಬಂದಿದೆ. ಸ್ವಾಗತ! ಸ್ವಾಗತ!”

ಜ್ಯೂಡಿಥ್‌ಳೊಂದಿಗೆ ಅವಳ ಮನೆಗೆ ಹೋಗುವ ಮೊದಲು ಕಂಡವರಿಗೆಲ್ಲ ಕೇಳಿದವರಿಗೆಲ್ಲ ತನ್ನ ಕಥೆಯನ್ನು ರಿಪ್ ಮತ್ತೆ ಮತ್ತೆ ಹೇಳಬೇಕಾಯಿತು. ಇಪತ್ತು ವರ್ಷ ಒಂದು ರಾತ್ರಿಯಾಗಿ ಆತನು ಕಳೆದ ಮಾಯದ ಬಗೆಯನ್ನು ಮತ್ತೆ ಮತ್ತೆ ಬಣ್ಣಿಸಬೇಕಾಯಿತು. ಅದನ್ನು ಕೆಲವರು ನಂಬಲಿಲ್ಲ. ಕೆಲವರು ಸಿಳ್ಳು ಹಾಕಿದರು. ಕೆಲವರು ರಿಪ್‌ನನ್ನು ಚೆನ್ನಾಗಿ ಬಲ್ಲವರು ಕ್ಯಾಟ್‌ಸ್ಕಿಲ್ ಗುಡ್ಡಗಳ ಕಥೆ ಗೊತ್ತಿದ್ದವರು, ತಿಳಿವಳಿಕೆಯಿಂದ ನಕ್ಕರು.

ಆಗ ಮುದಿ ಪೀಟರ್ ಒಂಡರ್ ಡಿಂಕ್‌ನ ಸಲಹೆ ಕೇಳಲಾಯಿತು. ಅವನು ಆ ಹಳ್ಳಿಯ ಹಳೆಯ ಇತಿಹಾಸತಜ್ಞ ಊರ ಚರಿತ್ರೆಯನ್ನು ಬರೆದವನು. ರಿಪ್‌ನ ಕಥೆಯ ಬಗೆಗೆ ಅವನ ಅಭಿಪ್ರಾಯವೇನು? ಅವನೂ ಅದನ್ನು ಒಪ್ಪಿದನು. ಹೆಂಡ್ರಿಕ್ ಹಡ್ಸನ್‌ನ 'ಹಾಫ್-ಮೂನ್' (ಅರ್ಧ ಚಂದ್ರ) ನಾವೆಯ ಹಾಗೂ ನಾವಿಕರ ವೃತ್ತಾಂತವನ್ನೂ ಮುದಿ ಪೀಟರ್ ವರ್ಣಿಸಿದನು. ರಿಪ್ ವಾನ್ ವಿಂಕಲ್ ಆ ನಾವಿಕರ ಲೀಲಾರಾತ್ರಿಯ ಮಾಯೆಗೆ ಸಿಲುಕಿದ್ದನು.

ಮುದಿ ರಿಪ್ ಮತ್ತೆ ಸುಖಿಯಾದನು. ಮಗಳ ಮನೆಯಲ್ಲಿ ಮೊಮ್ಮಗನನ್ನು ಆಡಿಸುತ್ತ ಹೊಸ ಮದ್ಯದಂಗಡಿಗೂ ಭೇಟ್ಟಿ ಕೊಡುತ್ತ ಹಾಯಾಗಿ ಬಾಳಿದನು

## ೩. ನಾರ್ಕಿಸಸ್ ಮತ್ತು ಎಕೊ

ಸಾವಿರಾರು ವರ್ಷಗಳ ಹಿಂದೆ ಗ್ರೀಸಿನಲ್ಲಿ ಒಂದು ಕೂಸು ಹುಟ್ಟಿತು. ಆ ಕೂಸು ತುಂಬ ಚೆಲುವಾಗಿತ್ತು. ಎಷ್ಟು ಚೆಲುವೆಂದು ಕೇಳಬೇಡಿ. ಅದರ ತಾಯಿಗಂತೂ ತನ್ನ ಆ ಕಂದ ಲೋಕೈಕ ಸುಂದರವೆನಿಸಿತು. ಅಂಥ ಮುದ್ದು ಮೋಹಕ ಬಾಲಕ ಪ್ರಪಂಚದಲ್ಲಿಯೇ ಇನ್ನೊಂದು ಇಲ್ಲ ಎಂದು ಆಕೆ ತಿಳಿದಳು. ತನ್ನ ಈ ಪರಮ ಸುಂದರ ಬಾಲಕನ ಭವಿಷ್ಯವೇನು? ಎಂದು ತಿಳಿಯುವ ಲವಲವಿಕೆ ಆ ತಾಯಿಗೆ ತೀವ್ರವಾಯಿತು. ಆಕೆ ಊರಲ್ಲಿಯ ಒಬ್ಬ ಜ್ಞಾನಿಯಾದ ಭವಿಷ್ಯವಾದಿಯ ಬಳಿಗೆ ಮಗನ ಅದೃಷ್ಟವನ್ನು ಅರಿತುಕೊಳ್ಳಲು ಹೋದಳು.

"ನನ್ನ ಕಂದ ಮುಂದೆ ಮುದುಕನಾಗುವ ತನಕವೂ ಬದುಕಿ ಉಳಿಯುವನೇ?" ತಾಯಿ ಅಂಜುತ್ತ ಅಳುಕುತ್ತ ಬೆಸಗೊಂಡಳು. ಅವಳಿಗೆ ಗೊತ್ತು. ಪಾಪಿಗೆ ಪರಮಾಯುಷ್ಯ; ಪುಣ್ಯವಂತರಿಗೆ ಸಾವು ಬರುವುದು ಬೇಗ, ಅಷ್ಟು ಮುದ್ದುಮುದ್ದಾದ ಚೆಲುವ ಬಾಲಕನನ್ನು ದೇವರು ಮೆಚ್ಚದಿರುವುದುಂಟೇ? ಮತ್ತು ದೇವರು ತಾನು ಮೆಚ್ಚಿದ್ದನ್ನು ನಮ್ಮಿಂದ ಕಿತ್ತುಕೊಳ್ಳದೆ ಹೋಗುವುದುಂಟೆ?

ಆಗ ಆ ಜ್ಞಾನಿಯು ಅಂದನು "ಅಹುದು, ಅವನು ಬದುಕುವನು, ಮುಪ್ಪು ಕಾಣುವನು, ಆದರೆ ಒಂದು ಮಾತು..."

"ಅದೇನು ಮಾತು? ಆಡಿಬಿಡಿ" ಎಂದಳು ಆ ತಾಯಿ ಕಳವಳಗೊಂಡು. "ಮತ್ತೇನಿಲ್ಲ, ಈ ಹುಡುಗ ತನ್ನ ಮೋರೆಯನ್ನು ತಾನು ನೋಡಕೂಡದು. ಅಂದರೇನೆ ಆತನಿಗೆ ದೀರ್ಘಾಯುಷ್ಯ" ಎಂದನು.

"ಇಷ್ಟೇ ತಾನೆ?" ನಿಟ್ಟುಸಿರು ಎಳೆದಳು ಆ ಹುಡುಗನ ತಾಯಿ, ಸಮಾಧಾನದಿಂದ. ಅಂದಿನ ಕಾಲದಲ್ಲಿ ಕನ್ನಡಿಯೇ ಗೊತ್ತಿದ್ದಿಲ್ಲ. ತನ್ನ ರೂಪ ತಾನು

ನೋಡುವುದಾದರೂ ಹೇಗೆ? ಅಲ್ಲದೆ ಈ ಭವಿಷ್ಯವಾದಿ ಇದೇನು. ವಿಚಿತ್ರ ಶರ್ತು ಹಾಕುತ್ತಾನೆ? ಅವಳಿಗೆ ಅರ್ಥವೇ ಆಗಲಿಲ್ಲ. ಆದರೂ ಆ ಶರ್ತು ಅಷ್ಟೇನು ಕಠಿಣವಲ್ಲವೆಂದೇ ಆಕೆ ಭಾವಿಸಿ, ಮಗನನ್ನು ಎಚ್ಚರದಿಂದ ಜೋಪಾನ ಮಾಡಿದಳು.

ಆ ಹುಡುಗ ಚೆನ್ನಾಗಿ, ಚೆಲುವಾಗಿ ಬೆಳೆದನು, ಅವನ ಹೆಸರು ನಾರ್ಕಿಸಸ್ ಅವನು ಸರ್ವಾಂಗ ಸುಂದರ, ಅತ್ಯಂತ ಸುಂದರ- ತಾಯಿಯ ಕಣ್ಣಿಗೆ ಮಾತ್ರವಲ್ಲ, ಕಂಡವರ ಎಲ್ಲರ ಕಣ್ಣಿಗೂ ಅವನು ಚೆಲುವಿನ ಪುತ್ಥಳಿಯಾಗಿ ಕಂಗೊಳಿಸುತ್ತಿದ್ದು. ತನ್ನ ರೂಪವನ್ನು ತಾನು ನೋಡಿರದಿದ್ದರೂ ನಾರ್ಕಿಸಸ್ ಮಂದಿ ಮೆಚ್ಚಿಕೊಂಡಾಡುವದನ್ನು ಕೇಳುತ್ತಿದ್ದನು. ಆದ್ದರಿಂದ ಅವನಿಗೆ ಗೊತ್ತು - ತಾನು ಎಂಥ ಚೆಲುವನೆಂದು, ಅದರಿಂದ ನಾರ್ಕಿಸಸ್‌ನಿಗೆ ತುಂಬ ಜಂಭ ಬಂದಿತು. ತನ್ನ ಸೌಂದರ್ಯಕ್ಕೆ ಅವನು ಸೊಕ್ಕಿದನು.

ಆ ಸೊಕ್ಕಿನ ಫಲವೆಂದರೆ ನಾರ್ಕಿಸಸ್. ತನ್ನಲ್ಲಿಯೇ ತನ್ಮಯನಾದನು. ಇತರ ಹುಡುಗ, ಹುಡುಗಿಯ, ಓರಿಗೆಯವರ ಸಂಗಾತ ಸಂಗಾತಿತನದ ಪರಿವೆಯೇ ಅವನಿಗೆ ಉಳಿಯಲಿಲ್ಲ. ತನ್ನನ್ನು ತುಸು ಮರೆತರೆ ತಾನೇ ಬೇರೆಯವರೊಂದಿಗೆ ಹೊಂದಿಕೊಳ್ಳುವುದು? ನಾರ್ಕಿಸಸ್‌ನಿಗೆ ಆತ್ಮ ಸಂಭಾವನೆಯೇ ವಿಪರೀತ. ತನ್ನನ್ನಷ್ಟೇ ಆತ ಮೆಚ್ಚಿದವನು. “ನನಗೆ ಯಾರು ಸರಿ?” ಎನ್ನುವನು. ಯಾವಾಗಲೂ ಒಂಟಿಗನೇ ಸರಿ. ಹೀಗಾಗಿ ನಾರ್ಕಿಸಸ್ ಯಾವಾಗಲೂ ಏಕಾಕಿಯಾಗಿ ಏಕಾಂಗಿಯಾಗಿ ಉಳಿಯತೊಡಗಿದನು. ಅವನಿಗೆ ಒಡನಾಡಿಗಳೇ ಉಳಿಯಲಿಲ್ಲ.

ಆದರೆ ಅವನ ಒಲವು-ಒಡನಾಡಿಗಳನ್ನು ಬಯಸುವವರೇನು ಕಡಿಮೆ ಇದ್ದಿಲ್ಲ. ಸೀಮೆಯ ಕನ್ನೆಯರೆಲ್ಲ ಅವನ ಚೆಲುವಿಗೆ ಮನಸೋತಿದ್ದರು. ಅವನ ಗೆಳೆತನಕ್ಕೆ ಹಾತೊರೆಯುತ್ತಿದ್ದರು. ಆದರೆ ನಾರ್ಕಿಸಸ್‌ನೇ ಅವರನ್ನು ಲೆಕ್ಕಿಸಲಿಲ್ಲ. ಅವನಿಗೆ ಒಬ್ಬನೇ ಏಕಾಂತದಲ್ಲಿ ಅಲೆದಾಡುವುದೆಂದರೆ ಪ್ರೀತಿ, ಅಡವಿಯಲ್ಲಿ ಅಲೆದಾಡುತ್ತ, ಎಲ್ಲಿಯಾದರೂ ಮರದಡಿಗೆ ಗವಿಯಲ್ಲಿ ಕೂತು ಒರಗಿ ತನ್ನ ನೀಳವಾದ ಮಾಟವಾದ

ಹರಿಕಟ್ಟಾದ ಸುಂದರ ಅಂಗೋಪಾಂಗಗಳನ್ನು ನೋಡಿಕೊಂಡು ತಾನೇ ಮನಸ್ಸಿನಲ್ಲಿ ಪ್ರಶಂಸಿಸುತ್ತ ಇರುವುದೇ ಅವನಿಗೆ ಹವ್ಯಾಸವಾಯಿತು.

ಒಂದು ದಿನ ಹೀಗೆ ಒಂದು ಅಡವಿಯಲ್ಲಿ ಮರಗಳ ದಟ್ಟ ಹಸಿರುಗಳಲ್ಲಿ ನಾರ್ಸಿಸಸ್ ನಡೆದಿರುವಾಗ, ಒಬ್ಬ ವನದೇವಿ ಅವನನ್ನು ನೋಡಿದಳು. ನೋಡಿದ್ದೇ ತಡ, ಮರುಳಾಗಿ ಮೈಮರೆತು ಹುಚ್ಚಿಯಂತೆ ಅವನ ಬೆನ್ನುಹತ್ತಿದಳು. ಆ ವನದೇವಿಯ ಹೆಸರು ಎಕೋ (ಎಕೋ ಎಂದರೆ ಮಾರ್ದನಿ, ನಿಮಗೆ ಗೊತ್ತು) ಎಕೋ ಹಿಂದೊಮ್ಮೆ ಬನಶಂಕರಿ ಹೆರಾದೇವತೆಯ ಕೋಪಕ್ಕೆ ಪಾತ್ರಳಾಗಿದ್ದಳು. ತನ್ನ ತಾಳಗೆಟ್ಟ ವಾಚಾಳಿತನದಿಂದ ಕೆರಳಿದ ಹೆರಾದೇವತೆ ಅವಳಿಗೆ ಶಾಪವಿತ್ತು ಎಕೋಳ ಮಾತಿನ ಶಕ್ತಿಯನ್ನೇ ಹೀರಿಕೊಂಡಿದ್ದಳು.

ಅಂದರೆ ಎಕೋ ಪೂರ್ತಿ ಮೂಕಿ ಆಗಿದ್ದಿಲ್ಲ. ಯಾರು ಏನೇ ಅಂದರೂ ಆಕೆ ಅವರ ಮಾತಿನ ಕೊನೆಯ ಶಬ್ದಗಳನ್ನಷ್ಟೇ ತಿರುಗಿ ಆಡಬಲ್ಲಳು! ಮಾತಿಗೆ ಮಾತು ಹರಟಲಾರಳು! ಅಂದಾಗ ಆಕೆ ನಾರ್ಸಿಸಸ್‌ನೊಂದಿಗೆ ಮಾತಾಡುವುದು ಹೇಗ ಸಾಧ್ಯ? ತನ್ನ ಪ್ರೀತಿಯನ್ನು ಅವನಲ್ಲಿ ತೋಡಿಕೊಳ್ಳುವುದು, ಆಡಿ ತೋರಿಸುವುದಾದರೂ ಹೇಗೆ? ಆತ ಮಾತಾಡಿದ ಹೊರತು ಆಕೆ ಮಾರ್ನುಡಿಯುವಂತಿರಲಿಲ್ಲ.

ಎಕೊ ನಾರ್ಸಿಸಸ್‌ನನ್ನು ಹಿಂಬಾಲಿಸಿದಳು. ಅಡವಿಯಲ್ಲಿ ಅವನು ಹೋದಲ್ಲಿ ಬಂದಲ್ಲಿ ನಡೆದಲ್ಲಿ ಆಕೆ ಅವನನ್ನು ಅನುಸರಿಸಿದಳು. ಆದರೆ ತುಸು ದೂರ ಗಿಡಗಂಟಿಗಳ ಕಲ್ಲುಬಂಡೆ ಮರೆಯಲ್ಲಿಯೇ ಅಡಗಿ ಇರುವಳು. ನಾರ್ಸಿಸಸ್‌ನೇ ತನ್ನನ್ನು ಸುಳಿವು ಹಿಡಿದು ತನ್ನನ್ನು ಗಮನಿಸಬೇಕು ಮೊದಲು ಮಾತನಾಡಿಸಬೇಕು, ಹತ್ತಿರ ಕರೆದುಕೊಳ್ಳಬೇಕು ಎಂದು ಎಕೋಳ ಹೌರೈಕೆ, ಹಂಬಲ.

ಆದರೆ ನಾರ್ಸಿಸಸ್‌ನಿಗೆ ಅದರ ಗೊತ್ತು ಗೊಡವೆ ಎಲ್ಲಿ? ಆತ ತನ್ನಲ್ಲಿಯೇ ತಾನು ತಲ್ಲೀನ. ತನ್ನ ಹೊರತು ಹೊರಗಿನ ಸಂಗತಿಗಳತ್ತ ಅವನ ಗಮನ ಹರಿಯುತ್ತಲೇ ಇದ್ದಿಲ್ಲ.

ಅವನು ಮೌನವಾಗಿ ಮೆಲ್ಲಗೆ ಅಲೆದಾಡುತ್ತಿದ್ದನು. ಎಕೊ ಅವನ ಬೆನ್ನಿಗೇ ನಿಧಾನವಾಗಿ ನಡೆಯುತ್ತಿದ್ದಳು.

* * *

ಹೀಗೆಯೇ ಬಹುಕಾಲ ನಡೆಯಿತು. ಕೊನೆಗೆ ಒಮ್ಮೆ ನಾರ್ಕಿಸಸ್ ಒಂದು ತಂಗೊಳದ ಬಳಿಗೆ ನೀರು ಕುಡಿಯಲು ನಿಂತನು. ಆಗ ಹತ್ತಿರವೇ ಪೊದೆಗಳಲ್ಲಿ ಸರಸರ ಸದ್ದು ಅವನ ಕಿವಿಗೆ ಬಿತ್ತು.

"ಯಾರಲ್ಲಿ?" ಆತ ಕಣ್ಣೆತ್ತಿ, ಆ ಹಸಿರು ನೆಳಲ ಹೊದರಿನತ್ತ ಕೇಳಿದ.

"ಅಲ್ಲಿ!" ಮಾರ್ದನಿ ಬಂದಿತು. ಆದರೆ ಈ ದನಿ ಯಾರದೆಂದು ಅವನಿಗೆ ಗೊತ್ತಾಗಲಿಲ್ಲ.

"ನಿನಗೆ ಯಾವ ಹೆದರಿಕೆ?" ಅವನು ಮತ್ತೆ ಕೇಳಿದನು. ಈ ಕಣ್ಮರೆಯ ದನಿಯು ಮರುಮಾತಾಡಿತು.

"ಹೆದರಿಕೆ!"

"ಬಾ ಇಲ್ಲಿ!" ನಾರ್ಕಿಸಸ್ ಕೂಗಿದನು ಬೆಚ್ಚಜೆರಗಾಗಿ. ಹೀಗೆ ತನ್ನ ಮಾತನ್ನು ಅಣಕಿಸಿ ತಿರುಗಿಸಿರುವ ಈ ವಿಚಿತ್ರ ವ್ಯಕ್ತಿ ಯಾರು? ಅವನು ಸೋಜಿಗಪಟ್ಟನು.

"ಇಲ್ಲಿ" ಮತ್ತೆ ಮಾರ್ನುಡಿದು ಎಕೊ ಪೊದೆಗಳ ನಡುವಿನಿಂದ ಎದ್ದು ಹೊರಗೆ ಹೆಜ್ಜೆ ಇಟ್ಟಳು ನಗುತ್ತ ನಾಚುತ್ತ. ನಾರ್ಕಿಸಸ್ ತನ್ನನ್ನು ಕರೆದನಲ್ಲ! ಅದಕ್ಕಾಗಿ ಆಕೆಗೆ ಹಿಗ್ಗೇ ಹಿಗ್ಗು ಆದರೆ ಅವಳು ನಾಚುತ್ತ ಬಳುಕುತ್ತ ಅವನ ಪಕ್ಕದಲ್ಲಿ ಬಂದು ನಿಂತಾಗ ಆ ಆತ್ಮಸಂಮೋಹಿತನಾದ ಹೆಮ್ಮೆಯ ನವಯುವಕನು ತನ್ನ ಎದುರಿಗೆ ನಿಚ್ಚಳವಾಗಿ ನಿಂತ ನೀರಿನ ತಿಳಿಗೊಳದಲ್ಲಿ ಬಾಗಿ ನೋಡಿದನು. ಮತ್ತು ಅಲ್ಲಿ ಎಕೊಳಿಗಿಂತ ಚೆಂದವಾದ

ಇನ್ನೊಂದು ಚೆಲು ಮೊಗವನ್ನು ಕಂಡನು. ಮುಂದೇನು? ಚೆಲುವೆಯಾದ ಎಕೋಳನ್ನು ನಿರಾಶೆಗೊಳಿಸಿ ಬದಿಗೆ ತಳ್ಳಿ, ಸಿಡುಕಿನ ಕರ್ಕಶ ದನಿಯಲ್ಲಿ ಕೇಳಿದನು-

"ಯಾರಿಗಾಗಿ ಬಂದೆ ನೀನು?"

"ನೀನು!" ಆಕೆ ಅಳುಕಿನಿಂದ ಪಿಸುಗುಟ್ಟಿದಳು. ಅವನ ಉರಿಮೋರೆಯಿಂದ ಬೆಚ್ಚಿ ಹಿಂಜರಿಯುತ್ತ.

"ನಡೆ, ತೊಲಗು!" ಆತ ರೊಚ್ಚಿಗೆದ್ದು ಕೂಗಿದನು. "ಬೇರೆ ಯಾವುದು ನಿಲ್ಲಬಹುದು ಇವರಿಬ್ಬರ ನಡುವೆ - ನೀನು ಮತ್ತು ಚೆಲುವ ನಾರ್ಕಿಸಸ್!"

"ನಾರ್ಕಿಸಸ್!" ಎಕೊ ನಿಟ್ಟುಸಿರು ಬಿಟ್ಟಳು.

ಆದರೆ ಆ ದರ್ಪೋನ್ಮತ್ತ ನವಯುವಕನು ಅವಳ ಮಾತಿಗೆ ಕಿವಿಗೊಡಲೇ ಇಲ್ಲ. ಆಕೆ ಪಾಪ, ಸದ್ದಾಗದಂತೆ ತುದಿಗಾಲಿನ ಮೇಲೆ ನಿಧಾನವಾಗಿ ಮರಗಳ ಮಬ್ಬಿನಲ್ಲಿ ಮರೆಯಾದಳು. ಅವಳ ಹೃದಯವು ದುಃಖದಿಂದ, ಲಜ್ಜೆಯಿಂದ ತುಂಬಿ ತುಳುಕಿತು. ಆಕೆ ನಾರ್ಕಿಸಸ್‌ನನ್ನು, ಚೆಲುವ ನಾರ್ಕಿಸಸ್‌ನನ್ನು ಮನಸಾರೆ ಮೆಚ್ಚಿ ಒಲಿದು ಬಯಸಿ ಬೆನ್ನಿಗೆ ಬಿದ್ದು ಬಂದಿದ್ದಳು. ಆದರೆ ಅವನು ಅವಳನ್ನು ಧಿಕ್ಕರಿಸಿ ಅಟ್ಟಿಬಿಟ್ಟಿದ್ದನು.

ಎಕೊ ಶಾಂತಳು, ನಮ್ರಳು, ಸಾಧುಸೌಮ್ಯಳು, ಆದರೂ ಹೀಗೆ ತಿರಸ್ಕೃತಳಾದ ಮೇಲೆ ಅವಳಿಗೆ ದೇವರಲ್ಲಿ ಮೊರೆ ಇಡದೆ ಇರಲು ಆಗಲಿಲ್ಲ: ಹೀಗೆ ವ್ಯರ್ಥವಾಗಿ ಪ್ರೀತಿಸುವುದರ ಅರ್ಥವೇನೆಂಬುದನ್ನು ಈ ಗರ್ವಿಷ್ಠ ಯುವಕನೂ ಕಂಡುಕೊಳ್ಳಲಿ ಎಂದು.

ಇತ್ತ ನಾರ್ಕಿಸಸ್ ಒಬ್ಬಂಟಿಗನಾಗಿ ಆ ಕೊಳ್ಳದ ತಡಿಯಲ್ಲಿ ಉಳಿದನು. ಅವನು ಮತ್ತೆ ಆತುರದಿಂದ ಆ ತಿಳಿನೀರಿನ ಪಾತಳಿಯತ್ತ ಹೊರಳಿದನು. ಅಲ್ಲಿ ಆತ ಎಕೋಳಿಗಿಂತ ಚೆಲುವಾದ ಮೊಗವನ್ನು ಕಂಡಿದ್ದನು! ಕೊಳವು ಬೆಳ್ಳಿಯ ಕನ್ನಡಿಯಂತೆ

ಚಾಚಿತ್ತು ಬಿಸಿಲಿನಲ್ಲಿ, ಥಳಥಳ ಹೊಳೆಯುತ್ತ ಸೊಗಸಾದ ಹೂವುಗಳ ಬಳೆಯಂಥ ದೊಡ್ಡ ಕಂದಣದಲ್ಲಿ.

ನಾರ್ಕಿಸಸ್ ಅದರ ಅಂಚಿಗೆ ಮಂಡಿಯೂರಿ ಕುಳಿತನು. ನೀರಿನಲ್ಲಿ ನೋಡಿಯೇ ನೋಡಿದನು. ಅಲ್ಲಿ ಮಡುವಿನಲ್ಲಿ ಮೂಡಿ ಅವನನ್ನೆ ದಿಟ್ಟಿಸಿ ನೋಡುವ ಮುಖಮಂಡಲವು ಅಷ್ಟು ಸುಂದರವಾಗಿತ್ತು! ನಾರ್ಕಿಸಸ್‌ನಿಗೆ ಅನಿವಾರ್ಯವಾಗಿ ಅನಿಸಿತು. ತಾನು ನೀರಿಗೆ ಹಾರಿ ಅದರ ಪಕ್ಕದಲ್ಲಿ ಸೇರಬೇಕು! ಆ ಮುಖವು ಅವನ ಮುಖದಂತೆಯೇ ಇತ್ತು.

ಕುರುಳು ಕುರುಳಾದ ಕೇಶರಾಶಿ ಅವನ ಬಿಳಿಯ ಹೆಗಲುಗಳ ಮೇಲೆ ತೊನೆದಾಡುತ್ತಿತ್ತು. ಆ ಕಣ್ಣುಗಳು ಅವನಂತೆಯೇ ತೇಜಃಪುಂಜವಾಗಿದ್ದವು. ಈ ತುಟಿಗಳೂ ಅಷ್ಟೇ ಕೆಂಪು!

“ನೀನು ಯಾರು?” ನಾರ್ಕಿಸಸ್ ಆ ಪ್ರತಿಬಿಂಬವನ್ನು ಕೇಳಿದನು. ನೀರಿನಲ್ಲಿಯ ಆ ತುಟಿಗಳು ಅಲುಗಾಡಿದವು; ಆದರೆ ಅವು ಆಡಿದ ಉತ್ತರ ಅವನಿಗೆ ಕೇಳಿಸಲಿಲ್ಲ.

ನಾರ್ಕಿಸಸ್ ಮುಗುಳುನಕ್ಕನು; ಆ ಪ್ರತಿರೂಪದಿಂದ ಮರು ಮುಗುಳು ನಗೆಯನ್ನು ಪಡೆದನು. ಆಗ ನಾರ್ಕಿಸಸ್‌ನ ಮೊಗವು ಹರ್ಷದಿಂದ ಕೆಂಪೇರಿತು ಆದರೆ ಕಣ್ಣುಗಳು ಮೊದಲಿಗಿಂತಲೂ ಹೆಚ್ಚು ಕಾಂತಿಗೊಂಡು ಹೊಳೆದವು. ನಾರ್ಕಿಸಸ್ ಆ ಪಡಿನೆಳಲಿನತ್ತ ತನ್ನ ತೋಳನ್ನು ಚಾಚಿದನು. ಆ ಸುಂದರಾಕೃತಿಯೂ ಹಾಗೆಯೇ ಮಾಡಿತು. ಆದರೆ ಅವನು ನೀರನ್ನು ಮುಟ್ಟಿದೊಡನೆ ಈ ಸುಂದರ ಆಕೃತಿಯು ಕನಸಿನಂತೆ ಕರಗಿ ಮಾಯವಾಯಿತು!

ನಾರ್ಕಿಸಸ್‌ನಿಗೆ ತೀರ ನಿರಾಶೆ ಆಯಿತು. ಆತ ಕೊಳದ ಕಡೆಗೆ ನೀರನ್ನೆ ಎವೆಯಿಕ್ಕದೆ ದುಃಖದಿಂದ ದಿಟ್ಟಿಸುತ್ತ ಕೂತನು; ಮತ್ತು ಅಕೋ! ಮತ್ತೆ ಆ ಸಿರಿಮೊಗವು ಮೆಲ್ಲಗೆ ಒಡಮೂಡಿ ಕಾಣಿಸಿತು; ಆದರೆ ಆ ಮೊಗವು ದುಃಖದಿಂದ ನೊಂದಿತ್ತು! ಆ

ಮುಖವು ಮತ್ತೆ ಕಂಡಿತೆಂದು ನಾರ್ಕಿಸಸ್ ಹಿರಿಹಿರಿ ಹಿಗ್ಗಿದನು; ಮತ್ತೊಮ್ಮೆ ನಕ್ಕನು; ಮತ್ತೆ ಆ ನೀರಿನೊಳಗಿಂದ ಅವನನ್ನು ನೋಡುವ ಆ ಮುಖವೂ ತಿರುಗಿ ನಕ್ಕಿತು.

"ನಾನು ತಿರಸ್ಕರಿಸಲು ತಕ್ಕವನಲ್ಲ!" ನಾರ್ಕಿಸಸ್, ಕಳವಳ ಕೆರಳಿ ಕಣ್ಣಲ್ಲಿ ನೀರು ತುಂಬಿ ಅಂದನು. ಅವನು ಆಡುತ್ತಿದ್ದಂತೆ ಆ ಮೊಗವು ಮುಸುಮುಸುಕಾಯಿತು. "ಈ ಮರ್ತ್ಯಲೋಕದ ತರುಣರೂ ತರುಣಿಯರೂ ನನ್ನನ್ನು ಪ್ರೀತಿಸಿದ್ದಾರೆ! ವ್ಯರ್ಥವಾಗಿ!" ಆತ ಹಲುಬಿದನು.

"ವ್ಯರ್ಥವಾಗಿ!" ಮರಗಳ ಮಬ್ಬಿನಿಂದ ಅವನಿಗೆ ಕಾಣದಂತೆ ಎಕೊ ನಿಂತು ನಿರೀಕ್ಷಿಸುತ್ತಿರುವ ನಿಟ್ಟಿನಿಂದ ಆರ್ತವಾದ ಪ್ರತಿಧ್ವನಿಯು ಬಂದಿತು.

ನೀರೊಳಗಿನ ಆ ಚೆಲುವಾದ ಪಡಿನೆರಳನ್ನು ತನ್ನ ತೋಳುಗಳ ತೆಕ್ಕೆಯಲ್ಲಿ ತೆಗೆದವಚಿಕೊಳ್ಳಲಿಕ್ಕೆ ನಾರ್ಕಿಸಸ್ ಮತ್ತೆ ಮತ್ತೆ ಬಾಗಿದನು. ಆದರೆ ಪ್ರತಿ ಸಲವೂ ಅದು ಅವನಿಂದ ನಿಸುಟಿ ನುಸುಳಿಹೋಯಿತು. ಅವನ ಕೈ ಸೋಂಕಿ ನೀರು ಕಲಕಿ ಕಲ್ಲೋಲಗೊಂಡು ನೆಳಲು ಕದಡಿಹೋಗುತ್ತಿತ್ತು. ಮತ್ತೆ ಕಾಣಿಸಿಕೊಂಡಾಗ ನಾರ್ಕಿಸಸ್ ಅದರೊಡನೆ ಮಾತಾಡುತ್ತಿದ್ದನು. ಕೈಚಾಚಿ ಅಂಗಲಾಚಿ ಬೇಡಿಕೊಳ್ಳುತ್ತಿದ್ದನು-ತನ್ನೆಡೆಗೆ ಬಾರೆಂದು; ತನ್ನೊಡನೆ ಕೂಡೆಂದು, ಆದರೆ ಆ ಪ್ರತಿಬಿಂಬ ಆ ಸುಂದರರೂಪ ಅವನ ಹಾವಭಾವಗಳನ್ನು ಚಲನವಲನಗಳನ್ನು ಮಾತ್ರ ಅಣಕಿಸಿ ಅನುಸರಿಸುತ್ತಿತ್ತು- ನಿರ್ಭಾವ ಮೌನದಲ್ಲಿ!

ಪಾಪ, ಬಡಪಾಯಿ ನಾರ್ಕಿಸಸ್! ಅವನಿಗೆ ತಿಳಿಯಲೇ ಇಲ್ಲ- ನೀರಿನಲ್ಲಿ ನಟಿಸುವ ಈ ಮುಖವು, ಆ ಆಕೃತಿಯು ತನ್ನ ಪ್ರತಿಬಿಂಬವೇ ಹೊರತು ಬೇರೇನೂ ಅಲ್ಲವೆಂದು. ಅವನು ತನ್ನನ್ನೇ ತಾನು ಮೆಚ್ಚುವುದರಿಂದ ಈಗ ತನ್ನದೇ ಪ್ರತಿಬಿಂಬವನ್ನು ಮೋಹಿಸಿ ಮಂಕಾಗುವ ಅವಸ್ಥೆಗೆ ಬಂದಿದ್ದನು.

"ಅಯ್ಯೋ!" ಆತ ಮತ್ತೆ ಮತ್ತೆ ಕೊರಗಿ ಮರುಗಿ ಕೂಗಿದನು.

“ಅಯ್ಯೋ!” ಎಕೊ ಅವನ ಆ ಮರ್ಮಯಾತನೆಯನ್ನು ಕಂಡು ತಾನೂ ತಾಳಲಾರದೆ ನಿಡುಸುಯ್ದು ದನಿಗೂಡಿಸಿದಳು.

ಆತ ಮತ್ತೆ ಮತ್ತೆ ಆ ನೀರಿನ ನೆರಳನ್ನು ಮುಟ್ಟಲು ಮುದ್ದಿಡಲೂ ಹೆಣಗಿ ಸೋತನು. ಆ ನಿಶ್ಶಬ್ದ ನಿಃಸ್ತಬ್ಧ ಕೊಳದಂಚಿನಿಂದ ಅವನ ಕಾಲು ಕೀಳಲಾರದೇ ಹೋದವು. ಗಂಟೆಗಳು ಕಳೆದವು. ದಿನಗಳು ಸಂದವು. ನಾರ್ಕಿಸಸ್ ಆ ಕೊಳದ ತಡಿಯಲ್ಲಿ ತನ್ನ ಪ್ರತಿಬಿಂಬವನ್ನೇ ಧೇನಿಸುತ್ತ ದಿಟ್ಟಿಸುತ್ತ ಕೂತಲ್ಲಿಯೇ ಕುಳಿತು ಬಿಟ್ಟಿದ್ದನು. ಅನ್ನವಿಲ್ಲ, ನೀರಿಲ್ಲ, ಹಾಗೆಯೇ ಕೂತಲ್ಲಿಯೇ ಕೊರಗಿ ಸೊರಗಿ ಒಂದು ದಿನ ಕೊಳದ ಆ ತಡಿಯಲ್ಲಿಯೇ ನಾರ್ಕಿಸಸ್ ದೇಹವಿಟ್ಟನು.

ಸ್ವರ್ಗದ ದೇವತೆಗಳಿಗೆ ಈ ಸ್ವರತ ಹುತಾತ್ಮ ಯೋಗಿಯ ಆ ಸರ್ವಾಂಗ ಸುಂದರ ದೇಹದ ಮೇಲೆ ಕರುಣೆ ಬಂದಿತು ಮತ್ತು ಅವರು ಅದನ್ನು ಅದೇ ಹೆಸರಿನ ಹೂವಾಗಿ ಮಾರ್ಪಡುವಂತೆ ಮಾಡಿದರು.

ಅಂದಿನಿಂದ ಲೋಕಕ್ಕೆ ನಾರ್ಕಿಸಸ್ ಒಂದು ಹೂವು-ನೀರಿನ ತಡಿಯಲ್ಲಿ ಅರಳಿ ನಿಂತು, ನೀರಿನ ಮೇಲೆ ಬಾಗಿ ತನ್ನ ರೂಪವನ್ನು ಅಲ್ಲಿ ನೋಡಿಕೊಳ್ಳುವ ಚಿಕ್ಕ ಚೆಂದ ಹೂವು!

* * *

ಎಕೊ ಪರಮ ವ್ಯಾಕುಲೆ, ಶೋಕಾಕುಲೆ ಆಕೆ, ನಾರ್ಕಿಸಸ್‌ನನ್ನು ಅಚ್ಚುಮೆಚ್ಚನಿಂದ ಪ್ರೀತಿಸಿದಳು. ಅವನ ಆ ಸಾವು ತನ್ನ ಪ್ರಾರ್ಥನೆಯದೇ ಪ್ರತಿಫಲವಿರಬಹುದೇ? ಎಂದು ಆಕೆ ಅಂಜಿ ನೊಂದಳು. ಅಲ್ಲಿಂದ ಕಾಲ್ತೆಗೆದು ಅವಳು ಗುಡ್ಡಗಾಡು ಸೇರಿದಳು. ಅಲ್ಲಿ ಅತ್ತು ಕರೆದು ಹಲುಬಿ ಕಣ್ಣೀರು ಹರಿಯಿಸಿ ಎಕೊ ಗೋಳಾಡಿದಳು. ಆ ಗೋಳಿನಲ್ಲಿಯೇ ಅವಳ ದೇಹವೆಲ್ಲ ಸೊರಗಿ ನವೆದುಹೋಯಿತು. ಕೊನೆಗೆ ಉಳಿದದ್ದು ಅವಳ ಆ ದನಿಯೊಂದೇ-ಮಂದಿ ಏನೇ ಆಡಿದರೂ ಅವರ

ಕೊನೆಯ ಮಾತನ್ನಷ್ಟೇ ಎತ್ತಿ ಶೂನ್ಯ ದಲ್ಲಿ ಗಾಳಿಯಲ್ಲಿ ಮಾರ್ನುಡಿಯುತ್ತ ಆ ದನಿ ಎಂದೆಂದಿಗೂ ಉಳಿದಿದೆ.

ಏಕಾಂತ ಸ್ಥಳಗಳಲ್ಲಿ; ನಿರ್ಜನ ಸ್ಥಾನಗಳಲ್ಲಿ ಬಂಡೆಗಲ್ಲುಗಳೆಡೆಯಲ್ಲಿ ಈ ಎಕೊ ಇಂದಿಗೂ ನಿಮ್ಮ ಕರೆಗೆ ಓಗೊಡುತ್ತಾಳೆ, ಆದರೆ ನೀವು ಮಾತ್ರ ಅವಳನ್ನು ಕಾಣಲಾರಿರಿ.

## ೪. ರೋಮನ್ ವೀರ-ಹೊರೇಶಸ್

ಕ್ರಿಸ್ತಪೂರ್ವ ೫೧೦ರ ಕಥೆ ಇದು. ವಿಶ್ವವಿಜಯಿ ರೋಮನ್ ಸಾಮ್ರಾಜ್ಯ ಇನ್ನೂ ತಲೆ ಎತ್ತಿರಲಿಲ್ಲ. ಆಗ ಇಟಲಿಯ ಟಸ್ಕನಿ ಪ್ರಾಂತದಲ್ಲಿ ಲಾರ್ಸ್ ಪೊರ್ಸೇನಾ ಎಂಬ ದೊರೆ ಆಳುತ್ತಿದ್ದನು. ಆತ ರೋಮ್ ನಗರದ ಮೇಲೆ ದಾಳಿ ಇಟ್ಟು ರೋಮನ್ನರನ್ನು ಗೆಲ್ಲಬೇಕೆಂಬ ಜಿದ್ದು ತೊಟ್ಟನು. ತನ್ನ ನಾಡಿನಲ್ಲಿ ಎಲ್ಲೆಡೆಗೆ ದೂತರನ್ನು ಅಟ್ಟಿ ತರುಣರನ್ನು ಒಟ್ಟುಹಾಕಿ ದೊಡ್ಡ ದಂಡನ್ನು ಕಟ್ಟಿದನು ಮತ್ತು ರೋಮ್ ನಗರದ ಮೇಲೆ ಏರಿಬಂದನು.

ರೋಮನ್ನರು ದೊಡ್ಡ ಸಿದ್ಧತೆ ನಡೆಯಿಸಿದರು. ಈ ಶತ್ರುಸಂಕಟವನ್ನು ಎದುರಿಸಲಿಕ್ಕೆ ಸುತ್ತಲಿನ ಹಳ್ಳಿಗಳಿಂದ ಎಲ್ಲ ಗಟ್ಟಿಮುಟ್ಟು ಜನರನ್ನು ಕಟ್ಟಾಳುಗಳಾಗಿ ರೋಮ್ ನಗರದಲ್ಲಿ ತಂದು ಯುದ್ಧ ಸನ್ನಾಹ ಆರಂಭಿಸಿದರು. ರೋಮ್ ನಗರದ ಸುತ್ತಲೂ ತೈಬರ್ ಹೊಳೆ ಹರಿಯುತ್ತದೆ. ಅದರ ಆಚೆಗೆ ನಿಂತು ಹಗೆಯನ್ನು ಎದುರಿಸುವುದು ಹಳ್ಳಿಗಳಲ್ಲಿ ಹೋರಾಡುವುದಕ್ಕಿಂತ ಹೆಚ್ಚು ಕ್ಷೇಮವಿತ್ತು. ಲಾಸ್ ಪೂರ್ಸೇನಾನ ಮಹಾ ಸೇನೆ ರೋಮ್ ನಗರವನ್ನು ಸಮೀಪಿಸಿತು. ಹಾದಿಯುದ್ದಕ್ಕೂ ಹಳ್ಳಿಗಳಿಗೆಲ್ಲ ಬೆಂಕಿ ಇಡುತ್ತ ಗೋಧಿಯ ಹೊಲಗಳನ್ನು ಸುಟ್ಟು ಬೂದಿ ಮಾಡುತ್ತ ಮುಂಬರಿಯಿತು.

ರೋಮ್ ನಗರದ ರಕ್ಷಣೆಗೆ ಒಂದೇ ಉಪಾಯ ಉಳಿಯಿತು. ತೈಬರ್ ಹೊಳೆಯನ್ನು ದಾಟಿ ಬರುವ ಮರದ ಸೇತುವೆಯನ್ನು ಕಡಿದು ಚೆಲ್ಲುವುದು! ಪೊರ್ಸೇನಾ ಮತ್ತು ಅವನ ಸೇನೆ ರೋಮ್‌ನಲ್ಲಿ ನುಗ್ಗಿ ಹೋಗದಂತೆ ಮಾಡಲು ಇದೊಂದೇ ಉಪಾಯವೆಂದು ನಗರವಾಸಿಗಳೆಲ್ಲ ಭಾವಿಸಿದರು.

“ಪಟ್ಟಣವನ್ನು ಕಾಪಾಡಲು ಬೇರಾವ ದಾರಿಯೂ ಇಲ್ಲ” ಎಂದು ಜನರ ಕೂಗೆದ್ದಿತು. ಆದರೆ ಆಗಲೇ ಹೊತ್ತು ಮೀರಿತ್ತು. ಒಬ್ಬ ದೂತ ಸೇತುವೆ ಮೇಲಿಂದ ಧಾವಿಸಿ ಬಂದು ಊರಿನಲ್ಲಿ ಸುದ್ದಿ. ಹಬ್ಬಿಸಿದ. “ಲಾರ್ಸ್ ಪೂರ್ಸೇನಾ ಇಲ್ಲೇ ಬಂದುಬಿಟ್ಟ” ಮತ್ತೆ ಅದೂ ನಿಜವಿತ್ತು. ನಗರದ ಕೋಟೆಯ ಗೋಡೆಯ ಮೇಲೆ ನಿಂತ ಜನ ನೋಡಿತು- ಪಡುವಣ ನಿಟ್ಟನಿಂದ ಆ ಮಹಾಸೇನೆ ಸಾಗಿಬರುತ್ತಿತು!

“ಇನ್ನೇನು ಮಾಡುವುದು?” ರೋಮನ್ನರು ಉದ್ಗರಿಸಿದರು, “ನಾವು ಸೇತುವೆ ಮುರಿಯುವುದಕ್ಕೆ ಮುಂಚೆಯೇ ಅವರು ಇಲ್ಲಿಗೆ ಮುಟ್ಟುವರು! ಅವರು ಸೇತುವೆ ದಾಟಿ ಬಂದರೆ ನಾವು ನಗರವನ್ನು ಕಾಯ್ದುಕೊಳ್ಳುವುದಾದರೂ ಹೇಗೆ?”

ಆಗ ರಣಧೀರ ಹೋರೆಶಸ್ ದನಿ ಎತ್ತಿದನು: “ಆಗ್ರ ಭೂಮಿಯಲ್ಲಿ ಪ್ರತಿಯೊಬ್ಬನಿಗೂ ಸಾವು ತಪ್ಪಿದ್ದಲ್ಲ. ಒಬ್ಬನಿಗೆ ತುಸು ಮುಂಚೆ; ಒಬ್ಬನಿಗೆ ತುಸು ತಡೆದು. ಆದರೆ ತನ್ನ ತಾತ ಮುತ್ತಾತಂದಿರ ಆಸ್ತಿಗಳನ್ನು, ತಮ್ಮ ದೇವರುಗಳ ಗುಡಿಗಳನ್ನು ಕಾಪಾಡಲು ಎಂಥ ಭಯಂಕರ ಸಂಕಟಗಳನ್ನು ಇದಿರಾಗಿ ಹೋರಾಡುವುದರಲ್ಲಿ ಅಲ್ಲದೆ ಇನ್ನು ಹೇಗೆ ಮನುಷ್ಯನು ಒಳ್ಳೆಯ ಸಾವನ್ನು ಪಡೆಯಬಲ್ಲ? ಈ ಟಸ್ಕನ್ ಹಗೆಗಳಿಂದ ನಿಮ್ಮನ್ನೆಲ್ಲ ರಕ್ಷಿಸುವಂತಾದರೆ ನಾನಂತೂ ಇಂದೇ ಸಾಯಲು ಹೆಮ್ಮೆಪಡುತ್ತೇನೆ! ಆ ಸೇತುವೆಯನ್ನು ನೀವು ಆದಷ್ಟು ಬೇಗ ಕಡಿದು ಚೆಲ್ಲಿರಿ. ನಾನು ಇನ್ನಿಬ್ಬರು ಬಂಟರೊಂದಿಗೆ ಸೇತುವಿನ ತುದಿಗೆ ಕಾವಲು ನಿಲ್ಲುತ್ತೇನೆ. ಆ ತುದಿ ಇಕ್ಕಟ್ಟಿನ ದಾರಿ ಅಲ್ಲಿ ನಾವು ಮೂರು ಸಾವಿರ ಮಂದಿಯನ್ನು ಹಿಮ್ಮೆಟ್ಟಿಸಬಹುದು! ಯೋಧರೆ, ನಿಮ್ಮಲ್ಲಿ ಯಾರು ನನ್ನೊಂದಿಗೆ ಈ ಸೇತುವೆಯನ್ನು ಕಾಯಲು ನನ್ನ ಎಡಬಲಕ್ಕೆ ನಿಲ್ಲಬಲ್ಲಿರಿ?”

ಹೊರೇಶಸ್ ಕೇಳಿದ್ದೇ ತಡ ಅವನ ಇಬ್ಬರು ಗೆಳೆಯರು ಲಾರ್ಟಿಯಸ್ ಮತ್ತು ಹರ್ಮಿನಿಯಸ್ ಮುಂದೆ ಹೆಜ್ಜೆ ಇಟ್ಟರು- “ನಾವು ಬರುತ್ತೇವೆ ನಿನ್ನೊಂದಿಗೆ!” ಈ ಶೂರತ್ರಯರು ಸೇತುವೆಯನ್ನು ನಡೆದು ದಾಟಿ ಆಚೆಯ ತುದಿಯನ್ನು ಸೇರಿದರು- ಆ

ಮಹಾ ಟಸ್ಕನ್ ಸೇನೆಯನ್ನು ಎದುರಿಸಲಿಕ್ಕೆ ಅವರು ದಾಟಿ ಹೋದೊಡನೆಯೇ ರೋಮನ್ನರು ಇತ್ತ ಸೇತುವೆಯನ್ನು ಕಡಿಯಲಿಕ್ಕೆ ಸುರು ಮಾಡಿದರು. ಅತ್ತ ಆ ಮೂವರು ಯುವಕ ಯೋಧರು ಶತ್ರುವಿಗಾಗಿ ಕಾಯುತ್ತ ಸ್ವಸ್ಥಚಿತ್ತರಾಗಿ ನಿಂತರು.

ಟಸ್ಕನ್ ದಂಡಿನ ದಾಂಡಿಗರು ಗಹಗಹಿಸಿ ನಕ್ಕರು- ಈ ಮೂರು ಎಳೆವರಯದ ಬಂಟರು ಸಂಕದ ತಲೆಗೆ ಕಾವಲು ನಿಂತಿದ್ದನ್ನು ಕಂಡು ಅವರಲ್ಲಿ ಮೂವರು ಕೆಚ್ಚೆದೆಯ ವೀರರು ಬಿಚ್ಚುಗತ್ತಿಗಳನ್ನು ಝಳಪಿಸುತ್ತ ಈ ರೋಮನ್ ಯೋಧರೊಡನೆ ಕಾದಾಡಲು ಮುನ್ನುಗ್ಗಿದರು. ಅದರ ಹೊರೇಶಸ್, ಲಾರ್ಟಿಯಸ್ ಮತ್ತು ಹರ್ಮಿನಿಯಸ್ ಅವರನ್ನು ಕೊಂದು ಕಳೇಬರಗಳನ್ನು ತೈಬರ ನದಿಗೆ ಒಗೆದರು. ಅವರ ಬೆನ್ನಿಗೆ ನುಗ್ಗಿಬಂದ ಇನ್ನು ಮೂವರು ಟಸ್ಕನ್ ಬಂಟರದೂ ಅದೇ ಗತಿ ಆಯಿತು. ಈಗ ಮಾತ್ರ ಟಸ್ಕನ್ನರು ನಗುವನ್ನು ಮರೆತರು. ತಮ್ಮೊಳಗೆ ವಿಚಾರವಿನಿಮಯ ಮಾಡತೊಡಗಿದರು. ಕೊನೆಗೆ ತಮ್ಮ ದಂಡಿನಲ್ಲಿಯೇ ಅತಿ ಪ್ರಸಿದ್ಧ ಅತಿರಥಿ ಎನಿಸಿದ ಅಸ್ತುರ ಒಡೆಯನನ್ನು ಕರೆದರು.

ಅಸ್ತುರ ಮುಗುಳ್ನಗುತ್ತ ಮುಂದೆ ಬಂದನು. "ಅಸ್ತುರ ಮುಂದಾಳು ಆದರೆ ನೀವು ಒಂಬಾಲಿಸುವಿರಾ?" ಎಂದು ಟಸ್ಕನ್ ಧಾಂಡಿಗರನ್ನು ಕೇಳಿದನು.

ಆಮೇಲೆ ತನ್ನ ಹಿರಿದ ಹರಿಯ ಕತ್ತಿಯನ್ನು ಎತ್ತಿ ರುಳಪಿಸುತ್ತ ಅಸ್ತುರ್ ಹೋರೆಶಸ್‌ನ ಮೇಲೆ ನುಗ್ಗಿ ಅವನನ್ನು ತನ್ನ ಕಸುಷಲ್ಲ ಹಾಕಿ ಹೊಡೆದನು. ಆದರೆ ಅವನ ಕತ್ತಿಯು ಹೋರಶಸ್‌ನ  ತಲೆಯನ್ನು ತಪ್ಪಿ ಕಾಲಿಗೆ ಬಡಿಯಿತು. ರೋಮನ್ ಯೋಧನ ಕಾಲಿನಿಂದ ನೆತ್ತರು ಚಿಮ್ಮಿದ್ದನ್ನು ಕಂಡು ಟಸ್ಕನ್ನರು ಹಿರಿಹಿಗ್ಗಿನಿಂದ ಕೇಕೆ ಹಾಕಿದರು.

ತತ್‌ಕ್ಷಣ ಹರ್ಮಿನಿಯಸ್ ಗೆಳೆಯನ ನೆರವಿಗೆ ಬಂದನು. ಹೋರೆಶಸ್ ಒಂದು ಕ್ಷಣಕಾಲ ವಿರಮಿಸಿದನು. ಮರುಕ್ಷಣವೇ ಕಾಡುಬೆಕ್ಕಿನಂತೆ ಆತ ಅಸುರನ ಮೋರೆಗೇ ಜಿಗಿದನು ಮತ್ತು ತನ್ನ ಖಡ್ಗದಿಂದ ಅವರಿಗೆ ಬಲವಾದ ಏಟು ಕೊಟ್ಟನು. ಅತಿರಥಿ

ಅಸ್ತುರ ಒಡೆಯ ಸತ್ತುಬಿದ್ದನು. ಅವನ ಹೆಣವನ್ನು ಮಟ್ಟಿನಿಂತು ಹೊರೇಶಸ್ ಕೂಗಿದನು: “ನೋಡಿರಿ, ನಿಮ್ಮನ್ನು ನಾವು ಹೇಗೆ ಇದಿರುಗೊಳ್ಳುವೆವು! ಇನ್ನಾವ ಶೂರ ವೀರ ಟಸ್ಕನ್ ನಮ್ಮೊಡನೆ ಹೋರಾಡಲು ಮುಂದೆ ಬರುವನು?”

ಟಸ್ಕನ್‌ರಿಗೆ ಆಗ ತುಂಬ ಭಯ, ಲಜ್ಜೆ ಮತ್ತು ಸಿಟ್ಟು. ಅವರಲ್ಲಿಯ ಕೆಚ್ಚುಕಟ್ಟಿನ ಎದೆಗಾರನಿಗೂ ಮುಂದೆ ಬರಲಿಕ್ಕೆ ಧೈರ್ಯ ಸಾಲದು. ಅವರ ಪಾಳಯದಲ್ಲಿ ಸೆಕ್ಸಟಸ್ ಎಂಬ ಒಬ್ಬ ಶೂರ ಯೋಧನಿದ್ದನು. ಆತ ನಿಜವಾಗಿಯೂ ರೋಮನ್ನನೇ. ಹಿಂದೆ ರೋಮನ್ ಸೈನ್ಯದಿಂದ ಪರಾರಿಯಾಗಿ ಟಸ್ಕನ್ನರನ್ನು ಸೇರಿ ಸ್ವಜನ ದ್ರೋಹ ಬಗೆದವನು.

ಹೊರೇಶಸ್ ಸೆಕ್ಸಟಸ್‌ನನ್ನು ನೋಡಿದನು. ಅವನನ್ನೆ ಕೂಗಿ ಆಹ್ವಾನಿಸಿದನು. “ಸ್ವಾಗತ, ಸೆಕ್ಸಟಸ್ ಸ್ವಾಗತ! ನಿನ್ನ ಮನೆಗೇ ನಿನಗೆ ಸುಸ್ವಾಗತ! ಹೀಗೇಕೆ ದೂರ ಸರಿಯುವಿ? ಹಿಂಜರಿಯುವಿ? ಇದೋ ರೋಮ್ ನಗರಕ್ಕೆ ಒಯ್ಯುವ ದಾರಿ ಇಲ್ಲ ನಿನಗಾಗಿ ತೆರೆದಿದೆ!”

ಈ ಮೂದಲಿಕೆಗೆ ಸೆಕ್ಸಟಸ್ ಉರಿದೆದ್ದನು. ಆದಾಗ್ಯೂ ಮುನ್ನುಗ್ಗಿ ಈ ತ್ರಿಮೂರ್ತಿಗಳನ್ನು ಎದುರಿಸುವಷ್ಟೂ ಅವನಲ್ಲಿ ಸಾಹಸವಿದ್ದಿಲ್ಲ.

ಇದೆಲ್ಲ ನಡೆಯುತ್ತಿರುವಾಗ ಹಿಂದುಗಡೆಗೆ ಸೇತುವೆ ಕುಸಿಯುತ್ತಿತ್ತು ರೋಮನ್ ಭಟರು ಅದನ್ನು ಕಡಿದು ಚೆಲ್ಲುತ್ತಿದ್ದರು. ಅದೀಗ ಪೂರ್ತಿ ನೀರಿಗೆ ಉರುಳುವುದು. “ಹಿಂದಿರುಗು, ಲಾರ್ಟಿಯಸ್ ಹರ್ಮಿನಿಯಸ್ ಹಿಂದಿರುಗಿರಿ! ಲಗೂ ಬನ್ನಿ ತ್ವರೆ ಮಾಡಿ, ಸೇತುವೆ ಕುಸಿಯುತ್ತಿದೆ!”

ಲಾರ್ಟಿಯಸ್, ಹರ್ಮಿನಿಯಸ್ ಕುಸಿಯುವ ಸೇತುವಿನ ಮೇಲಿಂದ ಓಡಿ ಈಚೆಗೆ ಬಂದುಬಿಟ್ಟರು. ಅವರ ಕಾಲಕೆಳಗೇ ಹಲಗೆಗಳು ಮುರಿಯುತ್ತಿದ್ದವು. ಆದರೂ ಹೇಗೋ ಸುರಕ್ಷಿತ ಪಾರಾಗಿ ಬಂದರು. ಬಂದು ಹೊರಳಿ ನೋಡಿದರು- ಹೊರೇಶಸ್ ಆಚೆಯ ತುದಿಗೆ ಒಬ್ಬನೇ ನಿಂತಿದ್ದಾನೆ. ಅವರ ಎದೆಯಲ್ಲಿ ಕಿವುಚಿದಂತಾಯಿತು.

ನಿಲ್ಲಲಾಗಲಿಲ್ಲ. ತಿರುಗಿ ಅವನತ್ತ ಧಾವಿಸಲು ಕಾಲೆತ್ತಿದ್ದರು. ಆದರೆ ಅಷ್ಟರಲ್ಲಿ ಆ ದೊಡ್ಡ ಸೇತುವಿನ ನಡುವಿನ ಕಮಾನುಗಳು ಗುಡುಗಿನ ಸಪ್ಪಳ ಮಾಡುತ್ತ ನೀರಿಗೆ ಕುಸಿದವು. ಗುಡುಗಿನೊಂದಿಗೆ ಈಚೆಗೆ ನಿಂತ ರೋಮನ್ನರ ಹಿಗ್ಗಿನ ಹುಯಿಲಿನ ಅಬ್ಬರವು ಸೇರಿ ಮೊಳಗಿತು.

ಸೇತುವೆ ಹೊಳೆಯಲ್ಲಿ ತೇಲಿ ಹೋಯಿತು. ಅದರೊಂದಿಗೆ ಟಸ್ಕನ್ನರು ರೋಮ್‌ವನ್ನು ಆಕ್ರಮಿಸುವ ಭಯವು ತೇಲಿಹೋಯಿತು. ಆದರೆ ಧೀರ ವೀರ ಹೊರೇಶಸ್ ಒಬ್ಬನೆ ನಿಂತಿದ್ದ. ಹಿಂದೆ ಹೊಳೆ, ಮುಂದೆ ಹಗೆ ಆಗ ಸ್ವಜನದ್ರೋಹಿ ಸೆಕ್ಸಟಸ್ ಕೂಗಿದ. “ಕೊಲ್ಲಿರಿ ಅವನನ್ನು! ಕೊಲ್ಲಿರಿ ಅವನನ್ನು! ಇದೇ ತಕ್ಕ ವೇಳೆ!”

ಮತ್ತು ಲಾರ್ಸ್ ಪೊರ್ಸೇನಾ ಹೊರೇಶಸ್‌ನಿಗೆ ಅಪ್ಪಣೆ ಇತ್ತನು: “ಶರಣು ಬಾ! ಪ್ರಾಣ ಉಳಿಸಿಕೋ!”

ಹೊರೇಶಸ್ ಅವನತ್ತ ಕತ್ತೆತ್ತಿ ಕೂಡ ನೋಡಲಿಲ್ಲ. ತೈಬರ ಹೊಳೆಯತ್ತ ಹೊರಳಿ ಆ ನದಿಯನ್ನು ಪ್ರಾರ್ಥಿಸಿದನು-ಆಚೆಗೆ ರೋಮಕ್ಕೆ ತನ್ನನ್ನು ಕ್ಷೇಮದಿಂದ ಒಯ್ಯಲೆಂದು ಮತ್ತು ಮರುಕ್ಷಣಕ್ಕೆ ಹೊಳೆಯ ಆ ರಭಸದ ಆಳದ ಸೆಳವಿನಲ್ಲಿ ಧುಮ್ಮುಕ್ಕಿದನು.

ಯಾರೊಬ್ಬನೂ ಪಿಟ್ಟೆನ್ನಲಿಲ್ಲ. ಎಲ್ಲರೂ ಮೂಕವಿಸ್ಮಿತರಾಗಿ ಹೊಳೆಯಲ್ಲಿ ಕಣ್ಣಿಟ್ಟರು. ಅತ್ತ ರೋಮನ್ನರೂ ಭಯಚಕಿತರಾಗಿ ಉಸಿರುಗಟ್ಟಿಕೊಂಡು ನೋಡುತ್ತಿದ್ದರು. ಕೊನೆಗೊಮ್ಮೆ ಹೊರೇಶಸ್‌ನ ತಲೆ ನೀರ ಮೇಲೆ ಕಾಣಿಸಿತು ರೋಮನ್ನರು ಕೇಕೆ ಹಾಕಿದರು. ಟಸ್ಕನ್ನರಿಗೂ ತಡೆಯಲಾಗಲಿಲ್ಲ. ಪ್ರಪಂಚದ ಶೂರರೆಲ್ಲ ಒಂದೇ ಜಾತಿಯಲ್ಲವೇ? ಹಗೆಯೂ ಹಿಗ್ಗಿ ಹರ್ಷೋದ್ಗಾರ ತೆಗೆದನು. ಲಾರ್ಸ್ ಪೊರ್ಸೇನಾ ಅಂದನು “ದೇವನು ಈ ವೀರನನ್ನು ಕಾಪಾಡಲಿ, ಸುರಕ್ಷಿತವಾಗಿ ಮನೆಗಾಣಿಸಲಿ, ಇಂಥ ನಿರ್ಭಯ ತರುಣನನ್ನು ನಾನು ಎಂದೂ ನೋಡಿಲ್ಲ!”

ಹೊರೇಶಸ್ ಮುಳುಗಿ ಸಾಯಬೇಕೆಂದು ಬಯಸಿದವನು ಒಬ್ಬನೇ-ದ್ರೋಹಿ ಸೆಕ್ಸಟಸ್!

ಎಲ್ಲರೂ ನೋಡುತ್ತ ನಿಂತರು. ಹೊರೇಶಸ್ ಈಸಿ ಪಾರಾಗುವಂತೆ ತೋರಲಿಲ್ಲ. ಅವನು ಬಹಳ ಗಾಯಗೊಂಡಿದ್ದನು. ನೆತ್ತರು ಬಸಿದು ನಿತ್ರಾಣನಾಗಿದ್ದನು. ಆದರೂ ಈಸಬೇಕು, ಇದ್ದು ಜಯಿಸಬೇಕು ಎಂಬ ಜಿದ್ದು ಅವನ ಜೀವದ್ದು, ಕೊನೆಗೂ ಆಚೆಯ ತಡಿಯ ಒಣಮಳಲ ಮೇಲೆ ಹೊರೇಶಸ್ ನಿಂತನು. ರೋಮನ್ನರು ಅವನನ್ನು ಎತ್ತಿಹಿಡಿದು ಉತ್ಸವದಲ್ಲಿ ದುರ್ಗದ ನದೀ ದ್ವಾರದೊಳಗಿಂದ ನಗರದಲ್ಲಿ ಒಯ್ದರು. ರೋಮನ್ ಇತಿಹಾಸದ ಆಕಾಶಗಂಗೆಯಲ್ಲಿ ಹೊರೇಶಸ್ ಒಬ್ಬ ದೇದೀಪ್ಯಮಾನ ತಾರೆಯಾದನು.

# ೫. ಪಂಡಿತ ಫಾಸ್ಟ್

ಒಂದು ದಿನ ಸ್ವರ್ಗದಲ್ಲಿ ಈಶ್ವರನು ತನ್ನ ಮುಖ್ಯ ಮೂವರು ದೂತರಾದ ರಾಫೆಲ್, ಗಾಬ್ರಿಯಲ್ ಮತ್ತು ಮೈಕೆಲರೊಂದಿಗೆ ಸರಸಸಲ್ಲಾಪದಲ್ಲಿದ್ದನು. ಸಲ್ಲಾಪದ ವಿಷಯ ಅವನ ದಿವ್ಯಭವ್ಯವಾದ ವಿಶ್ವಸೃಷ್ಟಿಯ ಸ್ಥಿತಿಗತಿ, ಆಗ ಸೈತಾನನು, ಅವನಿಗೆ ಮೆಫಿಸ್ಟೊಫೈಲಿಸ್ ಎಂದೂ ಹೆಸರು, ಪ್ರವೇಶಿಸಿ ಸೃಷ್ಟಿಯಲ್ಲಿಯೇ ಶ್ರೇಷ್ಠವೆನಿಸಿದ ಮಾನವನ ಬಗೆಗೆ ಬಹಳ ದೂರಿಕೊಂಡನು. ಭೂಲೋಕದಲ್ಲಿ ಯಾವುದೂ ಯೋಗ್ಯವಿಲ್ಲ, ಸರಿ ಇಲ್ಲ ಎಂದು ಟೀಕಿಸಿದನು.

ಆದರೆ ಈಶ್ವರನು ಇದನ್ನು ಒಪ್ಪಲಿಲ್ಲ. ಅವನಿಗೆ ಗೊತ್ತು ಇನ್ನಾರೂ ಅಲ್ಲದಿದ್ದರು ಅವನ ಅನನ್ಯ ಸೇವಕನೊಬ್ಬ ಭೂಮಿಯಲ್ಲಿ ಇದ್ದನು. ಅವನೇ ಪಂಡಿತ ಫಾಸ್ಟ್, ಫಾಸ್ಟ್‌ನಲ್ಲಿ ಯಾವಾಗಲೂ ಉರಿಯುವ ಜಿಜ್ಞಾಸೆ; ವಿಶ್ವದ ತತ್ವವನ್ನು ಭೇದಿಸುವ ಜ್ಞಾನಪಿಪಾಸೆ. ಈಶ್ವರನಿಗೆ ಗೊತ್ತು, ಅನ್ನ-ಪೇಯಗಳ ಪರಿವೆ ಇಲ್ಲದೆ ಫಾಸ್ಟ್ ಜ್ಞಾನ ಸಾಧನೆಯಲ್ಲಿ ನಿರತನು. ಆ ಸಾತ್ವಿಕ ಸಜ್ಜನನನ್ನು ಬೆಳಕಿನತ್ತ ಒಯ್ಯುವ ಹೊಣೆ ಈಶ್ವರನೇ ಹೊತ್ತಿದ್ದನು. ಇದನ್ನು ಅವನು ಹೆಮ್ಮೆಯಿಂದಲೇ ಸೈತಾನನಿಗೆ ಹೇಳಿದನು.

ಕೇಳಿ ಸೈತಾನ ನಕ್ಕನು. ಅದೇ ಫಾಸ್ಟನನ್ನು ತಾನು ಅಂಧಕಾರದತ್ತ, ಅದೂ ಹಗುರಾಗಿ ಸಲಿಲವಾಗಿ ಒಯ್ಯುವನೆಂದು ಸೈತಾನ ಈಶ್ವರನಿಗೆ ಆಹ್ವಾನವಿತ್ತನು! ಮಾನವನು ಚೇತನದಿಂದ ಒಳ್ಳೆಯವನೆಂದು ಈಶ್ವರನ ಅಭಿಪ್ರಾಯ. ಆದರೆ ಎಂಥ ಮಾನವನನ್ನೂ ಮಣ್ಣು ಮುಕ್ಕಿಸುತ್ತೇನೆಂದು ಸೈತಾನನ ಪ್ರತಿಜ್ಞೆ! ಈ ಸತ್ವ ಪರೀಕ್ಷೆಯಲ್ಲಿ ಫಾಸ್ಟನ ದುರಂತದ ಬೀಜಾರೋಪಣವಾಯಿತು.

ಫಾಸ್ಟ್‌ನು ಮಹಾ ಪಂಡಿತ. ೧೦ ವರ್ಷ ಕಾಲ ತಂತ್ರಶಾಸ್ತ್ರ, ಧರ್ಮಶಾಸ್ತ್ರ, ನ್ಯಾಯ, ವೈದ್ಯಕ ಎಲ್ಲ ವಿದ್ಯೆಗಳನ್ನು ವ್ಯಾಸಂಗಿಸಿ ಪಾರಂಗತನಾದವ. ಆದರೂ ಅವನಲ್ಲಿ ಆಳವಾದ ಅಸ್ವಸ್ಥತೆಯೊಂದಿತ್ತು. ಇಷ್ಟೆಲ್ಲ ವಿದ್ಯೆ ಗಳಿಸಿದರೂ ನಾನು ಜ್ಞಾನಿ ಆಗಲಿಲ್ಲ. ಶಿಷ್ಯವೃಂದಕ್ಕೆ ಕಲಿಸಿದ್ದೂ ಅಷ್ಟೆ-ಲೋಕದಲ್ಲಿ ಬದುಕಿನಲ್ಲಿ ನಿಜವಾಗಿಯೂ ಏನನ್ನೂ ಕಲಿಸುವುದು, ಅದೇಕೆ, ಅರಿತುಕೊಳ್ಳುವುದೂ ಸಾಧ್ಯವಿಲ್ಲ! ಆದ್ದರಿಂದ ಫಾಸ್ಟನಿಗೆ ತನ್ನ ಪಾಂಡಿತ್ಯದಲ್ಲಿ ಹಿಗ್ಗಿಲ್ಲ. ಹೆಮ್ಮೆಯಿಲ್ಲ, ಶ್ರದ್ಧೆಯಿಲ್ಲ, ತಾನೇ ನಂಬದಿದ್ದವನು ಪರರಿಗೇನು ಮಣ್ಣು ಬುದ್ಧಿ ಕಲಿಸುವುದು?

ಫಾಸ್ಟ್ ತನ್ನ ಅಧ್ಯಯನದ ಗೂಡಿನಿಂದ ಹೊರಬಿದ್ದು ಅಲೆಯಲು ಹೋದನೆಂದರೆ ಹಳ್ಳಿಯ ಜನ ಅವನನ್ನು ಉದ್ಧಾರಕನೆಂಬಂತೆ ಓಲೈಸುತ್ತಿದ್ದರು. ಹಿಂದೊಮ್ಮೆ ಒಂದು ಮಾರಿ ಜ್ವರದ ಪಿಡುಗು ಆ ಊರಿಗೆ ಬಂದಿತ್ತು. ಜನ ಪಟ ಪಟ ಸಾಯುತ್ತಿದ್ದರು. ಆಗ ಫಾಸ್ಟನ ತಂದೆ ಒಬ್ಬ ಮುದ್ದುಗಾರ ಮಹಾ ಬುದ್ಧಿವಂತ ಹೊಸದೊಂದು ಮದ್ದು ತಯಾರಿಸಿ ಮನೆಮನೆಗೆ ಹೋಗಿ ರೋಗಿಗಳಿಗೆ ಕೊಟ್ಟು ಉಪಚರಿಸುತ್ತಿದ್ದ. ಆಗ ಮಗ ಫಾಸ್ಟನೂ ಅವನೊಂದಿಗೆ ಹೋಗಿ ಸಾವಿನ ಭಯವಿಲ್ಲದೆ ಹಳ್ಳಿಗರ ಆರೈಕೆಯಲ್ಲಿ ತೊಡಗಿದ್ದ. ಆ ಉಪಕಾರವನ್ನು ಹಳ್ಳಿಗರು ಮರೆತಿರಲಿಲ್ಲ.

ಆದರೆ ಈ ಕೃತಜ್ಞತೆ ಫಾಸ್ಟನಿಗೆ ರೋಸಿಹೋಗಿತ್ತು. ಈ ಹಳ್ಳಿಗರು ಸರಳವಲ್ಲ, ಶುದ್ಧ ಹುಂಬರು, ಆ ಉಪಕಾರವೆಲ್ಲ ದೊಡ್ಡ ಮೋಸವಾಗಿತ್ತೆಂದು ಆತನ ಹೇಳಿಕೆ, ಅವನ ತಂದೆ ಏನೋ ವಿಚಿತ್ರ ರಾಸಾಯನ ತಯಾರಿಸಿ ಅದನ್ನು ಆ ಪಿಡುಗಿನ ರೋಗಿಗಳ ಮೇಲೆ ಪ್ರಯೋಗಿಸಿದ್ದನಾಗಲೀ ಪಿಡುಗಿಗಿಂತ ಆ ಮದ್ದಿನಿಂದಲೇ ಸತ್ತವರು ಹೆಚ್ಚು, ಆದರೆ ಜಾತ್ರೆ ಮರುಳು ಜನ! ಸತ್ತದ್ದೆಲ್ಲ ಪಿಡುಗಿನಿಂದ, ಬದುಕಿದ್ದು ಮದ್ದಿನಿಂದ ಎರದು ಭಾವಿಸಿ ಈಗ ತನ್ನನ್ನೂ ತನ್ನ ತಂದೆಯನ್ನೂ ಕೊಂಡಾಡುತ್ತಿದ್ದಾರೆಂದು ಆತ ಆತ್ಮೀಯರಿಗೆ ಹೇಳುತ್ತಿದ್ದ.

ಆತನಿಗೆ-ಪಂಡಿತ ಫಾಸ್ಟನಿಗೆ- ಈ ಶಾಸ್ತ್ರ ಪಾಂಡಿತ್ಯ ಈ ಜನಾದರ ಒಂದೂ ಬೇಕಾಗಿರಲಿಲ್ಲ. ವಿಶ್ವದ ಒಗಟು ಭೇದಿಸಬೇಕಾಗಿತ್ತು. ಅದಕ್ಕಾಗಿ ಸಿದ್ಧಿ ಪಡೆಯಲೆಂದು

ಮಂತ್ರವಿದ್ಯೆ, ಇಂದ್ರಜಾಲಗಳ ಹವ್ಯಾಸಕ್ಕೆ ಬಿದ್ದಿದ್ದನು. ಒಂದು ದಿನ ತನ್ನ ಅಭ್ಯಾಸದ ಕೋಣೆಯಲ್ಲಿ ಫಾಸ್ಟ್ ಕುಳಿತಿದ್ದನು-ವಿಶ್ವ ಚಕ್ರದ ಪಟದ ಪುಟಗಳನ್ನು ತಿರುವಿಹಾಕುತ್ತ. ಆಗ ಅವನ ಕಣ್ಣು ಭೂಚೈತನ್ಯದ ಮುದ್ರೆಯಲ್ಲಿ ನಟ್ಟಿತು. ಅದನ್ನು ಕಂಡೊಡನೆ ಅವನಲ್ಲಿ ವಿಚಿತ್ರ ಉತ್ಸಾಹ ಉಕ್ಕಿತು. ಕೂಡಲೇ ಭೂದೇವತೆಯ ಮಂತ್ರವನ್ನು ಜಪಿಸಿ ಆ ಶಕ್ತಿಯನ್ನು ಅಲ್ಲಿಯೇ ಸಾಕ್ಷಾತ್ಕರಿಸಿಕೊಂಡನು, "ನಾನು ನಿನಗೆ ಸರಿಪಾಟಿ" ಎಂದು ಕೂಗಿದನು. ಅವನ ಬಾಳು ಇದೇ ರೀತಿ ವಿಶ್ವದ ಶಕ್ತಿಗಳ ಮೇಲೆ ಪ್ರಭುತ್ವ ಪಡೆಯುವುದರಲ್ಲಿ ವ್ಯತೀತವಾಗುತ್ತಿತ್ತು ಅಸಂತುಷ್ಟಿಯಿಂದ ರಾತ್ರಿ ತೀಕ್ಷ್ಣವಾದ ಪೇಯಗಳನ್ನು ಕುಡಿದು ಆತ ಮಲಗುತ್ತಿದ್ದನು.

ಅಂದು ಈಸ್ಟರ್ ಹಬ್ಬ, ನಸುಕಿನಲ್ಲೇ ದೇವಾಲಯದ ಗಂಟೆಗಳ ನಾದ ಹೊಮ್ಮಿತು. ನಾದದೊಂದಿಗೆ ದೇವದೂತರ, ಮಠದ ಶಿಷ್ಯರ, ಹೆಂಗಸರ ಮೇಳಗೀತಗಳ ಮಧುರಾಪಗಳು ಮೊಳಗಿ ಬಂದವು. ಆ ಮಂಗಲ ಧ್ವನಿಯಿಂದ ಪಂಡಿತ ಫಾಸ್ಟ್ ಕಣ್ಣು ತೆರೆದನು. ಅದನ್ನು ಕೇಳುತ್ತಿದ್ದಂತೆ ಅಶ್ರದ್ಧೆಯ ಒರಟು ಫಾಸ್ಟ್‌ನ ಕಣ್ಣಿನಿಂದಲೂ ಧಾರಾಕಾರವಾಗಿ ನೀರು ಹರಿಯಿತು. ಆದರೆ ಅದು ಕ್ಷಣಮಾತ್ರ,

ಅಂದು ಸಂಜೆ ಫಾಸ್ಟ್ ಊರ ಹೊರಗೆ ಒಂದು ಬಂಡೆಯ ಮೇಲೆ ಕೂತಿದ್ದನು. ಆಗ ಒಂದು ನಾಯಿ ಆ ಬಂಡೆಯ ಕಡೆಗೇ ಬರಹತ್ತಿತು. ಅದರ ನಡಿಗೆ ವಿಚಿತ್ರ, ಬಂಡೆಯನ್ನು ಸುತ್ತುಹಾಕುತ್ತ ಸಮೀಪಿಸುತ್ತಿತು. ಅದು ಬರುತ್ತಿದ್ದಂತೆ ಅದರ ಬೆನ್ನಿಗೆ ಬೆಂಕಿಯ ಗೆರೆ ಮೂಡಿದಂತೆ ಫಾಸ್ಟನಿಗೆ ಭಾಸವಾಯಿತು. "ಇದೊಂದು ವಿಚಿತ್ರ ನಾಯಿ. ಏನೋ ಇಂದ್ರಜಾಲವಿರಬೇಕು" ಎಂದನು.

ನಾಯಿ ಹತ್ತಿರ ಬಂದು ಫಾಸ್ಟನ ಮೈ ಮೇಲೆ ಹಾರಿ ಅಂಗಾತ ಬಿದ್ದು ದೇಶಾವರಿ ವೃತ್ತಿಯಿಂದ ಹೊರಳಾಡಿತು. ಪಂಡಿತ ಫಾಸ್ಟ್ ಆ ನಾಯಿಯನ್ನು ಮನೆಗೆ ತಂದನು. ಆ ನಾಯಿಯೊಂದಿಗೆ ಫಾಸ್ಟನ ಬಾಳಿನಲ್ಲಿ ಸೈತಾನನ ಕಲಿ ಪ್ರವೇಶವಾಯಿತು.

## ೩

ಪಂಡಿತ ಫಾಸ್ಟನು ತನ್ನ ಕೋಣೆಯಲ್ಲಿ ಬೈಬಲ್ಲಿನ “ಹೊಸ ಒಡಂಬಡಿಕೆ”ಯನ್ನು ಜರ್ಮನ್ ಭಾಷೆಯಲ್ಲಿ ಅನುವಾದಿಸುತ್ತ ಕುಳಿತಿದ್ದ. “ಆದಿಯಲ್ಲಿ ವಾಕ್ ಇತ್ತು” ಎಂಬ ವಾಕ್ಯವನ್ನು ಭಾಷಾಂತರಿಸಲು ಆಳವಾದ ಆಲೋಚನೆಗೆ ಬಿದ್ದು ’ವಾಕ್’ದ ಬದಲಿಗೆ ’ವಿಚಾರ’ವನ್ನೋ ’ಶಕ್ತಿ’ಯನ್ನೋ ಹಾಕಲು ಬಯಸಿ ಕೊನೆಗೆ ಫಾಸ್ಟ್‌ನು “ಆದಿಯಲ್ಲಿ ಕೃತಿ ಇತ್ತು” ಎಂದು ಬರೆದನು. ಆ ಬರೆಹ ನಡೆದಾಗ ಉದ್ದಕ್ಕೂ ಆ ಕಪ್ಪು ನಾಯಿ ಬೊಗಳುತ್ತಲೇ ಇತ್ತು. ಅದನ್ನು ನೋಡುತ್ತಿದ್ದಂತೆ ಆ ಪ್ರಾಣಿಯು ಭೂತಾಕಾರವಾಗಿ ಬೆಳೆಯಿತು. ಅದನ್ನು ಕಂಡು ಫಾಸ್ಟ್ ಬೆರಗಾದನು. ಕೂಡಲೇ ಒಂದು ಮಂತ್ರವನ್ನು ಜಪಿಸಿದನು. ನಾಯಿಯು ಮೂಲೆಯಲ್ಲಿ ಅಗ್ಗಿಷ್ಟಿಗೆಯ ಹಿಂದೆ ಓಡಿತು. ಆಗ ಅಲ್ಲಿಂದ ಕೋಣೆ ತುಂಬ ಮಂಜು ಮೋಡವಾಗಿ ಕವಿಯಿತು. ಆ ಮೋಡ ಹಿಂಜಿ ಕರಗಿದಾಗ ಮೂಲೆಯಿಂದ ಒಬ್ಬ ಪ್ರವಾಸೀ ಪಂಡಿತನ ವೇಷದಲ್ಲಿ ಸೈತಾನನೇ ಫಾಸ್ಟ್‌ನ ಎದುರಿಗೆ ಬಂದು ನಿಂತನು.

“ನೀನು ಯಾರು?” ಫಾಸ್ಟ್ ಕೇಳಿದ. “ನಾನು ನಿರಾಕರಣೆಯ ಚೇತನ. ನಾಸ್ತಿಕ್ಯದ ಸತ್ವ” ಸೈತಾನ ಹೇಳಿದನು. “ಪ್ರಪಂಚದಲ್ಲಿಯ ಕೇಡುಗಳೆಲ್ಲವೂ ನಮ್ಮವೇ ಘಟಕಗಳು.” ಹೀಗೆ ಮಾತಾಡುತ್ತಿರುವಾಗ ಸೈತಾನನ ದೃಷ್ಟಿ ಕಿಟಕಿಯ ಹೆಡಿಗೆಯತ್ತ ಹಾಯಿತು. ಅಲ್ಲಿ ಪಂಚಕೋನ ತಾರೆಯಂತಿದ್ದ ಮಾಂತ್ರಿಕ ರಕ್ಷಾಚಕ್ರ ಒಂದು ಬಿದ್ದಿತ್ತು. ಸೈತಾನ ಬಂದ ಹಾದಿಯಿಂದ ಹಿಂದಿರುಗಿ ಹೋದವನಲ್ಲ. ಬಾಗಿಲಿನಿಂದ ಬಂದವನು ಕಿಟಕಿಯಿಂದ ಹೊರಬೀಳಬೇಕು. ಆದರೆ ಅಲ್ಲಿ ಈ ರಕ್ಷಾಚಕ್ರ! ಆ ದಾರಿ ಕಟ್ಟು.

ಆ ಚಕ್ರವನ್ನು ಅಲ್ಲಿಂದ ತೆಗೆಯಲು ಸೈತಾನ ಫಾಸ್ಟನಿಗೆ ಕೇಳಿಕೊಂಡನು. ಫಾಸ್ಟ್ ಒಪ್ಪಲಿಲ್ಲ. ಆಗಲೇ ಸೈತಾನನೊಂದಿಗೆ ಒಂದು ಒಪ್ಪಂದ ಮಾಡಿಕೊಳ್ಳಲು ಅವನ

ಹಂಚಿಕೆ. ಆದರೆ ಸೈತಾನನಿಗೆ ಆಗ ಪಾರಾಗಿ ಹೋಗುವ ತವಕ ಆ ಚಕ್ರವನ್ನು ಕಂಡು ಆತ ಅಷ್ಟು ಗಾಬರಿಯಾಗಿದ್ದನು. ಆಗ ಆತ ಫಾಸ್ಟ್‌ನ ಮೇಲೆ ಮೋಹಜಾಲ ಬೀಸಿದನು. ಅವನ ಗಣಂಗಳು ಬಂದು ಹಾಡಿದವು. ಮಂತ್ರಮುಗ್ಧ ಫಾಸ್ಟ್ ಕೂತಲ್ಲಿಯೇ ಕಣ್ಣು ಮುಚ್ಚಿದನು.

ಆ ರಕ್ಷಾಚಕ್ರದ ಶಕ್ತಿ ಅಡಗಿಸಲು ಸೈತಾನನಿಗೆ ಹೆಗ್ಗಣದ ಹಲ್ಲೊಂದು ಬೇಕು. ಅದಕ್ಕಾಗಿ ಸೈತಾನ ಕೋಣೆಯ ಹೊಸ್ತಿಲ ಮೇಲೆ ಎಣ್ಣೆಯ ಹನಿಯನ್ನೊಂದು ತೊಟಕಿಸಿದನು. ಅದರ ನಾತಕ್ಕೆ ಹೆಗ್ಗಣ ಓಡಿಬಂತು. ಅದರ ಹಲ್ಲು ಕಿತ್ತುಕೊಂಡು ಅದನ್ನು ಮಂತ್ರಿಸಿ ಪ್ರಯೋಗಿಸಿ ಸೈತಾನನು ಅಲ್ಲಿಂದ ಪಾರಾದನು.

ಆದರೆ ಫಾಸ್ಟ್ ಸೈತಾನನ ಕೈಯಿಂದ ಪಾರಾಗಲಿಲ್ಲ. ಸೈತಾನ ಮತ್ತೆ ಫಾಸ್ಟ್‌ನಲ್ಲಿಗೆ ಬಂದನು. ಆ ಸಲ ಅವನದು ಅಶ್ವಾರೋಹಿ ಸರದಾರನ ವೇಷ! ಅಚ್ಚಗೆಂಪು ಜರತಾರಿ ಅಂಗಿ ಕಿನ್‌ಕಾನ ಟೊಪ್ಪಿಗೆ, ಅದರಲ್ಲಿ ಅಡ್ಡ ಸಿಕ್ಕಿಸಿದ ಉದ್ದಗರಿ, ಟೊಂಕಕ್ಕೆ ಇಳಿಬಿದ್ದ ನಿಲುಗತ್ತಿ.

"ನನ್ನಂತೆಯೇ ರಾವುತನಾಗಿ ಸಂಗಡ ಬಾ, ಬಾಳು ಏನೆಂದು ಒಮ್ಮೆ ತಿಳಿದು ನೋಡು!" ಆತ ಫಾಸ್ಟ್‌ನನ್ನು ಆಹ್ವಾನಿಸಿದನು. ಫಾಸ್ಟನಿಗೆ ಬಾಳಿನದೇ ಬೇಸರ, ಹೇಸಿಕೆ, ಆದರೆ ಆತ ಇನ್ನೂ ಬಯಕೆ ಉಳಿಯುವಷ್ಟು ಎಳೆಯ, ಅದನ್ನು ಪೂರೈಸಿಕೊಳ್ಳಲಾರದಷ್ಟು ಮುದುಕ! ಫಾಸ್ಟನಿಗೆ ಉಳಿದದ್ದು ಒಂದೇ ಇಚ್ಛೆ -ಸಾವಿನದು ಆದರೂ ಅದೆಂಥ ಸಾವು? ಮನಮೆಚ್ಚಿದ ಒಬ್ಬ ಮದಿರಾಕ್ಷಿಯ ತೋಳ ತೆಕ್ಕೆಯಲ್ಲಿ ಹಾಯಾಗಿ ಬರಬೇಕಾದ ಸಾವು!

ಫಾಸ್ಟ್‌ನನ್ನು ಸುಖಿಯಾಗಿ ಮಾಡಲು ಸೈತಾನ ಪಣತೊಟ್ಟನು. ಅದಕ್ಕಾಗಿ ಆತ ಆ ಪಂಡಿತನ ದಾಸನಾಗಲು ಸಂಗಾತಿಯಾಗಲು ಸಿದ್ಧ. ಆದರೆ ತಾನು ಸಲ್ಲಿಸುವ ಸೇವೆಗಾಗಿ ಅವನು ಇಟ್ಟ ಶರ್ತು ಒಂದೇ- "ಅಲ್ಲಿ" ಪರಲೋಕದಲ್ಲಿ ಫಾಸ್ಟ್ ಸೈತಾನನಿಗೆ ಹೀಗೆಯೇ ಆಳಾಗಬೇಕು- "ಇಲ್ಲಿ" ಇಹಲೋಕದಲ್ಲಿ ತಾನು ಅವನಿಗೆ ಆದಂತೆ!

ಪರಲೋಕವನ್ನೇ ನಂಬದ ಪಂಡಿತ ಫಾಸ್ಟ್ ಈ ಶರ್ತು ಒಪ್ಪದಿರುವನೇ? ಅಲ್ಲಿ ಸಲ್ಲಲಿ ಬಿಡಲಿ, ಇಲ್ಲ ಸಲ್ಲುವನಲ್ಲ ಸೈತಾನ? ಸಂಧಾನದ ಕರಾರು ಆಯಿತು. ಬಾಳಿನ ಅಪೂರ್ವ ಸುಖಭೋಗಗಳನ್ನು ಉಣಿಸಲು ಫಾಸ್ಟ್‌ನನ್ನು ಸೈತಾನ ಸಂಗಡ ಕರೆದುಕೊಂಡು ಹೊರಟನು.

ಆದರೆ ವಿಚಾರಿಗೆ ಸೈತಾನನು ಏನು ಅನುಭವ ಕೊಡಿಸಬಲ್ಲ? ಅನುಭವಕ್ಕೆ, ಮಾನವ ಪ್ರವೃತ್ತಿಗೆಗೆ ತೃಪ್ತಿಯುಂಟೆ? ಫಾಸ್ಟ್ ಸದಾ ಅಸ್ವಸ್ಥ ಚಂಚಲ, ಉದ್ರಿಕ್ತ, ಶಾಂತಿಯ ದಿನವೇ ತನಗೆ ಅಂತ್ಯದಿನವೆಂದು ಆತ ಬಗೆದಿದ್ದ ಸೈತಾನ ಇದನ್ನು ಒಪ್ಪಲಿಲ್ಲ. ಈಗ ಫಾಸ್ಟ್ ಒಂದು ಒಡ್ಡ ಕಟ್ಟಿದನು. ಭಂಗುರವಾದ ಕ್ಷಣಕ್ಕೆ ನಶ್ವರವಾದ ಸುಖದ ಕಣಕ್ಕೆ "ಓ, ತುಸು ತಡೆ, ನೀನು ಎಷ್ಟು ಸೊಗಸು!" ಎಂದು ಯಾವ ಗಳಿಗೆಗೆ ಫಾಸ್ಟ್ ತೃಪ್ತಿಗಾಗಿ ತಡೆಯುವನೋ ಆ ಗಳಿಗೆಗೇ ಅವನಿಗೆ ಮರಣ. ಆಗಲೇ ಆತ ಸೈತಾನನ ಗುಲಾಮ!.. ಇದೇ ಆ ಒಡ್ಡ (ಪಣ).

ಆದರೆ ಈ ಸೊಗಸಿನ ಗಳಿಗೆಯ ಗಳಿಕೆಯಾದರೂ ಯಾವಾಗ? ಮಾನವನು ಉದಾತ್ತತೆಯೊಂದಿಗೆ ಚಾತುರ್ಯವನ್ನು ಪಳಗಿಸಿಕೊಂಡಾಗ! ಆಗ ಪ್ರೀತಿಯಲ್ಲಿ ವಿವೇಕದೊಂದಿಗೆ ತಾರುಣ್ಯದ ಜ್ವಾಲೆಯನ್ನು ಕಾಪಾಡಿಕೊಳ್ಳಬಹುದು. ಇದಕ್ಕಾಗಿ ಫಾಸ್ಟ್‌ನನ್ನು ಸೈತಾನ ಬಹಿರ್ಮುಖನನ್ನಾಗಿ ಮಾಡಿದನು. ಒಣ ವೇದಾಂತಕ್ಕಿಂತ ಹಸಿ ಸೊಗಸುಗಾರಿಕೆಯೇ ಶ್ರೇಷ್ಠವೆಂದನು. "ಎಲ್ಲ ಸಿದ್ಧಾಂತವಾದಗಳೂ ಕೆರೆ–ನೆರೆ–ಧೂಸರು, ಆದರೆ ಬಾಳ ಹೆಮ್ಮರವೋ? ಸದಾ ಹಚ್ಚ ಹಸಿರು!" (ಕ್ರಾಂತಿಕಾರ ಲೆನಿನ್‌ನಿಗೆ ಈ ವಾಕ್ಯ ಬಹಳ ಪ್ರಿಯವಿತ್ತು!)

ಮಂದಿಗೆ ಅಳುಕುವ ಫಾಸ್ಟನಿಗೆ ಸೈತಾನ ಆತ್ಮವಿಶ್ವಾಸ ಕಲಿಸಿದನು. ತಾನು ಹೊದ್ದುಕೊಳ್ಳುವ ಬಟ್ಟೆಯನ್ನು ಹಾಸಿ ಅದರ ಮೇಲೆ ಫಾಸ್ಟನೊಂದಿಗೆ ಕೂತು ಸೈತಾನ ಸಂಚರಿಸಹತ್ತಿದನು.

೪

ಇಂಥ ಸ್ವಚ್ಛಂದ ಸಂಚಾರದಲ್ಲಿ ಸೈತಾನನು ಹೋದಲ್ಲಿ ಒಂದು ಪವಾಡವನ್ನು ಕಾಣಿಸುತ್ತಿದ್ದನು. ಹೀಗೆಯೇ ಲಿಝಿಗ್ ನಗರದಲ್ಲಿ ಒಂದು ಮದ್ಯದಂಗಡಿಯಲ್ಲಿ ಇಬ್ಬರೂ ಹೊಕ್ಕರು. ಅಲ್ಲಿಯ ಜನರಿಗೆ ಯಥೇಚ್ಛ ಮದ್ಯ ಕುಡಿಸಿದರು. ಅದೂ ಹೇಗೆ? ಅಲ್ಲಿಯ ಮೇಜಿನ ಅಂಚಿಗೆ ತೂತುಗಳನ್ನು ಕೊರೆದು ಅವುಗಳಲ್ಲಿ ಯಾರಿಗೆ ಯಾವುದು ಬೇಕೋ ಅವರು ಆಯಾ ತೂತಿನಿಂದ ಚಿಮ್ಮುವ ಇಷ್ಟವಿದ್ದ ಸರಾಯಿ ಕುಡಿಯುವಂತೆ ಸೈತಾನ ಮಾಡಿದನು. ಹಾಗೆ ಕುಡಿಯುವ ಸಂಭ್ರಮದಲ್ಲಿ ತುಸು ಮದ್ಯ ಚೆಲ್ಲಿತು. ಅದು ಬಿದ್ದಲ್ಲಿ ಬೆಂಕಿ ಭುಗಿಲಿದ್ದಿತು. ಕುಡುಕರೆಲ್ಲ ಕಂಗೆಟ್ಟರು. ಇವನಾರೊ ಮಾಂತ್ರಿಕನೆಂದು ಹೆದರಿ ಅವನನ್ನು ತಳ್ಳಲು ಹುಯಿಲೆಬ್ಬಿಸಿದರು. ಆಗ ಆತ ಇನ್ನೊಂದು ಪವಾಡ ಮಾಡಿದನು. ಅವರಿಗೆಲ್ಲ ನಿಂತಲ್ಲಿಯೇ ದ್ರಾಕ್ಷೆಯ ರಮ್ಯ ತೋಟಗಳು ತೋರುವಂತೆ ಮಾಡಿದನು. ಆ ತೋಟದ ದ್ರಾಕ್ಷೆಯ ಗೊಂಚಲೆಂದು ಒಬ್ಬನು ಹತ್ತಿರದ ಹೆಂಗಳೆಯ ಮೂಗನ್ನೆ ಜಗ್ಗಹತ್ತಿದನು. ಆಗ ಕೂಗು ಬೈದಾಟಗಳ ಕೋಲಾಹಲವೇ ಎದ್ದಿತು. ಆ ಗದ್ದಲದಲ್ಲಿ ಸೈತಾನ ಫಾಸ್ಟ್‌ನೊಂದಿಗೆ ಕಾಲ್ದೆಗೆದನು!

ಅಲ್ಲಿಂದ ಸೈತಾನನು ಫಾಸ್ಟ್‌ನನ್ನು ಒಯ್ದದ್ದು ಒಬ್ಬ ಜಕ್ಕಿಣಿಯ (ಮುದಿ ಮಂತ್ರಗಾರ್ತಿಯ) ಅಡುಗೆಯ ಮನೆಯಲ್ಲಿ. ಜಕ್ಕಿಣಿ ಆಗ ಅಲ್ಲಿ ಇದ್ದಿಲ್ಲ. ಹೊಗೆಗಿಂಡಿಯೊಳಗಿಂದ ಹೊರಗೆ ಹೊರಟುಹೋಗಿದ್ದಳು. ಆದರೆ ಒಂದು ಗಂಡು ಕೋತಿ ಒಲೆಯ ಮೇಲಿನ ಕುದಿಯುವ ಕಡಾಯಿ ನೋಡಿಕೊಳ್ಳುತ್ತಿತ್ತು. ಹೆಣ್ಣು ಕೋತಿ ಮರಿಗಳೊಂದಿಗೆ ಅಲ್ಲಿಯೇ ಚಳಿಕಾಸುತ್ತ ಕೂತಿತ್ತು. ಅಂಥಲ್ಲಿ ಸೈತಾನನು ಫಾಸ್ಟನಿಗೆ ಹೊಸ ತಾರುಣ್ಯ ತಂದುಕೊಡಲಿಕ್ಕೆ ಕರೆತಂದಿದ್ದನು. ೮೦ ವರ್ಷದ ಆ ಮಂದಿ ಪಂಡಿತನ ಆಯುಷ್ಯದಲ್ಲಿ ೩೦ ವರ್ಷವಾದರೂ ಕಡಿಮೆ ಮಾಡಿದರೆ ಆತ ಹಳೆಯ ಹರೆಯ ತಿರುಗಿ ಪಡೆದಂತೆ!

ಜಕ್ಕಿಣಿಗಾಗಿ ಕಾಯುತ್ತಿರುವಾಗ ಫಾಸ್ಟ್ ಅಲ್ಲಿದ್ದ ಒಂದು ಕನ್ನಡಿಯಲ್ಲಿ ಇಣಿಕಿದನು. ಆಗ ಅಲ್ಲಿ ಅಪ್ರತಿಮ ಸುಂದರಿಯೋರ್ವಳ ಮುಖವನ್ನು ಕಂಡು ಮೋಹಿತನಾದನು. ಅವನಿಗೆ ಆ ಚೆಲುವೆಯ ಗೀಳೇ ಹಿಡಿಯಿತು. ಅವಳನ್ನು ತಂದುಕೊಡಲು ಆತ ಸೈತಾನನನ್ನು ಕೇಳಿದನು. ಸೈತಾನನು ಆಶ್ವಾಸವನ್ನಿತ್ತನು. ಅದೇ ಸಮಯ, ಸೈತಾನ ಅಲ್ಲಿಯೇ ಕಾಲು ಮಂಚದ ಮೇಲೆ ಗರಿಗಳ ಕುಂಚವನ್ನು ಕೈಯಲ್ಲಿ ರಾಜದಂಡದಂತೆ ಹಿಡಿದುಕೊಂಡು ಕೂತಾಗ ಆ ಕೋತಿಗಳು ಒಂದು ಕಿರೀಟವನ್ನು ತಂದು ಅವನ ತಲೆಗೇರಿಸಿದವು. ಕಿರೀಟವು ಕೆಳಗೆ ಬಿದ್ದು ಎರಡು ಹೋಳಾಯಿತು. ಆಗ ಅದರ ಸುತ್ತು ಆ ಕೋತಿಗಳು ಕುಣಿಯಹತ್ತಿದವು.

ಇದರಿಂದ ಕಡಾಯಿಯತ್ತ ದುರ್ಲಕ್ಷ್ಯವಾಯಿತು, ಅದರಲ್ಲಿ ಕುದಿಯುವ ರಸಾಯನ ಉಕ್ಕಿ ಮರಳಿತು. ಅದು ಚೆಲ್ಲಿ ಒಲೆಯ ಸುತ್ತಲೂ ಬೆಂಕಿ ಹೊತ್ತಿ ಧಗಧಗಿಸಿತು. ಅದರ ಜ್ವಾಲೆಗಳೊಳಗಿಂದ ಆರ್ಭಟಿಸುತ್ತ ಜಕ್ಕಿಣಿ ಆ ಹೊಗೆ ಕಿಂಡಿಯೊಳಗಿಂದಲೇ ಇಳಿದು ಬಂದು ಅವರನ್ನೆಲ್ಲ ಗದರಿಸಿದಳು. ಆದರೆ ಮರುಕ್ಷಣಕ್ಕೆ ತನ್ನ ಒಡೆಯನಾದ ಸೈತಾನನನ್ನು ಕಂಡು ಶಾಂತಳಾಗಿ ಹೆದರಿ ಅವನ ಕ್ಷಮೆ ಕೋರಿದಳು.

ಆಮೇಲೆ ಅವಳಿಂದ ಏನೋ ಮಂತ್ರವಿಧಿ ಮಾಡಿಸಿ ಆತ ಫಾಸ್ಟನಿಗೆ ಅವಳ ತೀರ್ಥವನ್ನು ಕುಡಿಸಿದನು. ಆಮೇಲೆ ಕನ್ನಡಿಯಲ್ಲಿ ಮತ್ತೊಮ್ಮೆ ಆ ಚೆಲುವೆಯ ಮೋರೆಯನ್ನು ನೋಡಿ ಮನಸೋತು ಫಾಸ್ಟ್ ಅವಳ ಭೆಟ್ಟಿಯ ವಚನವನ್ನು ಸೈತಾನನಿಂದ ಪಡೆದನು. ಇನ್ನು ಯಾವ ಹರೆಯದ ಹೆಣ್ಣಿನಲ್ಲಿಯೂ ಆ ಕನ್ನಡಿ ಗಂಟಾದ ಚೆಲುವೆಯನ್ನು ಕಾಣುವ ಕಾಮಾತುರ ವೃತ್ತಿ ಫಾಸ್ಟನಲ್ಲಿ ಕೆರಳಿತ್ತು.

ಗ್ರೆಶನ್ ಎಂಬ ಒಬ್ಬ ಬಡ ಹುಡುಗಿ ಪಾದ್ರಿಯಲ್ಲಿ ಪಾಪವಿಮೋಚನೆ ಮುಗಿಸಿ ಮನೆಯ ಹಾದಿ ಹಿಡಿದು ನಡೆದಿದ್ದಳು. ಪಂಡಿತ ಫಾಸ್ಟ್ ಇಂದ್ರಿಯ ಘ್ರಾಣದ ಸುಳಿಯಲ್ಲಿ ಸಿಲುಕಿದವನು ಅವಳ ಕೈ ಹಿಡಿದು ತಡೆದನು. ಅವನು ಯಾರೋ ಸರದಾರನೆಂದು ಭಾವಿಸಿ ಆ ಬಡ ತರಳೆ ಸಂಕೋಚದಿಂದ ಕೈ ಕೊಸರಿಕೊಂಡು ಹೋಗಿಬಿಟ್ಟಳು. ಅವಳ ಭೆಟ್ಟಿ ಮಾಡಿಸೆಂದು ಫಾಸ್ಟ್ ಸೈತಾನನ ಬೆನ್ನಿಗೆ ಬಿದ್ದನು. ಭೆಟ್ಟಿ ಅಲ್ಲದಿದ್ದರೆ ಅವಳ ಕಾಲಚೀಲದ ಕಸೆ, ಕರವಸ್ತ್ರ ಏನಾದರೂ ಕುರುಹನ್ನು ತಂದು ಕೊಡೆಂದು ಕಾಡಿದನು.

ಆ ದಿನ ಸಂಜೆಗೆ ಗ್ರೆಶೆನ್ ತನ್ನ ಗುಡಿಸಲಲ್ಲಿ ಹೆಳಲು ಕಟ್ಟಿಕೊಳ್ಳುತ್ತಿದ್ದಳು. ಅವಳಿಗೆ ಆಗಲೂ ಮುಂಜಾನೆ ಹಾದಿಯಲ್ಲಿ ಕೈಹಿಡಿದ ಸರದಾರನದೇ ನೆನಪು. ಕತ್ತಲೆ ಕವಿಯಿತು. ದೀಪ ಹಚ್ಚಿ ತರಲು ಅವಳು ಒಳಗೆ ಹೋದಳು. ಆಗಲೇ ಫಾಸ್ಟ್‌ನೊಂದಿಗೆ ಸೈತಾನ ಅಲ್ಲಿ ಪ್ರವೇಶಿಸಿ ಫಾಸ್ಟ್‌ನ ಕೈಯಿಂದ ಒಂದು ರತ್ನ ಕರಂಡಕವನ್ನು ಅವಳ ಕಪಾಟಿನಲ್ಲಿ ಇರಿಸಿದನು. ಅಷ್ಟರಲ್ಲಿ ಗ್ರೆಶನ್ ದೀಪದೊಂದಿಗೆ ಬರಹತ್ತಿದ್ದನ್ನು ಕಂಡು ಅವನು ಮರೆಯಾದನು.

ಗ್ರೆಶೆನ್ ಬಂದವಳೇ ದೀಪವನ್ನು ಇಟ್ಟು ಹಾಗೆಯೇ ತನ್ನ ಬಟ್ಟೆಗಳನ್ನು ಕಳಚಿಟ್ಟು ಕಪಾಟಿನ ಕದ ತೆರೆದಳು. ಅಲ್ಲಿ ಆ ರತ್ನಕರಂಡಕವನ್ನು ಕಂಡು ತಬ್ಬಿಬ್ಬಾದಳು. ಅದರ ಕೀಲಿ ಬೀಗದಲ್ಲಿಯೇ ಇತ್ತು. ಅದನ್ನು ತೆರೆದು ನೋಡಿದಳು. ಒಳಗಿನ ಮಿರಿಮಿರಿ ಮಿರುಗುವ ರತ್ನಾಭರಣಗಳನ್ನು ಎತ್ತಿತಂದ ಕನ್ನಡಿಯ ಇದಿರು ನಿಂತು ತೊಟ್ಟುಕೊಂಡು ನೋಡಹತ್ತಿದಳು. ಹಸುಗೂಸಿನಾತೆ ಒಗ್ಗಿದಳು. “ಇವೆಲ್ಲ ಒಡವೆಗಳು ನನ್ನವಾಗವೇ?” ಎಂದು ನಿಟ್ಟುಸಿರು ಬಿಟ್ಟಳು.

ಆದರೆ ಅವು ಅವಳದಾಗಲಿಲ್ಲ. ಮರುದಿನವೇ ಅವಳ ತಾಯಿ ಅವುಗಳನ್ನು ಕಂಡು ವಿಚಾರಣೆ ನಡೆಯಿಸಿ ಅವು ತಮ್ಮವಲ್ಲವೆಂದು, ಪರಸ್ವಾಪಹರಣಕ್ಕೆ ಹೆದರಿ ಆ ಕರಡಿಗೆಯನ್ನು ಇಗರ್ಜಿಗೆ ಕೊಟ್ಟುಬಂದಳು! ಆ ಸುದ್ದಿ ಸೈತಾನನೇ ತಿಳಿದು ಬಂದು

ಫಾಸ್ಟನಿಗೆ ತಿಳಿಸಿದನು. ಫಾಸ್ಟ್ ಇನ್ನೂ ಅಸ್ವಸ್ಥ ಅಧೀರನಾದನು. ಇನ್ನೊಂದು ರತ್ನ ಕರಂಡಕವನ್ನು ತನ್ನ ಆ ಪ್ರೇಯಸಿಗೆ ಸೈತಾನನಿಂದ ಕೊಡಿಸಿದನು.

ಈ ಸಲ ಗ್ರೆಶೆನ್ ನೆರೆಮನೆಯ ಮಾರ್ಥಾ ಎಂಬ ಒಬ್ಬ ಪ್ರೌಢ ಮಹಿಳೆಯ ಸಲಹೆಯಿಂದ ಆ ಕರಂಡಕವನ್ನು ತಾಯಿಯಿಂದ ಬಚ್ಚಿಟ್ಟಳು. ಮಾರ್ಥಾಳ ಮನೆಯಲ್ಲಿಯೇ ಆ ಆಭರಣಗಳನ್ನು ತೊಟ್ಟು ನೋಡಿದಳು. ಆದರೆ ತೃಪ್ತಿ ಇಲ್ಲ, ಇಗರ್ಜಿಯಲ್ಲಿಯೂ ಬೀದಿಯಲ್ಲಿಯೂ ಅವನ್ನು ತೊಟ್ಟು ತಿರುಗಾಡಲಿಕ್ಕೂ ಸಾಧ್ಯವಿದ್ದಿಲ್ಲ. ವರ್ಷಕ್ಕೆ ಒಮ್ಮೆ ಹುಟ್ಟು ಹಬ್ಬಕ್ಕೆ ಒಂದೊಂದು ಆಭರಣ ಕಾಣಿಕೆ ಬಂತೆಂದು ಹೊರಗೆ ತೆಗೆದು ತಾಯಿಗೆ ಮಣ್ಣು ಎರಚಬೇಕೆಂದು ಮಾರ್ಥಾ ಸಲಹೆ ನೀಡಿದಳು.

ಮಾರ್ಥಾಳ ಗಂಡ ಎಂದೋ ಪರದೇಶಕ್ಕೆ ವ್ಯಾಪಾರಕ್ಕೆ ಹೋದವನು ಮರಳಿ ಬಂದಿರಲಿಲ್ಲ. ಸೈತಾನ ಅಲ್ಲಿಗೆ ಬಂದು ಕಪಟದಿಂದ ಅವಳೊಂದಿಗೆ ಸ್ನೇಹ ಬೆಳೆಯಿಸಿಹನು. ಬಳಿಕ ಫಾಸ್ಟನನ್ನು ಕರೆತಂದು ಅಲ್ಲಿ ಗ್ರೆಶೆನ್ನಳ ಗೆಳೆತನ ಮಾಡಿಸಿಕೊಟ್ಟನು. ಇಬ್ಬರೂ ಆ ದಿನ ರಾತ್ರಿ ಮಾರ್ಥಾಳ ತೋಟದಲ್ಲಿ ಕೂಡಿ ಪ್ರಣಯಸಲ್ಲಾಪದಲ್ಲಿ ಕಾಲ ಕಳೆದರು.

ಫಾಸ್ಟ್ ತನ್ನ ಒಡ್ಡವನ್ನು ಮರೆತು ಗ್ರೆಶೆನ್ನಳಲ್ಲಿ ಗಾಢವಾಗಿ ಅನುರಕ್ತನಾದನು. ಬುದ್ಧಿ ಅವರಿಂದ ದೂರವಿರಲು ಹೆಣಗುತ್ತಿದ್ದರೂ ಅಭಿಲಾಷೆಯಿಂದ ಭೋಗ, ಭೋಗದಿಂದ ಅಭಿಲಾಷೆ ತೀವ್ರವಾಗುತ್ತ ಆತ ಆತ್ಮಗ್ಲಾನಿಗೆ ಈಡಾದನು. ಇನ್ನು ಆತ ಗ್ರೆಶೆನ್ನಳನ್ನು ಬಿಟ್ಟು ಇರಲಾರ; ಅವಳೊಂದಿಗೂ ಇರಲಾರ. ತನ್ನ ಆತ್ಮಪ್ರತಿಷ್ಠೆಗೆ ಸೈತಾನನ ಸಹವಾಸ ಒಂದು ಕುಂದು-ಎಂದು ಅವನಿಗೆ ಒಮ್ಮೊಮ್ಮೆ ಅನಿಸುತ್ತಿತ್ತು. ಆದರೆ ಅವನಿಗೆ ಇನ್ನೆಲ್ಲಿ ಬಿಡುಗಡೆ?

ಫಾಸ್ಟನ ಪ್ರೇರಣೆಯಿಂದ ರಾತ್ರಿ ತಾಯಿಗೆ ಅಮಲಿನ ಮದ್ದು ಕುಡಿಸಿ, ಗ್ರೆಶೆನ್ ದಿನನಿತ್ಯವೂ ಅವನೊಡನೆ ಕೂಡತೊಡಗಿದಳು. ಸ್ವಲ್ಪ ಕಾಲದಲ್ಲೇ ನೀರಿಗೆ ಹೋದಾಗ

ಕೇರಿಯ ಓರಿಗೆಯ ಹೆಂಗಸರು ಗ್ರೆಶೆನ್ನಳನ್ನು ಕಂಡು ತಮ್ಮ ತಮ್ಮೊಳಗೆ ಗುಜುಗುಡಹತ್ತಿದರು-ಅವಳೀಗ ಬಸುರಿ! ಅವಳು ಮರ್ಯಾದೆ ಮುಚ್ಚಿಕೊಳ್ಳಲು ಮನೆಯ ಹೊರಗೇ ಬೀಳದಾದಳು. ಮೇರೀ ದೇವಿಯ ಭಜನ ಪೂಜನಗಳಲ್ಲಿ, ನೂಲು ತೆಗೆಯುವುದರಲ್ಲಿ ಆಕೆ ತನ್ನ ಆಯುಷ್ಯ ಕಳೆಯತೊಡಗಿದಳು.

ಫಾಸ್ಟ್ ಬಂದಾಗೆಲ್ಲ ಗ್ರೆಶೆನ್ ಅವನಿಗೆ ದೇವರನ್ನು ಕುರಿತು ಕೇಳುತ್ತಿದ್ದಳು. ಅವನಿಗೆ ದೇವರನ್ನು ನಂಬಲು ಹೇಳುತ್ತಿದ್ದಳು. ಜತೆಗೆ ಆ ಸೈತಾನನ ಸಹವಾಸ ಬಿಡಲು ಒತ್ತಾಯ ಮಾಡುತ್ತಿದ್ದಳು. ಅವನನ್ನು ಕಂಡರೆ ಆಕೆಗೆ ಆಗದು. ಆದರೆ ಫಾಸ್ಟನಿಗೆ ಸೈತಾನನಿಂದ ಬಿಡುಗಡೆ ಶಕ್ಯವಿದ್ದಿಲ್ಲ!

ಕ್ರಮೇಣ ಗ್ರೆಶೆನ್ನಳ ಪಾಪ-ಪಿಂಡದ ವದಂತಿ ಊರೆಲ್ಲ ಹಬ್ಬಿ ಅವಳ ಅಣ್ಣನ ಕಿವಿಗೂ ಮುಟ್ಟಿತು. ಆತ ಕೆರಳಿ ಕಿಡಿಕಿಡಿಯಾದನು. ಗೋಡೆಗೆ ಹಣೆ ಜಜ್ಜಿಕೊಂಡು ಜೀವವನ್ನೇ ಕಳೆದುಕೊಳ್ಳಬೇಕೆಂದು ಅನಿಸಿತು ಆ ಬಡಪಾಯಿಗೆ. ತಂಗಿಯನ್ನು ಇಂಥ ಅವಸ್ಥೆಗೆ ತಂದ ಆ ಭಂಡ ಫಾಸ್ಟನನ್ನು ತಡೆದು ಹಿಡಿದು ಥಳಿಸಬೇಕೆಂದು ಒಂದು ರಾತ್ರಿ ಆತ ತಮ್ಮ ಮನೆಯ ಮುಂದೆ ಬೀದಿಯಲ್ಲಿ ಕಾಯುತ್ತ ನಿಂತಾಗ ಸೈತಾನ ಮತ್ತು ಫಾಸ್ಟ್ ಇಬ್ಬರೂ ಅವನಿಗೆ ಗಂಟುಬಿದ್ದರು. ಕಾಲು ಕೆದರಿ ಕಲಹ ತೆಗೆದು ಕತ್ತಿ ಹಿರಿದು ಕಾದಾಡಿದರು. ಸೈತಾನನ ಕತ್ತಿಗೆ ಗ್ರೆಶೆನಳ ಅಣ್ಣ-ಬಲಿಯಾಗಿ ಉರುಳಿದ. ಆಗ ಅವರಿಬ್ಬರು ಪರಾರಿಯಾದರು. ಸಾಯುವಾಗ ಆತ ತಂಗಿಯನ್ನು ಬಾಯ್ತುಂಬ ಬಯ್ದು ಬಾಜಾರ ಬಸವಿಯಾಗಿ ಬದುಕೆಂದು ಶಾಪವಿಟ್ಟನು.

೬

ಕೊಲೆಪಾತಕದಿಂದ ಪಾರಾಗಲು ಸೈತಾನ ಫಾಸ್ಟನನ್ನು ದೂರ ಹಾರ್ಝ್ ಪರ್ವತಗಳಲ್ಲಿ "ಜಕ್ಕಿಣಿಯ ಗುಡ್ಡ" ವೆಂಬ ಶಿಖರಕ್ಕೆ ಒಯ್ದನು. ಅಲ್ಲಿ ಅಲ್ಲಿ ಕೊಳ್ಳಿ ದೆವ್ವಗಳ

ಕಿರಿಬೆಳಕಿನಲ್ಲಿ ಸೈತಾನ ಅವನನ್ನು ಕೈಹಿಡಿದು ಮುನ್ನಡೆಸಿದನು. ತುಂಬ ದೂರಕ್ಕೆ ಗುಡ್ಡವೇರಿ ಹೋದ ಮೇಲೆ ಅಲ್ಲಿ ಅವರು ಇಬ್ಬರು ಜಕ್ಕಿಣಿಗಳನ್ನು ಕಂಡರು. ಒಬ್ಬಳು ಮುದುಕಿ, ಇನ್ನೊಬ್ಬಳು ಹರೆಯದ ಹೆಣ್ಣು ಅವಳು ಅದಮನ- ಆದಿ ಮಾನವನ- ಕಿರಿಯ ಹೆಂಡತಿ ಲಿಲಿಯಥ್. ಅವಳೊಂದಿಗೇ ಫಾಸ್ಟ್ ಕುಣಿಯತೊಡಗಿದನು. ಆದರೆ ನಡುವೆ ನಿಂತುಬಿಟ್ಟನು. ಏಕೆಂದರೆ ಅವಳ ಬಾಯಿಯಿಂದ ಫಕ್ಕನೆ ಒಂದು ಕೆಂಪು ಇಲಿಯು ಹೊರಗೆ ಬಂದಿತು!

ಆಗ ಅಲ್ಲಿ ಮತ್ತೆ ಫಾಸ್ಟ್ ಒಂದು ಕನ್ನಡಿಯಲ್ಲಿ ತನ್ನ ಅದೃಷ್ಟದ ದರ್ಶನವನ್ನು ಪಡೆದನು. ಗ್ರೆಶೆನ್ನಳದೇ ಮುಖಚರ್ಯೆಯುಳ್ಳ ಒಂದು ಮುದ್ದು ಶಿಶು ಕಳೆಗುಂದಿ ಹೆಣದ ಕಳೆ ತಳೆದದ್ದು ಕಂಡಿತು. ಆಮೇಲೆ ಗ್ರೆಶೆನ್ನಳ ಕಾಲುಗಳಿಗೆ ಭಾರವಾದ ಸಂಕೋಲೆ ಹಾಕಿದ್ದಂತೆ, ಅವಳ ಚೆಂದವಾದ ಕೊರಳ ಸುತ್ತಲೂ ಚೂರಿಯ ಧಾರೆಯಂತೆ ಕೆಂಪಾದ ಗೆರೆ ಬಿದ್ದಿದ್ದಂತೆ ಫಾಸ್ಟ್ ಕಂಡನು.

ನಿಜವಾಗಿಯೂ ಅವಳು ಅದೇ ದುರಂತಕ್ಕೆ ಈಡಾಗಿದ್ದಳು. ಒಂದು ದಿನ ಕರುಳಿನ ಪಾಪದ ಚಿಂತೆಯಲ್ಲಿ ವಿಕಾರಗೆಟ್ಟು ತಾಯಿಯನ್ನು ಕೊಂದಳು. ಮುಂದೆ ಅವಳೇ ತಾಯಿಯಾದಳು. ಆಗ ಬೇಡವಾದ ಶಿಶುವನ್ನು ಒಂದು ಸಂಕದ ಕೆಳಗೆ ಹಳ್ಳದಲ್ಲಿ ಒಗೆದು ಕೊಂದಳು. ಅದಕ್ಕಾಗಿ ಅವಳನ್ನು ಸೆರೆಯಲ್ಲಿಡಲಾಗಿತ್ತು. ಅಲ್ಲಿ ಭ್ರಮಿಷ್ಟಳಾಗಿ ಗಲ್ಲಿನ ಶಿಕ್ಷೆಯನ್ನು ಕಾಯುತ್ತಲಿದ್ದಳು.

ಫಾಸ್ಟ್ ಅವಳ ಬಿಡುಗಡೆಗೆ ಧಾವಿಸುವ ಹಟ ಹಿಡಿದನು. ಸೈತಾನನ ನೆರವಿನಿಂದ ನೆರೆಮನೆಗೆ ಬಂದು ಮದ್ದುಹಾಕಿ ಮೈಮರೆಸಿ ಅವನ ಕೀಲಿ ಗೊಂಚಲು ಕಿತ್ತುಕೊಂಡು ಫಾಸ್ಟ್ ಬಾಗಿಲು ತೆರೆದು ಒಳಗೆ ತನ್ನ ಪ್ರೇಮಿಕೆ ಇದ್ದೆಡೆಗೆ ಧಾವಿಸಿದನು. ಅವಳು ಅವನೇ ತಲೆ ಹೊಡೆಯಲು ಬಂದ ಸಿಪಾಯಿಯೆಂದು ಹೆದರಿ ಹೌಹಾರಿ ಚಾಪೆಯಲ್ಲಿ ಮೋರೆ ಅಡಗಿಸಿ ಕೂತಳು. ಅವಳ ಸಂಕೋಲೆಗಳನ್ನು ಬಿಡಿಸಿದನು. ಅವಳು ಹುಚ್ಚಿಯಂತೆ ಹಲಬುತ್ತಿದ್ದಳು. ತನ್ನನ್ನು ಕೊಲ್ಲಬೇಡವೆಂದು ಅವನನ್ನು

ಅಂಗಲಾಚಿದಳು. ಅವನು ಅವಳ ಇದಿರು ಮಂಡಿಯೂರಿ ತಾನು ಫಾಸ್ಟ್, ಅವಳ ಪ್ರಿಯತಮನೆಂದು ಸಾರಿ ಸಾರಿ ಹೇಳಿ "ಗ್ರೆಶೆನ್, ಗ್ರೆಶೆನ್" ಎಂದು ಕಳವಳದಿಂದ ಕರೆದನು.

ಈ ಕರೆಯಲ್ಲಿ ಅವಳು ತನ್ನ ಪ್ರಿಯತಮನ ದನಿಯನ್ನು ಗುರುತಿಸಿದಳು. ಆದರೇನು? ಅವಳಿಗೀಗ ಇನ್ನೇನೂ ಬೇಡ. ಅವನನ್ನು ಅಪ್ಪಿ ಮುದ್ದಾಡುತ್ತ, ಅಲ್ಲಿಯೇ ಇದ್ದುಬಿಡಬೇಕೆಂಬುದೊಂದೇ ಆಸೆ! ಅವಳನ್ನು ಎತ್ತಿ ಹೊತ್ತು ಆದರೂ ಒಯ್ಯಬೇಕೆಂದು ಅವನ ಹಟ. ಆದರೆ ಎತ್ತಿದೊಡನೆ ಅವಳಿಗೆ ಹುಚ್ಚು ಭಯ ಮರುಕಳಿಸಿತು. ತನ್ನನ್ನು ಗಲ್ಲಿಗೆ ಕೂಡಲೇ ಒಯ್ಯುತ್ತಿದ್ದಾರೆಂದು ಭಾವಿಸಿ ಗ್ರೆಶೆನ್ ಅತ್ತು ಕರೆದು ಕೂಗಿದಳು.

ಸೈತಾನ ಹೊರಗೆ ಕಾಯುತ್ತಿದ್ದವನು ತಾಳ್ಮೆಗೆಟ್ಟು ಒಳಗೋಡಿದನು. ಹೊರಗೆ ಪಾರಾಗಲು ಕುದುರೆಗಳು ಸಜ್ಜಾಗಿ ನಿಂತಿವೆ ಎಂಬುದನ್ನು ತಿಳಿಸಿ ನಸುಕು ಹರಿಯಲ್ಪಟ್ಟಿದೆಯೆಂದೂ ಎಚ್ಚರಿಸಿದನು. ಆದರೆ ಗ್ರೆಕೆನ್ ಕದಲಲಿಲ್ಲ. ಅವಳಿಗೊಮ್ಮೆಲೆ ಹರ್ಷ ಮತ್ತು ಹತಾಶೆ, ಫಾಸ್ಟ್ ಸಿಕ್ಕನೆಂದು ಹರ್ಷ; ಹೊರಗೆ. ಹೋಗುವದೋ? ಹೋಗಿ ಮಾಡುವುದೇನು? ಮತ್ತೆ ಹಿಡಿದು ಎಂದಾದರೂ ಗಲ್ಲಿಗೆ ಕೊಡುವವರೇ. ಇನ್ನು ಬಿಡುಗಡೆ "ಇಲ್ಲಿ" ಇಲ್ಲ, "ಅಲ್ಲಿ" ದೇವರ ನೆರಳಲ್ಲಿ ನೆರೆಯಲ್ಲಿ ಸಮಾಧಿಯಲ್ಲಿಯೇ ಪೂರ್ತಿ ಸಮಾಧಾನ. "ಅದೋ ಶಿಶು ನೀರಿನಿಂದ ಮೇಲೆ ಬರಲು ಮಿಸುಕಾಡುತ್ತಿದೆ! ಅದನ್ನು ಉಳಿಸಿರಿ!" ಅಂದಳು ಗ್ರೆಶೆನ್ ಉದ್ಭ್ರಾಂತಳಾಗಿ. ಅದೋ ಕತ್ತಿನ ಮೇಲೆ ಥಳಥಳಿಸುವ ಅಲಗು ಬೀಳುತ್ತದೆ!.. ಅದುವೇ ಮದುವೆಯ ಮುಹೂರ್ತ! ಅದುವೆ ಅವಳಿಗೆ ಮುಕ್ತಿ!

ಹಲಬುತ್ತ ಗ್ರೆಶೆನ್ ಅಲ್ಲಿಯೇ ಎದೆಯೊಡೆದು ಸತ್ತಳು. ಸೈತಾನ ಫಾಸ್ಟ್‌ನೊಂದಿಗೆ ಮೆಲ್ಲನೆ ಅಲ್ಲಿಂದ ಕಾಲು ಕಿತ್ತನು. ಗ್ರೆಶೆನ್‌ಳ ಪಾಪಾತ್ಮ ಪಶ್ಚಾತ್ತಾಪದಿಂದ ಪರಮಾತ್ಮನಿಗೆ ಅರ್ಪಣವಾಗಿತ್ತು. ಆದರೆ ಫಾಸ್ಟನೊ? ಸೈತಾನನಿಗೆ ತರ್ಪಣ!

## ೬. ಅಂಡ್ರೊಕ್ಲಿಸ್ ಮತ್ತು ಸಿಂಹ

*ಅಂಡ್ರೊಕ್ಲಿಸ್‌ನ ಕಥೆ ರೋಮನ್ ಸಾಮ್ರಾಜ್ಯದ ಕಾಲದ್ದು. ಅದೊಬ್ಬ ಗುಲಾಮನ ಕಥೆ, ಪ್ರಾಣಿದಯೆಯ ಪವಾಡವು ಪರಾರಿಯಾದ ಗುಲಾಮನಿಗೆ ಹೇಗೆ ಬಿಡುಗಡೆಯೊಂದಿಗೆ ಅಜರಾಮರವಾದ ಕೀರ್ತಿಯನ್ನೂ ತಂದುಕೊಟ್ಟಿತೆಂಬುದರ ಜಗತ್ಪ್ರಸಿದ್ಧ ಕಥೆ. ಹಲವರು ಹಲವಾರು ಬಗೆಯಾಗಿ ಈ ಕಥೆಯನ್ನು ಹೇಳಿದ್ದಾರೆ. ಆಧುನಿಕ ಶೇಕ್ಸಪಿಯರನೆಂದು ಕರೆದುಕೊಂಡ ಆಂಗ್ಲ ನಾಟಕಕಾರ ಜಾರ್ಜ ಬರ್ನಾರ್ಡ ಶಾ "ಅಂಡ್ರೋಕ್ಲಿಸ್ ಮತ್ತು ಸಿಂಹ" ಎಂಬ ಒಂದು ನಾಟಕವನ್ನೇ ಬರೆದಿದ್ದಾನೆ.*

*ಇಲ್ಲಿ ಹೇಳಿದ ಕಥೆ ಜೀವನ ಶಿಕ್ಷಣದ ಪ್ರಥಮ ಪಠ್ಯಪುಸ್ತಕವೆಂದು ಲೋಕಪ್ರಿಯವಾದ "ಸಾಂಡಫರ್ಡ ಆಂಡ ಮಾರ್ಟಿನ್" ಎಂಬ ಪ್ರಸಿದ್ಧ ಗ್ರಂಥದಿಂದ ಆಯ್ದುಕೊಂಡಿದ್ದು.*

ಹಿಂದಕ್ಕೆ ರೋಮನಗರದಲ್ಲಿ ಅಂಡ್ರೊಕ್ಲಿಸ್‌ನೆಂಬ ಒಬ್ಬ ಗುಲಾಮನಿದ್ದ. ಆತ ತರುಣನಿದ್ದ ಧೀರನಿದ್ದ, ಆದರೆ ಅವನ ಒಡೆಯ ಮಹಾನಿರ್ದಯನಾಗಿದ್ದ. ದಿನಾಲು ಆತನು ಅಂಟ್ರೊಕ್ಲಿಸ್‌ನನ್ನು ಹೊಡೆಯುತ್ತಿದ್ದ. ಒಡೆಯನ ಈ ಯಮಯಾತನೆ ಸಹಿಸಿ ಸಹಿಸಿ ಅವನಿಗೆ ಬದುಕು ಅಸಹ್ಯವಾಯಿತು. ಬೇರೆ ಉಪಾಯಗಾಣದೆ ಅವನು ಒಡೆಯನ ಮನೆಯಿಂದ ಪರಾರಿಯಾಗಲು ಹವಣಿಸಿದ. ಗುಲಾಮನೆಂದರೆ ಕ್ರಯ ತೆತ್ತು ತಂದ ಒಂದು ಪಶು, ಆತನ ಹಣ ಸಂದಾಯವಾಗದೆ ಆತನಿಗೆ ಬಿಡುಗಡೆಯುಂಟೇ? ಪರಾರಿಯಾದವನನ್ನು ಹಿಡಿದು ತಂದರೆ ಅವನಿಗೆ ಮರಣದಂಡನೆಯೇ ಗತಿ, ಆದರೆ ಈ ದಾಸ್ಯದ ಬಾಳಿಗಿಂತ ಆ ಮರಣವೇ ಲೇಸೆಂದು ಅಂಡ್ರೊಕ್ಲಿಸ್ ಭಾವಿಸಿದನು. ಹಾಗೂ ಸಮಯ ಸಾಧಿಸಿ ಒಂದು ರಾತ್ರಿ ಒಡೆಯನ ಮನೆಯಿಂದ ಓಡಿಹೋದನು. ಕೆಲವು

ಮೈಲು ದೂರ ಹೋಗಿ ಒಂದು ಬೆಟ್ಟದಲ್ಲಿ ಅಡಗಿ ಕುಳಿತನು. ಬೆಟ್ಟ ಗುಡ್ಡ ಮರಳುಗಾಡುಗಳಲ್ಲಿ ಹಿಂಸ್ರ ಪಶುಗಳ ಜತೆಯಲ್ಲಿ ಬದುಕುವದಾದರೂ ಬೇಕು. ಪರದಾಸ್ಯದ ನರಕಯಾತನೆ ಬೇಡ- ಎಂದೆನಿಸಿರಬೇಕು ಆ ಬಡ ಗುಲಾಮನಿಗೆ.

ಆತ ಹಗಲೆಲ್ಲ ಆ ಬೆಟ್ಟದಲ್ಲಿ ಮುಳ್ಳು ಕಂಟಿಗಳಲ್ಲಿ ಮೈ ಪರಚಿಕೊಂಡು ಕಲ್ಲು ಕೊರಕಲುಗಳಲ್ಲಿ ಬಿದ್ದು ಎದ್ದು. ಕಾಲು ಸೋತು ಕುಪ್ಪಳಿಸುವ ತನಕವೂ ಅಲೆದಾಡಿದನು. ಹಸಿವೆಯಿಂದ, ದಣಿವಿಕೆಯಿಂದ ಆಸತ್ತು ಬೇಸತ್ತು ಕೊನೆಗೂ ಒಂದು ಗವಿಯನ್ನು ಹೊಕ್ಕು ನಿತ್ರಾಣವಾಗಿ ಬಿದ್ದುಬಿಟ್ಟನು. ಅಲ್ಲಿ ಆತ ಎಷ್ಟು ಹೊತ್ತು ಹಾಗೆ ಮೈಮರೆತು ಬಿದ್ದಿದ್ದನೋ ಅವನಿಗೇ ಅರಿವಿಲ್ಲ. ಆದರೆ ಒಮ್ಮೆಲೆ ಒಂದು ಭೀಕರ ಸದ್ದು ಅವನ ಕಿವಿಯನ್ನು ಗುದ್ದಿತು. ಅದು ಗರ್ಜನೆ, ಕೂಡಲೇ ಅಂಡ್ರೊಕ್ಲಿಸ್ ಜೀವ ಉಳಿಸಿಕೊಳ್ಳಲು ಆ ಸ್ಥಳದಿಂದ ಕಾಲ್ದೆಗೆಯಬೇಕೆಂದು ಎದ್ದು ಗವಿಯ ಬಾಯಿಗೆ ಬಂದನು. ಅದೇ ಕಾಲ ಒಂದು ಪ್ರಚಂಡ ಸಿಂಹವು ಅಬ್ಬರಿಸುತ್ತ ಆ ಗವಿಯ ಕಡೆಗೇ ಮೆಲ್ಲಗೆ ಹೆಜ್ಜೆ ಹಾಕುತ್ತ ಬರುತ್ತಿರುವುದನ್ನು ಆತ ನೋಡಿದನು.

ಅಂಡ್ರೊಕ್ಲಿಸನ ಕೈಕಾಲೇ ಹೋದವು. ಅಲ್ಲಿಯೇ ಗರ ಬಡಿದವನಂತೆ ನಿಂತನು. ಸಮೀಪಿಸುತ್ತಿರುವ ಆ ಸಿಂಹವನ್ನು ದಿಟ್ಟಿಸಿದನು. ನೋಡುತ್ತಿದ್ದಂತೆ ಅವನಿಗೆ ಸಿಂಹದ ನಡೆ ಏನೋ ಬೇರೆಯಾಗಿ ಕಂಡಿತು. ಅದರ ಗರ್ಜನೆಯಲ್ಲಿ ಸಿಟ್ಟಿನ ಕೆರಳಿಕೆಗಿಂತ ನೋವಿನ ನರಳಿಕೆ ಹೆಚ್ಚಾಗಿತ್ತು. ಅದರ ಮೋರೆಯ ಮೇಲೆ ಉಗ್ರಕಳೆ ಇರಲಿಲ್ಲ. ಅಸಾಧ್ಯ ಬಳಲಿಕೆ ಇತ್ತು. ಅದು ಕುಂಟುತ್ತ ಬರುತ್ತಿದ್ದಿತು. ಅದರ ಒಂದು ಕಾಲಿನ ನಖಪಂಜರ ಬಾತಿತ್ತು.

ಸಿಂಹವು ಗವಿಯನ್ನು ಹೊಕ್ಕು ನರಳುತ್ತ ಗೊರಗುಡುತ್ತ ಒಂದೆಡೆಗೆ ಬಿದ್ದುಬಿಟ್ಟಿತು. ತನ್ನ ಬಾತ ಪಾದವನ್ನು ಮುಂದಿಟ್ಟು ಅದನ್ನೇ ನೆಕ್ಕಹತ್ತಿತು. ಅದು ಅಂಡ್ರೊಕ್ಲಿಸ್‌ನನ್ನು ಗಮನಿಸಿದಂತೆ ಕಾಣಲಿಲ್ಲ. ಆದರ ಅಂಡ್ರೊಕ್ಲಿಸ್ ಅದರ ಆ ಬಾತ

ಪಂಜನ್ನು ಗಮನಿಸಿದನು. ಅದರಲ್ಲಿ ಒಂದು ದೊಡ್ಡ ಮುಳ್ಳು ಹೆಟ್ಟಿಕೊಂಡಿತ್ತು. ಆ ವೇದನೆಯಿಂದಲೇ ಆ ಬಡ ಸಿಂಹವು ಹಾಗೆ ಕೂಗುತ್ತಿತ್ತು.

ಅದನ್ನು ಕಂಡೊಡನೆ ಅಂಡ್ರೊಕ್ಲಿಸನ ಭಯ ಹಿಂದಾಯಿತು. ಆ ಅಸಹಾಯ ಸಿಂಹದ ಬಗಗೆ ಅವನಲ್ಲಿ ಮರುಕ ಮುಂದಾಯಿತು. ಮರುಕದಿಂದ ಅವನು ದಿಟ್ಟನಾದನು. ಮುಂದಕ್ಕೆ ಸರಿದು ಸಿಂಹದ ಹತ್ತಿರ ಹೋಗಿ ಅದರ ನೋವಿನ ಕಾಲನ್ನು ಮೈಯನ್ನು ತಡವಹತ್ತಿದನು. ಸಿಂಹವು ಪ್ರತೀಕಾರ ಮಾಡಲಿಲ್ಲ. ಸುಮ್ಮನೆ ಬಿದ್ದುಕೊಂಡಲ್ಲಿ ಒಮ್ಮೆ ಮುಂದೆ ಸರಿಯಿತು. ಆಗ ಅಂಡ್ರೊಕ್ಲಿಸ ಅದರ ಬಿಗಿದ ಪಾದವನ್ನು ಎತ್ತಿ ತನ್ನ ತೊಡೆಯಲ್ಲಿ ಇಟ್ಟುಕೊಂಡನು. ಅದರ ಮುಳ್ಳನ್ನು ಗಟ್ಟಿಯಾಗಿ ಹಿಡಿದು ಜಗ್ಗಿ ಕಿತ್ತು ತೆಗೆದನು. ಒಮ್ಮೆ ಸಿಂಹ ಕೂಗಿಕೊಂಡಿತು- ಗವಿಯೇ ಕುಸಿದು ಬೀಳುವಷ್ಟು ಅಬ್ಬರದಿಂದ ಆ ನೋವನ್ನು ತಡೆಯಲಾರದೆ. ಆದರೆ ಅದರ ವೇದನೆ ಒಮ್ಮೆಲೆ ಕಡಿಮೆಯಾಯಿತು. ಅಂದು ಶಾಂತವಾಗಿ ಬಾಲ ಗುಂಡಾಡಿಸಿತು. ಅಂಡ್ರೊಕ್ಲಿಸ್ ಮುಳ್ಳು ನೆಟ್ಟಲ್ಲಿ ಕಟ್ಟಿನಿಂತ ಕೀವನ್ನು ಒತ್ತಿ ತೆಗೆದನು. ಆಗ ನೋವು ಇನ್ನಷ್ಟು ಕಡಿಮೆಯಾಯಿತು. ಸಿಂಹ ಬೆಕ್ಕಿನಂತೆ ತೃಪ್ತಿಯಿಂದ ಗುರುಗುಡುತ್ತ ಅಂಡ್ರೊಕ್ಲಿಸನ ಮೈ-ಕೈಗಳನ್ನು ನೆಕ್ಕತೊಡಗಿತು.

ಆಮೇಲೆ ಆತ ಅಡವಿಯಲ್ಲಿ ಅಲೆದು ಕೆಲವು ಮದ್ದಿನ ಸೊಪ್ಪನ್ನು ತಂದು ಜಜ್ಜಿ ಅದರ ಕಲ್ಕವನ್ನು ಅದರ ಪಾದಕ್ಕೆ ಕಟ್ಟಿದನು. ಸಿಂಹ ಎದ್ದು ನಿಂತಿತು. ತನ್ನ ಉಪಕಾರಕರ್ತನ ಸುತ್ತಲೂ ನಾಯಿಯಂತೆ ಬಾಲವನ್ನು ಅಲ್ಲಾಡಿಸುತ್ತ ಹುರುಪಿನಿಂದ ಕುಣಿದಾಡಿತು. ಅಂದಿನಿಂದ ಆ ಮನುಷ್ಯ ಮತ್ತು ಆ ಪಶು ಜೀವದ ಗೆಳೆಯರಾದರು.

ದಿನಾಲು ಸಿಂಹವು ಅಡವಿಯಲ್ಲಿ ಬೇಟೆಯಾಡಿ ಬರುವಾಗ ಅಂಡ್ರೊಕ್ಲಿಸನಿಗಾಗಿ ಮಾಂಸವನ್ನು ತರುತ್ತಿತ್ತು. ಅಂಡ್ರೊಕ್ಲಿಸ್ ಪರಾರಿ, ಅಪರಾಧಿ. ಸಿಕ್ಕಿಬೀಳುವ ಭಯದಿಂದ ಕೆಲವು ದಿನ ಗವಿಯಲ್ಲಿಯೇ ಅವಿತುಕೊಂಡಿದ್ದ. ಆದರೆ ಸಿಂಹದ ಜತೆಯಿಂದ ಅವನಿಗೆ ಆತ್ಮಸಂರಕ್ಷಣೆಯ ಧೈರ್ಯ ಬಂತು. ಇಬ್ಬರೂ

ಜತೆಯಾಗಿ ಬೆಟ್ಟ ಸುತ್ತಲು ಸುರು ಮಾಡಿದರು. ಕೆಲವು ತಿಂಗಳಲ್ಲಿ ಆತ ಮೈಚಳಿ ಬಿಟ್ಟು ಗವಿಯಿಂದ ತುಸು ಅಂತರಕ್ಕೆ ಒಬ್ಬನೇ ಅಲೆದಾಡ ಹತ್ತಿದನು. ಅದೇ ಅವನಿಗೆ ಕೇಡಾಯಿತು.

ಒಂದು ದಿನ ಈ ಪರಾರಿಯಾದ ಗುಲಾಮನ ಶೋಧಕ್ಕೆ ಆ ಸೀಮೆಯಲ್ಲಿ ಸುತ್ತಾಡುತ್ತಿದ್ದ ಕೆಲವು ದಂಡಾಳುಗಳ ಪಡೆಯು ಅಂಡ್ರೊಕ್ಲಿಸನನ್ನು ಕಂಡಿತು ಮತ್ತು ಒಂಟಿಯಾಗಿ ಸಿಕ್ಕ ಅವನನ್ನು ಸೆರೆಹಿಡಿದು ನಗರಕ್ಕೆ ಒಯ್ಯಿತು.

೨

ಪರಾರಿಯಾದ ಗುಲಾಮನಿಗೆ ಅಂದು ನಾಡಿನ ನಿಷ್ಠುರ ಕಟ್ಟಳೆಯಂತೆ ಒಂದೇ ಶಿಕ್ಷೆ-ದೇಹಾಂತ. ಅದೂ ಹೇಗೆ? ರೋಮನ್ ದೊರೆಗಳ ಮನೋರಂಜನೆಯ ವಿಧಿ-ವಿಧಾನಗಳು ಅತ್ಯಂತ ಕ್ರೂರವಾಗಿದ್ದವು. ಒಂದು ಅಂಗಣದ ಕಣದಲ್ಲಿ ದೇಹಾಂತ ಶಿಕ್ಷೆಗೆ ಗುರಿಯಾದ ಸೆರೆಯಾಳನ್ನು ನಿಲ್ಲಿಸಿ ಅವನ ಮೇಲೆ ಹಸಿದ ಸಿಂಹವನ್ನು ತಂದು ಬಿಡುತ್ತಿದ್ದರು. ಆ ಸಿಂಹದೊಂದಿಗೆ ಆ ದುರ್ದೈವಿಯು ಹೋರಾಡಿ ಜೀವವುಳಿಸಿಕೊಳ್ಳಬೇಕು. ಅಥವಾ ಆ ಸಿಂಹ ಅವನನ್ನು ಹರಿದುಕೊಂಡು ತಿನ್ನುವ ಚಿತ್ರಹಿಂಸೆಯು ದೊರೆಗೂ ಅವನ ದರಬಾರಿನವರಿಗೂ ನೋಡಲು ಕಿಕ್ಕಿರಿದ ಜನಸ್ತೋಮಕ್ಕೂ ಕಣ್ಣಿಗೆ ಹಬ್ಬ ಒದಗಿಸಬೇಕು.

ಅಂಡ್ರೊಕ್ಲಿಸನಿಗೂ ಅದೇ ಶಿಕ್ಷೆ ಕಾದಿತ್ತು. ದೊರೆಯೂ ಅವನ ಓಲಗದವರೂ ಸಾವಿರಾರು ಪುರಜನರೂ ರಿಂಗಣವನ್ನು ಸುತ್ತುಗಟ್ಟಿ ನಿಂತಿದ್ದರು. ಬೇರೆ ಸೆರೆಯಾಳುಗಳನ್ನು ಬೇರೆ ಸಿಂಹಗಳು ಹರಿದು ತಿನ್ನುವದನ್ನು ನೋಡಿ ಈ ಜನ ಕೈತಟ್ಟಿ ಕೇಕೆ ಹಾಕುತ್ತಿದ್ದರು.

ಅಂಡ್ರೊಕ್ಲಿಸನನ್ನು ತಂದು ಕಣದಲ್ಲಿ ನಿಲ್ಲಿಸಿದರು. ಆತನ ಕೈಕಾಲುಗಳಿಗೆ ದಪ್ಪ ದಪ್ಪ ಸಂಕೋಲೆಗಳನ್ನು ಬಿಗಿದಿದ್ದರು. ಸಿಪಾಯಿಯರು ಅವನ್ನು ಕಳಚಿದರು. ಅಷ್ಟರಲ್ಲಿ ಒಂದು ಕರಳು ಹಿಚುಕುವಂಥ ಕರಾಳ ಆರ್ಭಟೆ ಕೇಳಿಸಿತು. ಕಣದ ಒಂದು ತುದಿಯಿಂದ ಒಂದು ಪ್ರಚಂಡ ಸಿಂಹವು ಧುಮ್ಮಿಕ್ಕಿತು. ಅದು ಆರ್ಭಟಿಸುತ್ತ ಮುಂದರಿಯಿತು. ಅದನ್ನು ಅಡವಿಯಿಂದ ಹಿಡಿದು ತಂದು ಆಹಾರವಿಲ್ಲದೆ ಕೆಲವು ದಿನ ಇಡಲಾಗಿತ್ತು ನರಬಲಿಯ ಸಲುವಾಗಿ.

ಆಯಾಲ ಕೆದರಿ ತೂರಾಡಿಸುತ್ತ ಕೆಂಗಣ್ಣ ಕಿಡಿ ಕಾರುತ್ತ ಕೋರೆಯ ಹಲ್ಲುಗಳನ್ನು ಕಿರಿದು ಬಾಯಿ ಕಿಸಿದು ಬೊಬ್ಬಿರಿಯುತ್ತ ಆ ಸಿಂಹ ನೇರವಾಗಿ ನುಗ್ಗಿತು, ಅಂಡ್ರೊಕ್ಲಿಸ್ ನಿಂತಲ್ಲಿ, ಜನಸ್ತೋಮವೆಲ್ಲ ಮೈಯೆಲ್ಲ ಕಣ್ಣಾಗಿ ಬಾಯಿತೆರೆದು ನಿಂತಿದ್ದರು-ಮುಂದಿನ ರೋಮಾಂಚಕರವಾದ ಕ್ರೂರ ದೃಶ್ಯವನ್ನು ನೋಡಿ ನಲಿಯಲಿಕ್ಕೆ; ಉಸಿರು ಕಟ್ಟಿಕೊಂಡು ತುದಿಗಾಲಿನ ಮೇಲೆ ನಿಂತಿದ್ದರು-ಆ ಚಿತ್ರಹಿಂಸೆಯನ್ನು ಸವಿಯಲಿಕ್ಕೆ.

ಆದರೆ ಮರುಕ್ಷಣವೇ ಅವರ ಕೌತುಕ, ಭಯ, ಚಿಂತೆ, ದಯೆ ಅಸಹ್ಯತೆ ಎಲ್ಲವೂ ಆಶ್ಚರ್ಯದಲ್ಲಿ ಕರಗಿಹೋಯಿತು. ಜನ ತಮ್ಮ ಕಣ್ಣನ್ನು ತಾವೇ ನಂಬದಾದರು. ಏಕೆಂದರೆ ತನ್ನ ಭಕ್ಷ್ಯದ ಮೇಲೆ ಏರಿಹೋಗಿ ಮುರಿದು ಬೀಳುವ ಬದಲು ಆ ಸಿಂಹ ಒಮ್ಮೆಲೇ ಅಂಡ್ರೊಕ್ಲಿಸನ ಕಾಲಿಗೆ ಬಿದ್ದು ಬಾಲ ಗುಂಡಾಡಿಸುತ್ತ ಒಡೆಯನನ್ನು ಕಂಡ ನಂಬಿಗೆಯ ನಾಯಿಯಂತೆ, ತಾಯನ್ನು ಕಂಡ ಮಗುವಿನಂತೆ ನಲಿದಾಡುತ್ತಿತ್ತು. ಅವನ ಸುತ್ತ ಸುಳಿದಾಡುತ್ತಿತ್ತು. ಅವನ ಕೈಕಾಲು ಮುದ್ದಿನಿಂದ ನೆಕ್ಕುತ್ತಿತ್ತು.

ಆ ಸಿಂಹಕ್ಕೆ ಹತ್ತಿರ ಬಂದೊಡನೆ ಅಂಡ್ರೊಕ್ಲಿಸನ ಗುರುತು ಸಿಕ್ಕಿತು. ಆ ಸಿಂಹ ಅವನು ಮುಳ್ಳು ಕಿತ್ತು ಮದ್ದು ಮಾಡಿ ಪ್ರಾಣ ಉಳಿಸಿದ್ದೇ ಸಿಂಹ, ಅತ ತನ್ನ ಪ್ರಾಣ ಉಳಿಸಿದ ಗವಿಯ ಸಂಗಾತಿ ಎಂದು ಆ ಕಾಡು ಪ್ರಾಣಿಯು ಜ್ಞಾಪಿಸಿಕೊಂಡಿತು. ಅಂಡ್ರೊಕ್ಲಿಸನಿಗೂ ಇದೊಂದು ಪವಾಡವೆನಿಸಿತು. ಆ ಸಿಂಹ ತನ್ನ ಅಡವಿಯ

ಒಡನಾಡಿಯೆಂದು ಅವನಿಗೂ ಕಲ್ಪನೆಯಿದ್ದಿಲ್ಲ. ತನ್ನ ಉಪಕಾರಕರ್ತನನ್ನು ಆ ಹಿಂಸ್ರ ಪಶುವು ಮರೆಯಲಿಲ್ಲ.

ಈ ಚಮತ್ಕಾರವನ್ನು ಕಂಡು ಸಮಸ್ತ ಸಭೆಯು ತಬ್ಬಿಬ್ಬಾಯಿತು. ಇದು ಎಲ್ಲರಿಗೂ ಅಪೂರ್ವ ಅದ್ಭುತ ಅನುಭವ. ಸಭಾಂಗಣವು ಹರ್ಷೋದ್ಗಾರಗಳಿಂದ ಗಡುಚಿಕ್ಕಿತು. ದೊರೆ ಎದ್ದು ನಿಂತು ಕೂಗಿ ಸದ್ದು ಅಡಗಿಸಿದನು. ಮತ್ತು ಅಂಡ್ರೊಕ್ಲಿಸನಿಗೆ ಈ ವಿಚಿತ್ರ ಘಟನೆಯ ಅರ್ಥವೇನೆಂದು ಕೇಳಿದನು. ಅಂಡ್ರೊಕ್ಲಿಸ್ ಅತಿ ನಮ್ರತೆಯಿಂದ ತನ್ನ ಹಾಗೂ ಆ ಸಿಂಹದ ಋಣಾನುಬಂಧ ಕೂಡಿಬಂದ ವೃತ್ತಾಂತವನ್ನು ಸಾದ್ಯಂತವಾಗಿ ಅರಿಕೆ ಮಾಡಿಕೊಂಡನು.

ದೊರೆಗೆ ಪರಮಾಶ್ಚರ್ಯ, ಕಾಡುಪ್ರಾಣಿಯಲ್ಲಿಯೂ ಹಿಂಸ್ರಶ್ವಾಪದದಲ್ಲಿಯೂ ಇಂಥ ಕೃತಜ್ಞತೆಯ ಭಾವನೆ! ಎಂದು. ಸಭೆಯೆಲ್ಲ ಆ ದಯೆಯ ಪವಾಡದ ಕಥೆ ಕೇಳಿ, ಕಂಣಾರೆ ಕಂಡು ಧನ್ಯರಾದರು. ಮಾನವತೆಯ ಮಹಿಮೆಗೆ ಅವರು ತಲೆದೂಗಿದರು. ತಲೆಬಾಗಿದರು. ಅಂಡ್ರೊಕ್ಲಿಸನ ಸಾತ್ವಿಕ ಸ್ವಭಾವಕ್ಕೆ ಮೆಚ್ಚಿ ಸಬೆಯು ಅವನನ್ನು ಸ್ವತಂತ್ರ ನಾಗರಿಕನಾಗಿ ಸಾರಬೇಕೆಂದು ದೊರೆಗೆ ಏಕಕಂಠದಿಂದ ಕೂಗಿ ಕೇಳಿಕೊಂಡಿತು. ದೊರೆ ಹಾಗೆಯೇ ತೀರ್ಮಾನಿಸಿದನು.

“ಇನ್ನೂ ನಿನ್ನ ಬಯಕೆ ಏನು?” — ದೊರೆ ಅಂಡ್ರೊಕ್ಲಿಸ್‌ನಿಗೆ ಕೇಳಿದನು.

“ಇನ್ನೇನಿಲ್ಲ. ಈ ಸಿಂಹ ನನ್ನ ಬಾಳಿನ ಸಂಗಾತಿ, ಎರಡು ಸಲ ನನ್ನ ಜೀವವನ್ನು ಉಳಿಸಿದ ಗೆಳೆಯ. ನನ್ನ ದುಃಖದಲ್ಲಿ ನನ್ನ ಜತೆಗೆ ಇದ್ದವನು ಈಗ ನನ್ನ ಸುಖದಲ್ಲಿ ನನ್ನ ಸಂಗಡವೇ ಇರಲಿ.”

ದೊರೆ 'ತಥಾಸ್ತು' ಎಂದ, ಅಂದಿನಿಂದ ಅಂಡ್ರೊಕ್ಲಿಸ್ ಹೋದಲ್ಲಿ ಬಂದಲ್ಲಿ ಎಲ್ಲಿಯೂ ಆ ಪ್ರಚಂಡ ಸಿಂಹವು ಅವನನ್ನು ಹಿಂಬಾಲಿಸುತ್ತಿತ್ತು- ಸಾಕಿದ ಮುದ್ದು ಪ್ರಾಣಿಯಂತೆ.

## ೭.ಹೆಣ್ಣಿನ ದೌರ್ಬಲ್ಯ

ಪುರಾತನ ಕಾಲದಲ್ಲಿ ಗ್ರೀಸ್ ದೇಶದಲ್ಲಿ ಒಬ್ಬ ದೊರೆ ಇದ್ದನು. ಅವನಿಗೆ ಒಬ್ಬ ದೊರೆಸಾನಿ ಅಂದರೆ ರಾಣಿ. ಆ ರಾಜದಂಪತಿಗೆ ಸಕಲ ಭೋಗ ಭಾಗ್ಯಗಳೂ ಇದ್ದವು. ಆದರೆ ಒಂದೇ ಕೊರತೆ ಅವರ ಕರುಳನ್ನು ಕೊರೆಯುತ್ತಿತ್ತು. ಅವರಿಗೆ ಮಕ್ಕಳಿದ್ದಿಲ್ಲ. ಮುಂದೆ ಪಟ್ಟಕ್ಕೆ ಅಧಿಕಾರಿಯಾಗಲು ಒಂದು ಗಂಡು ಮಗು ಅವರಿಗೆ ಬೇಕಿತ್ತು.

ಆದರೆ ರಾಣಿಯು ಒಂದು ಹೆಣ್ಣು ಮಗುವಿಗೆ ಜನ್ಮ ಕೊಟ್ಟಳು. ಆಗ ರಾಜನಿಗೆ ಅತ್ಯಂತ ನಿರಾಶೆಯಾಯಿತು; ದುಃಖವಾಯಿತು. ಆತನಿಗೆ ದೈವದ ಮೇಲೆಯೇ ಪ್ರಚಂಡ ಕ್ರೋಧ ಉಂಟಾಯಿತು. ಮನಸ್ಸು ಕಲ್ಲಾಗಿಸಿಕೊಂಡು ಆ ರಾಜನು ಒಂದು ಮಧ್ಯರಾತ್ರಿಯಿಂದ ದೂರ ಬೆಟ್ಟದಲ್ಲಿ ಬಿಟ್ಟು ಬಂದನು. ಅಲ್ಲಿಯ ಕಾಡಿನ ಕರಡಿಗಳ ಬಾಯಿಗೆ ಕೂಸು ಬೀಳಲಿ-ಎಂದು.

ಆದರೆ ಕೂಸು ಒಂದು ಹೆಣ್ಣು ಕರಡಿಯ ಕಣ್ಣಿಗೆ ಬಿತ್ತು. ಅದು ಕಾಡುಪಶು, ಆದಾಗ್ಯೂ ಆ ಕೂಸಿನ ತಂದೆಗಿಂತ, ದೊರೆಗಿಂತ ಅಂತಃಕರಣಿ ಆಗಿತ್ತು. ಅದು ಕೂಸಿನ ಕುರಿತು ಕನಿಕರ ತಾಳಿ ಆ ಅಸಹಾಯವಾಗಿ ಅಳುತ್ತಿರುವ ಪುಟ್ಟ ಜೀವವನ್ನು ತನ್ನ ಗವಿಗೆ ಒಯ್ದು ಸಾಕಿ, ತನ್ನ ಮರಿಗಳ ಸಂಗಡವೆ ಅದನ್ನೂ ಬೆಳೆಸಿತು.

ಆ ಹೆಣ್ಣು ಕೂಸಿಗೆ ಮುಂದೆ ಅಟ್ಲಾಂಟಾ ಎಂದು ಹೆಸರು ಬಂದಿತು. ಕಾಡಿನಿಂದ ನಾಡಿಗೆ ಬಂದು ನೆಲೆಸಿದಾಗ.

ಬಹಳ ವರ್ಷ ಅಟ್ಲಾಂಟಾ ಅಡವಿಯಲ್ಲಿಯೇ ಬೆಳೆದಳು. ಅಲೆದಾಡಿದಳು ಬೇಟೆ ಆಡಿದಳು. ಕಾಡಿನ ಇತರ ಮಿಗಗಳ ಒಡನಾಡಿ ಆದಳು. ಅವಳು ಆ ಎಳವಯಸ್ಸಿನಲ್ಲಿಯೂ ಜಿಂಕೆಯಂತೆ ಬಂಡೆಯಿಂದ ಬಂಡೆಗೆ ಹಾರುತ್ತಿದ್ದಳು.

ಇಣಚಿಯಂತೆ ಮರವೇರುತ್ತಿದ್ದಳು. ಕಾಡುಕುದುರೆಯಂತೆ ಓಡುತ್ತಿದ್ದಳು. ಭಯವಂಬುದೆ ಅವಳು ಅರಿಯಳು.

ಒಂದು ದಿನ ಬೇಟೆಗಾರರ ಒಂದು ಗುಂಪು ಆ ಅಡವಿಗೆ ಬಂದಿತು. ಕರಡಿಯ ಗವಿಯಲ್ಲಿ ಮಲಗಿ ನಿದ್ದಹೋದ ಈ ಚೆಲುವೆಯಾದ ಬಾಲಿಕೆಯನ್ನು ಅವರು ಕಂಡರು. ಅವರು ಅವಳನ್ನು ಎತ್ತಿಕೊಂಡು ಹೋಗಿ ತಮ್ಮಲ್ಲಿ ಸಾಕಿ ಸಲಹಿದರು. ಅವರಿಂದ ಅಟ್ಲಾಂಟಾ ಬಿಲ್ಲುಬಾಣಗಳನ್ನು ಬಳಸಲಿಕ್ಕೂ ಭಲ್ಲೆ ಬರ್ಜಿಗಳನ್ನು ಎಸೆಯಲಿಕ್ಕೂ ಕಲಿತಳು.

ಅಟ್ಲಾಂಟಾ ಹೂಸ ಹರೆಯದಲ್ಲಿ ಹೆಜ್ಜೆ ಇಟ್ಟಳು. ದಿನದಿನವೂ ತಿಂಗಳ ಬಿಂಬದಂತೆ ಚೆಲುವು ತುಂಬಿ ಕಳೆಯೇರಿ ಆಕೆ ಬೆಳೆದಳು. ಅವಳಲ್ಲಿ ಹುಲಿಯ ಚಪಲತೆ ಮತ್ತು ಬೆಡಗು ಇದ್ದಿತು. ಜೊತೆಗೆ ಸಿಂಹದ ಧೈರ್ಯ ಸಾಹಸವೂ ಇತ್ತು. ಬೆಟ್ಟದ ದೇವದಾರು ಮರದಂತೆ ನೀಟಾಗಿ ಚಿಗರಿಯಂತೆ ವೇಗವುಳ್ಳವಳಾಗಿ ಅಟ್ಲಾಂಟಾ ಬೆಳೆದಳು. ಕ್ರಮೇಣ ಆ ಹುಂಬ ಬೇಟೆಗಾರರನ್ನು ಅವಳು ರಾಣಿಯಂತೆ ಆಳಕತ್ತಿದಳು. ಅವಳ ಮಾತನ್ನು ಮೀರುವ ಸಾಹಸ ಯಾರಿಗೂ ಇದ್ದಿಲ್ಲ. ಅವಳು ಅಂದದ್ದೇ ಅವರಿಗೆ ಅಪ್ಪಣೆ. ಬೇಟೆಯ ಪ್ರಸಂಗಗಳಲ್ಲೆಲ್ಲ ಸುತ್ತಲಿನ ಸೀಮೆಯ ಜನವೆಲ್ಲ ಅಟ್ಲಾಂಟಳ ಪರಾಕ್ರಮದ ಪವಾಡಗಳನ್ನು ಕೊಂಡಾಡುತ್ತಿದ್ದರು. ಅವಳ ಕಲಿತನದ ಕಥೆಗಳನ್ನು ಮನೆಮನೆಯಲ್ಲಿ ಮಂದಿ ಹೇಳುತ್ತಿದ್ದರು.

ಒಮ್ಮೆ ಈ ಬೇಟೆಗಾರರ ಪಡೆ ಒಂದು ಕಾಡುಹಂದಿಯನ್ನು ಬೇಟೆಯಾಡಲು ಹೋಯಿತು. ಆ ಹಂದಿ ಆ ಸುತ್ತಲಿನ ಹಳ್ಳಿಗಳ ಬೆಳೆಗಳನ್ನು, ದನ-ಕುರಿಗಳನ್ನು ನಾಶಮಾಡಿ ಹಾವಳಿ ಎಬ್ಬಿಸಿತ್ತು. ಅದು ಬರೆ ಹಂದಿಯಲ್ಲ ಒಂದು ವರಾಹಾಸುರ ಎಂಬ ಭಾವನೆ ಜನರಲ್ಲಿ ಮೂಡಿತ್ತು. ಅದರ ದಾಡೆ ಎಷ್ಟು ಪ್ರಖರ ಕಣ್ಣು ಎಷ್ಟು ಉರಿಪಿಂಡ, ರೋಮವೆಷ್ಟು ಬಿರುಸು-ಮೊಣಚು-ಮೈ ಎಷ್ಟು ಪ್ರಚಂಡ!

ಆದರೆ ಅಟ್ಲಾಂಟಾ ಆ ಹಂದಿಗೆ ಹೆದರಲಿಲ್ಲ. ಅವಳ ಬರ್ಚಿಯ ಅಲುಗೇ ಅದನ್ನು ನೆಲಕ್ಕೆ ಉರುಳಿಸಿತು. ಎದೆಯನ್ನು ಭೇದಿಸಿ ನೆತ್ತರದ ಜೀಕಳಿ ಹಾರಿಸಿತು. ಆಗ ಒಬ್ಬ ಬೇಟೆಗಾರ ಮುಂದೆ ಬಂದು ಧೈರ್ಯ ತಂದುಕೊಂಡು ಆ ಹಂದಿಯ ತಲೆಯನ್ನು ಕಡಿದು ಅದನ್ನು ಅಟ್ಲಾಂಟಾಳಿಗೆ ಕಾಣಿಕೆಯಾಗಿ, ಆ ಗೆಲುವಿನ ಗುರುತಿಗಾಗಿ ಅರ್ಪಿಸಿದನು.

ಆಗಂತೂ ಅಟ್ಲಾಂಟಾಳ ಕೀರ್ತಿ ಇನ್ನಷ್ಟೂ ಹಬ್ಬಿತು. ದೇಶದಾದ್ಯಂತ ಎಲ್ಲರೂ ಅವಳನ್ನು ಹೊಗಳುವವರೇ! ಆಗ ಅವಳ ತಂದೆಯ ರಾಜನ ಕವಿಗೂ ಮಗಳ ಮಹಿಮೆ ಮುಟ್ಟಿತು. ಆಗ ಆತನಿಗೆ ತಾನು ಹಿಂದೆ ಕಾಡಿನಲ್ಲಿ ಕೈಬಿಟ್ಟು ಒಗೆದು ಬಂದ ಮಗಳ ಬಗೆಗೆ ಮಮತೆ ಹುಟ್ಟಿತು. ಮಗನಿಗಿಂತಲೂ ಈ ಮಗಳು ಮಿಗಿಲು ಎಂದು ಆತನಿಗೆ ಅನಿಸಿತು. ಅಟ್ಲಾಂಟಾಳನ್ನು ತಿರುಗಿ ಅರಮನೆಗೆ ಕರೆಯಿಸಿಕೊಳ್ಳಲು ಸಡಗರದ ಪರಿವಾರವನ್ನು ಕಳುಹಿಸಿದನು.

ಅಟ್ಲಾಂಟಾ ತನ್ನ ಆ ಕಾಡಾಡಿ ಒಡನಾಡಿಗಳಾದ ಬೆಟ್ಟದಾಳುಗಳನ್ನು ಬೇಡರ ಗುಂಪನ್ನು ಬೀಳ್ಕೊಂಡು ಅರಮನೆಗೆ ಬಂದಳು.

೨

ಅರಮನೆಯ ಐಶ್ವರ್ಯದಲ್ಲಿ ಅವಳ ಸೌಂದರ್ಯವು ಎಂದಿಗಿಂತ ಮಿಗಿಲಾಗಿ ಮೆರೆಯಿತು. ರೇಶಿಮೆಯ ವಸ್ತ್ರ ರತ್ನಾಭರಣಗಳಲ್ಲಿ ಅವಳ ರೂಪಲಾವಣ್ಯ ಹೊಸ ಕಾಂತಿಯನ್ನೂ, ಸೊಬಗನ್ನೂ ಸೂಸಹತ್ತಿತು. ಅವಳ ರೂಪ ಗುಣಗಳ ಖ್ಯಾತಿಯ ನೆರೆಯ ರಾಜಕುಲಗಳಿಗೆ ಹಚ್ಚಿತು. ಅನೇಕ ಸಿರಿವಂತ ಒಳ್ಳುಲದ ಯುವಕರು ಅವಳ ಪಾಣಿಗ್ರಹಣಕ್ಕಾಗಿ ಆತುರರಾದರು. ಅಟ್ಲಾಂಟಳ ಅರಮನೆಗೆ ಇಂಥ ಆರಾಧಕರು ಮುತ್ತಿಗೆ ಹಾಕಿದರು.

ಆದರೆ ಅಟ್ಲಾಂಟಾ ಅವರೆಲ್ಲರನ್ನೂ ಧಿಃಕರಿಸಿ ನಿರಾಕರಿಸಿ ಕೇವಲ ತನ್ನ ಮೃಗಯಾವಿಹಾರ, ವಿರೋಚಿತ ಆಟಪಾಟಗಳಲ್ಲಿಯೇ ತೊಡಗಿರಹತ್ತಿದಳು.

ಹೀಗಾದರೆ ಹೇಗೆ? ತಂದೆಗೆ ತಲೆಬೇಸರ. ಹೆಣ್ಣಿಗೆ ಈ ಪುಂಡತನ ಒಪ್ಪುವದೇ? ಈಕ ಒಬ್ಬ ಯೋಗ್ಯ ಗಂಡನನ್ನು ವರಿಸಬೇಡವೇ? ಆದ್ದರಿಂದ ರಾಜನು ಮಗಳನ್ನು ಪರಿಪರಿಯಿಂದ ಬೋಧಿಸಿ ಮದುವೆಗೆ ಬಲವಂತಪಡಿಸಿದನು. “ಮಗೂ, ನೀನು ತುಂಬ ಸೂಟಿ, ಒಮ್ಮೆ ಕಾಡುಜಿಂಕೆಯಂತೆ ಹಾರಾಡುತ್ತಿರುವಿ; ಇತ್ತ ನಾನು ಮುದುಕನಾಗುತ್ತ ನಡೆದಿದ್ದೇನೆ. ನಾನು ಕಣ್ಣು ಮುಚ್ಚುವ ಮೊದಲು ಒಮ್ಮೆ ನೀನು ಮದುವೆಯಾದದ್ದು ನೋಡಬೇಡವೇ?”

ತಂದೆಯ ಮಾತನ್ನು ಅಟ್ಲಾಂಟಾ ಮೊದಮೊದಲು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಏನಾದರೂ ನಗೆಯಲ್ಲಿಯೇ ತೇಲಿಸಿಬಿಡುತ್ತಿದ್ದಳು. ಆದರೆ ಕೊನೆಗೊಮ್ಮೆ ಅವಳು ಮುದುಕನ ಒತ್ತಾಯಕ್ಕೆ ಒಲಿದಳು. ಆದರೆ ಒಂದು ಶರತ್ತು ಹಾಕಿದಳು.

“ಅಪ್ಪಾ, ಒಂದು ಸ್ವಯಂವರವನ್ನು ಇಡು, ಸ್ವಯಂವರದ ಪಣ ಓಡುವ ಶರ್ಯತ್ತು, ನನ್ನ ಕೈ ಹಿಡಿಯಲು ಬರುವ ಕಲಿ ನನ್ನೊಂದಿಗೆ ಓಡಬೇಕು. ನನ್ನನ್ನು ಓಟದಲ್ಲಿ ಹಿಂದೆ ಹಾಕಬೇಕು. ಹಾಗೆ ಗೆದ್ದರೆ ನಾನು ಅವನನ್ನು ವರಿಸುವೆನು. ಸೋತರೆ ಆತ ಪ್ರಾಣಕ್ಕೆ ಎರವಾಗಬೇಕು. ಇದೊಂದು ಶರತ್ತಿನ ಮೇರೆಗೆ ನಾನು ಮದುವೆಗೆ ಒಪ್ಪುವೆ.”

ತಂದೆ ಒಪ್ಪಿದನು. ಸ್ವಯಂವರವು ಏರ್ಪಟ್ಟಿತು. ನೆರೆಕರೆಯಿಂದ ಅನೇಕ ರೂಪಸುಂದರ ವೀರ ಯುವಕರು ಅಟ್ಲಾಂಟಳನ್ನು ಗೆಲ್ಲಲು ಬಂದರು. ಅವಳೊಂದಿಗೆ ಶರ್ಯತ್ತಿನಲ್ಲಿ ಓಡಿದರು ಮತ್ತು ಹಿಂದೆ ಬಿದ್ದರು, ಸತ್ತು ಬಿದ್ದರು. ಅಟ್ಲಾಂಟಾ ಕೈಯಲ್ಲಿ ಬರ್ಚಿಯನ್ನು ಹಿಡಿದುಕೊಂಡೇ ಓಡುತಿದ್ದಳು. ಅವಳನ್ನು ಸರಿಗಟ್ಟಲು ಯಾರಿಗೂ ಆಗುತ್ತಿರಲಿಲ್ಲ. ಅವಳೇ ತೇರ್ಗಡೆಗೆ ಮೊದಲು ಮುಟ್ಟಿ ಹಿಂಬಾಲಿಸಿ ಬರುವ

ಯುವಕನಿಗಾಗಿ ಕಾಯುತ್ತಿದ್ದಳು. ಆತ ಬಂದು ತಲುಪಿದೊಡನೆ ಅವನೆದೆಗೆ ಬರ್ಚಿಯಿಂದ ತಿವಿದು ಕೊಂದುಬಿಡುತ್ತಿದ್ದಳು.

ಇಷ್ಟು ನಿಷ್ಠುರವಾಗಿ ನಿರ್ದಯವಾಗಿ ನಡೆದರೂ ಅಟ್ಲಾಂಟಾಳ ರೂಪಕ್ಕೆ ಮರುಳಾಗಿ ದೀಪಕ್ಕೆ ಪತಂಗಗಳು ಎರಗುವಂತೆ ತರುಣ ವೀರರು ಈ ಓಟದ ಪಂದ್ಯದಲ್ಲಿ ಭಾಗವಹಿಸಲು ಬರುತ್ತಿದ್ದರು. ಈ ಸೌಂದರ್ಯ ನಿಧಿಯನ್ನು ಪಡೆಯಲಿಕ್ಕೆ ತಮ್ಮ ಪ್ರಾಣವನ್ನು ಪಣಕ್ಕೆ ಹಚ್ಚಲೂ ಈ ಪ್ರಣಯಾರಾಧಕರು ಪರಿವೆ ಮಾಡುತ್ತಿದ್ದಿಲ್ಲ.

ಒಂದು ದಿನ ಈ ಸ್ವಯಂವರದ ಪಂದ್ಯಕ್ಕೆ ಒಬ್ಬ ಸುಂದರಾಂಗನಾದ ಯುವಕನು ಬಂದನು. ಆತನ ಸೌಂದರ್ಯ, ಸಾಮರ್ಥ್ಯ, ಸಜ್ಜನಿಕೆ ಯಾರನ್ನೂ ಮರುಳುಗೊಳಿಸುವಂತಿತ್ತು. ಅವನ ಹೆಸರು ಹಿಪ್ಪೊಮೆನಸ್. ಆತ ಬಂಗಾರದ ಜಿಂಕೆಯಂತೆ ಜಿಗಿದು ಓಡಿ, ಜೀಕುಗಾಲಿಂದ ಗುರಿ ಮುಟ್ಟುವ ಅಟ್ಲಾಂಟಾಳ ಬಿಂಕದ ಒಯ್ಯಾರ, ಓಟದ ಬೆಡಗು-ಎಲ್ಲ ನೋಡಿ ಪೂರ್ತಿ ಮನಸೋತನು. ತಾನೂ ಅವಳೊಂದಿಗೆ ಓಡುವೆನೆಂದು ಪಣ ತೊಟ್ಟನು. ರಾಜನಿಗೂ ಹಿಪ್ಪೊಮೆನೆಸನ ಮೇಲೆ ಮರುಕ ಉಂಟಾಯಿತು. “ಬರಿದೆ ಈ ಬೆಟ್ಟದ ಕನ್ನೆಯೊಂದಿಗೆ ಒಡ್ಡು ಕಟ್ಟಿ ಜೀವವನ್ನು ಸಾವಿಗೆ ಒಡ್ಡಬೇಡ” ವೆಂದು ರಾಜನೇ ಆ ತರುಣನಿಗೆ ಬಿನ್ನವಿಸಿಕೊಂಡನು, ಆದರೆ ಹಿಪ್ಪೊಮನೆಸನ ಕೇಳಬೇಕೇ? ಆತನ ಹಟ ಇನ್ನೂ ಹೆಚ್ಚಿತು. ಅವನ ಪಂದ್ಯದ ದಿನ ನಿಶ್ಚಿತವಾಯಿತು.

ಪಂದ್ಯದ ಹಿಂದಿನ ದಿನ ಹಿಪೊಮೆನಸ್ ಅಫ್ರೋದೈತ ದೇವಿಯ ಮಂದಿರಕ್ಕೆ ಹೋಗಿ ಆ ಪ್ರೇಮದೇವತೆಗೆ ಭಕ್ತಿಭಾವದಿಂದ ಪೂಜೆ ಸಲ್ಲಿಸಿದನು. ತನಗೆ ಪಂದ್ಯದಲ್ಲಿ ಗೆಲುವು ಸಲ್ಲುವಂತೆ ಅನುಗ್ರಹಿಸೆಂದು ಪ್ರೇಮದೇವತೆಯನ್ನು ಪ್ರಾರ್ಥಿಸಿದನು. ತನ್ನ ಪ್ರಾರ್ಥನೆಗೆ ದೇವಿಯು ಪ್ರಸನ್ನಳಾಗಿ ಪ್ರಸಾದವನ್ನು ಕೊಡುವಳೋ- ಎಂದು ಹಿಪ್ಪೊಮೆನೆಸ ನಿರೀಕ್ಷಿಸುತ್ತ ನಿಂತನು ತದೇಕಚಿತ್ತನಾಗಿ.

ಸಂಜೆ ಆಯಿತು. ಕತ್ತಲೆ ಕವಿಯಿತು. ಚಂದ್ರನು ಆಕಾಶದ ಗೋಪುರವನ್ನೇರಿ ಥಳಥಳಿಸಹತ್ತಿದನು. ಬೆಳದಿಂಗಳ ಕಿರಣ ಒಂದು ಕಿಂಡಿಯಿಂದ ತೂರಿ ಬಂದು ಅಪ್ರೋದೈತ ದೇವಿಯ ವೇದಿಕೆಯ ಮೇಲೆ ಬೀಳುತ್ತಿತ್ತು. ಹಾಲಿನ ಧಾರೆಯಂತೆ ಹಿಪ್ಪೊಮೆನಸ ಅದನ್ನು ದಿಟ್ಟಿಸುತ್ತ ನಿಂತನು. ಆತ ನೋಡುತ್ತಿದ್ದಂತೆ ಆ ಬೆಳಕಿನ ಕಂಬಿಯಲ್ಲಿ ಒಂದು ಕೃತಿ ಕಾಣಿಸಿಕೊಂಡಿತು. ಪ್ರೇಮದೇವತೆಯದೇ ಆಕೃತಿ ಅದು.

ದೇವಿಯು ಪ್ರತ್ಯಕ್ಷಳಾಗಿದ್ದಳು. “ಭಕ್ತನೇ, ನಿನ್ನ ಪ್ರಾರ್ಥನೆಯನ್ನು ಅನುಗ್ರಹಿಸಿದ್ದೇನೆ. ಇಕೋ, ಈ ಮೂರು ಬಂಗಾರದ ಸೇಬುಹಣ್ಣುಗಳನ್ನು, ಅವುಗಳನ್ನು ನಾಳಿನ ಪಂದ್ಯದಲ್ಲಿ ಜಾಣತನದಿಂದ ಉಪಯೋಗಿಸು, ನಿನಗೆ ಗೆಲುವಿನ ದಾರಿ ಕಾಣಿಸಲಿಕ್ಕೆ, ನೀನು ಪಣವನ್ನೂ ಪೆಣ್ಣನ್ನೂ ಗೆಲ್ಲುವಿ.”

ಆಕೃತಿ ಅಂತರ್ಧಾನ ಹೊಂದಿತು. ತಿಂಗಳ ಬೆಳಕಿನ ಕಿರಣ ಒಂದೇ ಚೆಲ್ಲಿತ್ತು. ಮಂಡಿಯೂರಿ ತಲೆಬಾಗಿ ಹಿಪ್ಪೊಮೆನೆಸ್ ಎದ್ದನು. ಇದೇನು ಕನಸೋ? ಅಲ್ಲ ಕಾಲ ಹತ್ತಿರ ಮೂರು ಸೇಬುಗಳ ಒಂದೊಂದು ಬಂಗಾರದ್ದು, ಅಪ್ರೋದೈತದೇವಿ ನಿಜವಾಗಿಯೂ ಅವನನ್ನು ಅನುಗಹಿಸಿದ್ದಳು.

ಆತ ಬಂಗಾರದ ಹಣ್ಣುಗಳನ್ನು ಎತ್ತಿಕೊಂಡು ಗುಡಿಯಿಂದ ಹೊರಬಿದ್ದನು. ಆಗಲೆ ಮರುದಿನದ ಮುಂಜಾವು ಮೂಡಿತ್ತು. ಹಿಪ್ಪೊಮೆನಸ್ ಅರಮನೆಯತ್ತ ನಡೆದನು-ಅಟ್ಲಾಂಟಾ ಓಟದ ಪಂದ್ಮಕ್ಕಾಗಿ ಕಾಯುತ್ತ ನಿಂತ ರಾಜಾಂಗಣದ ಬಯಲಿಗೆ.

ರಾಜಾಂಗಣದ ಇಬ್ಬದಿಗೂ ಜನಸಂದಣಿ ಕಿಕ್ಕಿರಿದಿದ್ದಿತು. ಎಲ್ಲರ ಕಣ್ಣು ಹಿಪ್ಪೊಮೆನೆಸ್‌ನ ಮೇಲೆ-ಪಾಪದ ಪ್ರಾಣಿ ಸುಮ್ಮನೆ ಸಾಯಲು ಬಂದಿದ್ದಾನೆ! ಎಂಬ ಮರುಕ ಅವರ ಕಣ್ಣಿನಲ್ಲಿ.

ಹಿಪ್ಪೊಮೆನೆಸ್ ಉತ್ಸಾಹದ ಹೆಜ್ಜೆ ಇಡುತ್ತ ಮಿಂಚುನೋಟದಿಂದ ಓಟದ ಬಯಲಿಗೆ ಬಂದನು. ಅಟ್ಲಾಂಟಾ ಇದೊಂದು ಹೊಸ ಹುಚ್ಚು ಕುರಿಮರಿ ಎಂಬ ತಿರಸ್ಕಾರದ ಕಣ್ಣಿನಿಂದ ಅವನನ್ನು ಒಮ್ಮೆ ನೋಡಿದಳು.

ಕಹಳೆ ಆಯಿತು. ಆ ಸೂಚನೆ ಇಬ್ಬರೂ ಓಡತೊಡಗಿದರು-ಹೆದೆ ಬಿಟ್ಟು ಹಾರಿದ ಎರಡು ಬಾಣಗಳಂತೆ ಎಲ್ಲರಿಗೂ ಅನಿಸಿತು. ಈ ಸಲ ಅಟ್ಲಾಂಟಳಿಗೆ ಒಬ್ಬ ಸರಿಸಾಟಿ ಸಿಕ್ಕನೆಂದು, ಆದರೆ ಕ್ರಮೇಣ ಅಟ್ಲಾಂಟಾ ಮುಂದಾದಳು. ಹಿಪ್ಪೊಮೆನೆಸ್ ಹಿಂದೆ ಬೀಳಹತ್ತಿದ.

ಆಗ ಮನಸ್ಸಿನಲ್ಲಿಯೇ ಅಫ್ರೋದೈತ ದೇವಿಯನ್ನು ಸ್ತುತಿಸಿ ಅವನು ಒಂದು ಬಂಗಾರದ ಸೇಬನ್ನು ಮೆಲ್ಲಗೆ ಉರುಳಿಸಿದನು-ಅಟ್ಲಾಂಟಾ ಓಡಿ ಬರುವ ದಾರಿಯಲ್ಲಿ.

ಎಂಥ ದಿಟ್ಟೆ ಗಂಡುಬೀರಿ, ಏನಾದರೇನು? ಕೊನೆಗೂ ಅಟ್ಲಾಂಟಾ ಒಂದು ಹಣ್ಣು, ಹೆಣ್ಣಿನ ಕುತೂಹಲಕ್ಕೆ ಕೊನೆಯಿಲ್ಲ-ಅದೂ ಬಂಗಾರದ ಚೆಂಡು ಕಂಡಾಗ! ಆಕೆ ಓಟ ಮರೆತಳು. ಫಕ್ಕನೆ ನಿಂತಳು. ಬಾಗಿ ಆ ಚಿನ್ನದ ಸೇಬುಹಣ್ಣನ್ನು ಎತ್ತಿಕೊಂಡಳು. ಅದರ ಚೆಲುವನ್ನು ಪರಾಂಬರಿಸಿದಳು. ಮತ್ತೆ ಹಿಪ್ಪೊಮನೆಸ್‌ನನ್ನು ಹಿಂದೆ ಹಾಕಲಿಕ್ಕೆ ಓಡಿದಳು.

ಆತ ಮೊಲದಂತೆ ಓಡಿದರೆ, ಈಕೆ ಚಿಗರೆಯಂತೆ ಓಡಿದಳು. ಮಾರೀಚ ಮೃಗದಂತೆ ಅವಳ ವೇಗಕ್ಕೆ ತಡೆಯೇ ಇದ್ದಿಲ್ಲ. ಕಾಲಿಗೆ ದಣಿವೇ ಇದ್ದಿಲ್ಲ ಮತ್ತೆ ಅವಳು ಅವನನ್ನು ಹಿಂದೆ ಹಾಕಿದಳು.

ಆದರೆ ಅದೇ ಹೊತ್ತಿಗೆ ಹಿಪ್ಪೊಮೆನೆಸ್ ಮತ್ತೊಂದು ಸೇಬುಹಣ್ಣನ್ನು ಉರುಳಿಸಿದನು. ಅದು ಅಟ್ಲಾಂಟಾಳ ಮುಂದೆ ಹಾಯಿತು. ಆಗಲೂ ಪಂದ್ಯವನ್ನು ಮರೆತು ಆ ರಾಜಕನ್ನೆ ಚಿನ್ನದ ಹಣ್ಣಿನತ್ತ ಆಕರ್ಷಿತಳಾದಳು. ಹಿಂದಿನಂತೆ ಅದನ್ನು ಎತ್ತಿ ನೋಡಿ ತೆಗೆದುಕೊಂಡಳು, ಅಷ್ಟರಲ್ಲಿ ಹಿಪ್ಪೊಮೆನೆಸ್ ಮುಂದೆ ಮುಟ್ಟಿದ್ದನು.

ಮತ್ತೆ ಅಸಮ ಸಾಹಸದ ಅಟ್ಲಾಂಟಾ ಅವನನ್ನು ಬೆನ್ನಟ್ಟಿದಳು. ಮತ್ತೆ ಹಿಮ್ಮೆಟ್ಟಿದಳು. ಪಂದ್ಯದ ತೇರ್ಗಡೆಯ ತಾಣ ಕಣ್ಣ ಇದುರಿಗೇ ಬಿಂದಿತು. ಗುರಿಯ ಗೆರೆಯಿಂದ ಕೆಲವು ಮಾರು ಇರುವಾಗಲೇ ಹಪ್ಪೊಮೆನೆಸ್ ಮೂರನೆಯ ಹಣ್ಣನ್ನು ನೆಲಕ್ಕೆ ಬಿಟ್ಟನು.

ಆಗಲೂ ಅಟ್ಟಾಂಟಾಳ ಹೆಣ್ಣು ಹೃದಯಕ್ಕೆ ಆ ಚೆಂದ ಚಿನ್ನದ ಹಣ್ಣಿನ ಮೋಹವನ್ನು ತಡೆಯುವುದು ಆಗಲಿಲ್ಲ. ಮತ್ತೆ ತಡೆದುನಿಂತು ಬಾಗಿ ಅದನ್ನು ಹೆಕ್ಕಿಕೊಂಡು ಓಡಲು ಹೊರಡುವಾಗ ಸಾವಿರ ಸಾವಿರ ಕೊರಳು ಬೊಬ್ಬಿರಿದವು. ಬಾನು ಬಿರಿಯುವಂತೆ "ಶಾಭಾಸ, ಹಿಪ್ಪೊಮೆನೆಸ್! ಶಾಭಾಸ್ ಹಿಪ್ಪೊಮೆನೆಸ್!"

ಹಿಪ್ಪೊಮೆನೆಸ್ ತೇರ್ಗಡೆಯನ್ನು ತಲುಪಿದ್ದನು ಮತ್ತು ತನ್ನ ಎರಡೂ ತೋಳು ಚಾಚಿ ನಿಂತಿದ್ದ ಅಟ್ಲಾಂಟಾಳನ್ನು ಎದೆಗೆ ಅವಚಿಕೊಳ್ಳಲಿಕ್ಕೆ ಅತುರನಾಗಿ ಹೀಗೆ ಅಪ್ರತಿಮ ವೀರನನ್ನೇ ಮದುವೆಯಾಗಬೇಕೆಂದಿದ್ದ ನಿರ್ಭಯ ನಿರಾತಂಕ ಸಾಹಸಿಯಾದ ಅಟ್ಲಾಂಟಾ ಅದಮ್ಯ ವೀರ ಹಿಪ್ಪೊಮೆನೆಸ್‌ನನ್ನು ವರಿಸಬೇಕಾಯಿತು.

ಆದರೆ ಅಟ್ಲಾಂಟಾಳನ್ನು ಗೆದ್ದದ್ದು ಯಾರು? ಹಿಪ್ಪೊಮೆನೆಸ್‌ನ ಓಟದ ವೇಗವೇ? ಅಲ್ಲ ಅವನು ಗೆದ್ದದ್ದು ಅವಳ ಹೃದಯದ ಬಂಗಾರದ ಒಡವೆಯ ಮೋಹವನ್ನು, ಹೆಣ್ಣಿನ ಮನಸ್ಸಿನ ದೌರ್ಬಲ್ಯವನ್ನು

# ೮. ಜೋನ ಆಫ್ ಆರ್ಕ

ನಮ್ಮ ದೇಶದಲ್ಲಿ ತಮ್ಮ ರಾಜ್ಯದ ರಕ್ಷಣೆಗಾಗಿ ಬಿಚ್ಚುಗತ್ತಿಯನ್ನು ಹಿರಿದು ಜೀವದ ಹಂಗು ದೊರೆದು ಹಗೆಗಳೊಂದಿಗೆ ಹೋರಾಡಿ ರಣಾಂಗಣದಲ್ಲಿ ಮಿಂಚಿದ ಮಹಿಳೆಯರು ಅನೇಕರು ಇತಿಹಾಸವನ್ನು ಬೆಳಗಿದ್ದಾರೆ. ಒನಕೆಯ ಓಬವ್ವ, ಬೆಳವಡಿಯ ಮಲ್ಲಮ್ಮ, ಕಿತ್ತೂರ ಚೆನ್ನಮ್ಮ, ಝಾಂಸೀ ಲಕ್ಷ್ಮೀಬಾಯಿ ಇಂಥ ತೇಜಸ್ವಿನಿಯರು ಗಂಡುಗಲಿಗಳಾಗಿ ಪರಾಕ್ರಮವನ್ನೂ ಪ್ರಸಂಗಾವಧಾನವನ್ನೂ ಪ್ರಕಟಿಸಿ ಅಮರರಾಗಿದ್ದಾರೆ.

ಆದರೆ ಇಲ್ಲಿ ಬರುವ ಕಥೆ ಅವರಿಗಿಂತ ಅದ್ಭುತ ವ್ಯಕ್ತಿತ್ವದ ಹಾಗೂ ದುರಂತದ ಹೆಂಗುಲಿಯ ಬದುಕಿನದು. ಆಕೆ ಒಬ್ಬ ಹಳ್ಳಿಗಾಡು ಹುಡುಗಿ, ನಿರಕ್ಷರಸ್ಥೆ, ಹೊಲಗೆಲಸದ ಹೆಣ್ಣು ಆದರೆ ಅವಳು ಒಮ್ಮಿಂದೊಮ್ಮೆ ಏನೋ ದಿವ್ಯ ಸ್ಫೂರ್ತಿ ಸಂಚಾರವಾಗಿ ತನ್ನ ತಾಯ್ನಾಡಿನ ವಿಮೋಚನೆಗೆ ಹೋರಾಡಿ ರಾಜ್ಯಭ್ರಷ್ಟ ದೊರೆಯನ್ನು ತಿರುಗಿ ಪಟ್ಟಕ್ಕೆ ಏರಿಸಿದಳು. ನಿರ್ಜೀವ ಕಾರ್ಬನ್ನಿನ ಗಣಿಕೆ ಉಜ್ವಲವಾಗಿ ಜ್ಯೋತಿಯಾಗಿ ಬೆಳಗಿ ಮಿಂಚುವಂತೆ ತನ್ನ ದೇಹದ ಚರಿತ್ರೆಯನ್ನು ತನ್ನ ಚಾರಿತ್ರ್ಯದಿಂದ ಈಕೆ ಚಿನ್ನದ ಪುಟವೊಂದನ್ನು ತನ್ನ ರಕ್ತದಿಂದ ಬರೆದಳು. ಅಕ್ಷರಶಃ ಜ್ಯೋತಿಯಂತೆ ಉರಿದು ಹುತಾತ್ಮಳಾದಳು.

ಅವಳೇ ಜೋನ ಆಫ್ ಆರ್ಕ. ಅವಳ ಕಥೆ ಪಾಶ್ಚಾತ್ಯರ ಇತಿಹಾಸದ ಒಂದು ಪವಾಡ ಗಾಥೆ. ಹದಿನೈದನೆಯ ಶತಮಾನದ ಆರಂಭದಲ್ಲಿ ಫ್ರಾನ್ಸ ದೇಶದ ಇತಿಹಾಸವನ್ನು ರೂಪಿಸಿದ ಅಪರೂಪದ ವೀರಕನ್ನಿಕೆ. ಶೇಕ್ಸಪಿಯರನ "೬ನೆಯ ಹೆನ್ರೀ" ಎಂಬ ಐತಿಹಾಸಿಕ ನಾಟಕದಲ್ಲಿ ಜೋನಳ ಕುರಿತು ಕೆಲವು ದೃಶ್ಯ ಮೀಸಲು. ಆದರೆ ಮಿಗಿಲೆಂದುಕೊಂಡ ಜಾರ್ಜ ಬರ್ನಾರ್ಡ ಶಾ ಜೋನಳನ್ನು ಕುರಿತು ಒಂದು ನಾಟಕವನ್ನು ಬರೆದಿದ್ದಾನೆ. ಅವಳ ಬಾಳು ಯಾವ ನಾಟಕಕ್ಕೂ ಮಿಗಿಲಾಗಿ

ರೋಮಾಂಚಕಾರಿ, ದೇವಿಯೆಂದು ಕೊಂಡಾಡಿದ ಈ ಬಾಲಿಕೆಯನ್ನು ಪಿಶಾಚಿನಿಯೆಂದು ಜೀವಂತ ಸುಟ್ಟ ಘೋರ ಮೂಢತೆಯ ಕಥೆ.

ಜೋನ ಆಫ್ ಆರ್ಕ (ಅಥವಾ ಫ್ರೆಂಚ ಭಾಷೆಯಂತೆ ಜೆನೆದ ಆರ್ಕ) ೧೪೧೨ರಲ್ಲಿ ಜನೆವರಿ ೬ಕ್ಕೆ ದೊಮ್ರೆಮಿ ಎಂಬ ಒಂದು ಫ್ರೆಂಚ ಹಳ್ಳಿಯಲ್ಲಿ ಜನಿಸಿದಳು. ಅವಳ ತಂದೆ ಒಬ್ಬ ಬಡ ರೈತ. ಜೋನ ಹುಡುಗಿಯಾದರೂ ಗಂಡಿನಂತೆ ತಂದೆಗೆ ಹೊಲಗೆಲಸದಲ್ಲಿ ನೆರವಾಗುತ್ತ ಬೆಳೆದ ದಿಟ್ಟೆ. ಅವಳು ಓದು ಬರಹ ಕಲಿಯಲೇ ಇಲ್ಲ, ಆದರೆ ಚೆನ್ನಾಗಿ ಹೊಲಿಗೆ ಕಲಿತಳು, ಹೊಲದ ದುಡಿಮಯಲ್ಲೂ ನಿಪುಣಳಾದಳು.

ತನ್ನ ಓರಗಿತ್ತಿಯರೊಂದಿಗೆ ಆಟಪಾಟಗಳಲ್ಲಿ ಹೊತ್ತುಗಳೆಯುವುದೆಂದರೆ ಜೋನಳಿಗೆ ಬಹಳ ಮೆಚ್ಚಿಗೆ. ಆದರೆ ಅದಕ್ಕೂ ಮೆಚ್ಚಿನ ಚಟವೆಂದರೆ ನಡುನಡುವೆ ಸದ್ದಿಲ್ಲದೆ ಕದ್ದು ಚರ್ಚಿಗೆ ಹೋಗಿ ಒಳಗೆ ಮೂಲೆಯಲ್ಲಿ ಕುಳಿತು ಪ್ರಾರ್ಥನೆಯಲ್ಲಿ ಮೈಮರೆಯುವದು. ಅವಳು ತುಂಬ ಭಾವಜೀವಿ. ದೈವಿಕ ಪ್ರಜ್ಞೆ ಅವಳಲ್ಲಿ ಸದಾ ಜಾಗೃತ. ಬಿಡುವು ಸಿಕ್ಕಾಗಲೆಲ್ಲಾ ಆಕೆ ಹಳ್ಳಿಯ ಬಡ ರೋಗಿಗಳ ಆರೈಕೆಗೆ ಓಡುವಳು. ಅನೇಕ ಸಲ ರಾತ್ರಿ ಮನೆಯೊಳಗೆ ತಂಗಿದ ಹಾದಿಹೋಕರಿಗೆ ತನ್ನ ಹಾಸಿಕೆ ಬಿಟುಕೊಟ್ಟು ತಾನು ಒಲೆಯ ಬಳಿಗೆ ನೆಲದ ಮೇಲೆ ಒರಗಿ ರಾತ್ರಿಯೆಲ್ಲ ಚಳಿಯಲ್ಲಿಯೇ ಸಂತೋಷದಿಂದ ಕಳೆಯುವಳು.

ಊರಿನಲ್ಲಿ ಅವಳನ್ನು ಮಮತೆಯಿಂದ ಕಾಣದ ಜನರಿದ್ದಿಲ್ಲ. ಪಶುಪಕ್ಷಿಗಳೂ ಅವಳ ಬೊಗಸೆಯಿಂದ ಮೇವು-ಕಾಳು ತಿನ್ನುತ್ತಿದ್ದವು.

ಎಳೆಯ ಪ್ರಾಯದಲ್ಲಿಯೇ ಅವಳು ಕೇಳಿದ್ದಳು ಫ್ರಾನ್ಸದ ದೊರೆಯ ಮಗ ಚಾರ್ಲಸ ದೊಫಿನ್‌ನನ್ನು ಪಟ್ಟಕ್ಕೆ ಏರಿಸದೆ ತಳ್ಳಿಹಾಕಿ ಬರ್ಗಂಡಿಯ ಜನ ಬಂಡೆದ್ದು ಅವನ ಅಧಿಕಾರವನ್ನು ನಿರಾಕರಿಸಿತು. ಈ ಬಂಡುಗಾರರಿಗೆ ಬ್ರಿಟಿಷರ ಬೆಂಬಲ ಬೇರೆ

ಸಿಕ್ಕಿತು. ಬಡ ರಾಜಪುತ್ರ ದೊಫಿನನ ಪರವಾಗಿ ಹೋರಾಡಲು ಒಬ್ಬ ಹಿರಿಯ ನಾಯಕನೂ ಇದ್ದಿಲ್ಲ.

ಒಂದು ದಿನ ಜೋನ ತನ್ನ ಗೆಳತಿಯರೊಂದಿಗೆ ಪಂದ್ಯ ಕಟ್ಟಿ ಓಡುತ್ತಿದ್ದಳು. ಜೋನ ಸುಲಭವಾಗಿ ಅವರನ್ನು ಹಿಂದೆ ಹಾಕಿ ಗೆದ್ದಳು. ಓಡುವಾಗ ಅವಳ ಕಾಲು ನೆಲಕ್ಕೆ ತಾಗುತ್ತಲೇ ಇದ್ದಿಲ್ಲ, ಓಡಿ ಓಡಿ ದಣಿದು ಅವಳು ದಣುವಾರಿಸಿಕೊಳ್ಳಲಿಕ್ಕೆ ಹುಲ್ಲುಗಾವಲಿನ ಬದಿಗೆ ಹೋಗಿ ಕುಳಿತಳು. ಆಗ ಯಾರೋ ಬಂದು-

"ನಿಮ್ಮ ತಾಯಿಗೆ ನಿನ್ನ ಅಗತ್ಯವಿದೆ" ಎಂದಂತೆ ಅನಿಸಿತು. ಕೂಡಲೇ ಅವಳು ಮನೆಗೆ ಓಡಿದಳು. ಆದರೆ ತಾಯಿ ಕರೆದೇ ಇದ್ದಿಲ್ಲ.

ಜೋನಳಿಗೆ ಇದೊಂದು ಒಗಟಾಯಿತು. ಅವಳು ತನ್ನ ಗೆಳತಿಯರನ್ನು ಕೂಡಿಕೊಳ್ಳಲು ಮನೆಯಿಂದ ಹಿಂದಿರುಗಿದಳು. ಆಗ ದಾರಿಯಲ್ಲಿ ಒಂದು ಹೊಳೆಯುವ ಮೋಡ ಅವಳ ಕಣ್ಣ ಮುಂದೆ ತೇಲಿಹೋಯಿತು. ಅದರೊಳಗಿಂದ ಒಂದು ದನಿ ಕೇಳಿಸಿತು.

"ನೀನು ನಿನ್ನ ಬದುಕನ್ನು ಬದಲಿಸಬೇಕು. ನಿನ್ನಿಂದ ಅದ್ಭುತ ಕೆಲಸಗಳು ಆಗಲಿವೆ."

"ಯಾವ ಕೆಲಸ?"

ದಿಗಿಲುಗೊಂಡು ಜೋನ್ ಪಿಸುಗುಟ್ಟಿದಳು.

"ದೊಫಿನ್‌ನಿಗೆ ಸಹಾಯ ಮಾಡಲಿಕ್ಕೆ ದೇವರು ನಿನ್ನನ್ನು ಕಳಿಸಿದ್ದಾನೆ. ಇನ್ನು ನೀನು ಗಂಡಿನ ಉಡಿಗೆತೊಡಿಗೆ ಧರಿಸಬೇಕು. ಕೈಗೆ ಶಸ್ತ್ರವೆತ್ತಿಕೊಳ್ಳಬೇಕು. ಯುದ್ಧದಲ್ಲಿ ಸೇನಾಪತಿ ಆಗಬೇಕು."

"ಅದರೆ, ಆದರೆ..." ಜೋನ ತತ್ತರಿಸಿ ಅಂದಳು.

“ಇದು ಹೇಗೆ ಸಾಧ್ಯ? ನಾನು ಶುದ್ಧ ಹಳ್ಳಿಯ ಹುಡುಗಿ-ಒಕ್ಕಲಗಿತ್ತಿ, ಕುದುರೆಯೇರಲೂ ನನಗೆ ಬರುವುದಿಲ್ಲ.”

ಆದರೆ ಈ ಅಶರೀರವಾಣಿ ಆಕೆಗೆ ಮತ್ತೆ ಮತ್ತೆ ಕೇಳಿಸಿತು. ಕೊನೆಗೂ ಅವಳು ಆ ದಿವ್ಯ ದನಿಗಳಿಗೆ ಕಿವಿಗೊಟ್ಟಳು. ದೇವರ ಆಜ್ಞೆಯನ್ನು ಮನ್ನಿಸಲು ಸಿದ್ಧಳಾದಳು. ವ್ರೊಕಾಲಿರ್ಸ್‌ದಲ್ಲಿ ಫ್ರೆಂಚ ದಳಪತಿಯ ಠಾಣ್ಯವಿತ್ತು. ಅವಳು ಅಲ್ಲಿಗೆ ಹೋದಳು. ಸೋದರನೊಬ್ಬನನ್ನು ಸಂಗಡ ಕರೆದುಕೊಂಡು, ದಳಪತಿ ಅವಳ ಮಾತೆಲ್ಲ ಕೇಳಿ ಖೊಳ್ಳನೆ ನಕ್ಕುಬಿಟ್ಟ,

“ಇವಳ ಕಿವಿ ಚೆನ್ನಾಗಿ ಹಿಂಡು, ಮತ್ತು ತಂದೆಯ ಕಡೆಗೆ ಇವಳನ್ನು ಒಯ್ದು ಮುಟ್ಟಿಸು” ಎಂದು ಆತ ಆ ಸೋದರನಿಗೆ ಗದರಿಸಿದನು.

ಆದರೂ ಜೋನ್ ಇನ್ನು ಸುಮ್ಮನಿರುವದು ಶಕ್ಯವಿದ್ದಿಲ್ಲ. ಅವಳು ನೇರವಾಗಿ ರಾಜಪುತ್ರ ಚಾರ್ಲ್ಸ್ ದೋಫಿನ್‌ನನ್ನು ಕಾಣಲು ಹೋದಳು. ಅದು ಬಲು ದೂರದ ಪಯಣ. ಊಟವಿಲ್ಲ-ವಿಶ್ರಾಂತಿಯಿಲ್ಲ, ಎಡೆಬಿಡದ ಪಾದಯಾತ್ರೆ ಆದರೂ ಜೋನ್ ಕುಗ್ಗಲಿಲ್ಲ, ಹಿಗ್ಗಿನಲ್ಲಿಯೇ ಮುಂದೆ ನಡೆದಳು. ಜತೆಯವರೊಂದಿಗೆ ಅಂದಳು-

“ನಾವು ಯಾವುದಕ್ಕೂ ಅಂಜಬಾರದು, ದೇವರು ನನ್ನನ್ನು ಇಲ್ಲಿ ಕಳುಹಿಸಿದ್ದಾನೆ. ಅವನಿಗೆ ಎಲ್ಲವೂ ಸಾಧ್ಯ.”

ಕೊನೆಗೂ ರಾಜಪುತ್ರನಿದ್ದ ಕೋಟೆಗೆ ಅವಳು ತಲುಪಿದಳು. ಅವಳನ್ನು ದೋಫಿನ್‌ನ ಓಲಗ ಶಾಲೆಗೆ ಕರೆದೊಯ್ದರು. ಹಳ್ಳಿಯ ಹುಡುಗಿಯೆಂದು ಅವಳನ್ನು ಮೋಸಗೊಳಿಸಲು ಒಬ್ಬ ಸಾಮಾನ್ಯ ಅಧಿಕಾರಿಗೆ ದೋಫಿನ್‌ನ ವಸ್ತ್ರ ತೊಡಿಸಿ ಇವನೇ ದೋಫಿನ್ ರಾಜಪುತನೆಂದು ಅವಳಿಗೆ ಕಾಣಿಸಲಾಯಿತು. ಜೋನಳು ಈವರೆಗೂ ದೋಫಿನ್‌ನನ್ನು ನೋಡಿಯೇ ಇದ್ದಿಲ್ಲ. ಆದರೆ ಅವಳ ಕಿವಿಯೊಳಗಿನ ದನಿ ಹೇಳಿತು. ಆಕೆ ನೇರವಾಗಿ ಸಾಗಿ ನಿಜವಾದ ರಾಜಪುತ್ರನ ಹತ್ತಿರ ಹೋದಳು.

“ಮಹಾಮಾನ್ಯ ರಾಜಪುತ್ರನೇ, ನಿನಗೆ ಸಹಾಯ ಮಾಡಲಿಕ್ಕೆ ದೇವರು ನನ್ನನ್ನು ಕಳುಹಿಸಿದ್ದಾನೆ. ನನ್ನ ಆಯುಷ್ಯ ಇನ್ನು ಒಂದೇ ವರ್ಷ-ದಿವ್ಯ ದನಿಗಳು ನನಗೆ ಹೇಳುತ್ತವೆ. ಆದ್ದರಿಂದ ದೋಫಿನ್ ದೊರೆ ಆ ಮೊದಲೇ ನನ್ನನ್ನು ಯುದ್ಧಕ್ಕೆ ಕಳಿಸು.”

ಅವಳ ಮಾತಿಗೆ ಎಲ್ಲರೂ ಚಕಿತರಾದರು. ಆದರೂ ಅವಳನ್ನು ನಂಬುವದು ಹೇಗೆ? ಅವಳಂದಂತೆ ನಡೆಯಲು ತುಂಬ ತಡೆಯಾಯಿತು, ತಡವಾಯಿತು. ಆದರೆ ಕೊನೆಗೆ ಅವಳ ಜಿದ್ದೇ ಗೆದ್ದಿತು. ಬಿಳಿ ಉಕ್ಕಿನ ಕವಚ ತೊಟ್ಟು ಮೇಲೆ ಮುಖಮಲ್ಲಿನ ಜರತಾರಿ ನಿಲುವಂಗಿ ಹೊದ್ದುಕೊಂಡು ಖಡ್ಗಪಾಣಿಯಾಗಿ ಸೆಂಟ ಕಾಥರಿನ್ ಚ್ಯಾಪೆಲ್ ಮಂದಿರದಿಂದ ಅವಳು ಹೊರಬಿದ್ದಳು, ಅಚ್ಚ ಕರಿ ಕುದುರೆಯನ್ನೇರಿ.

ಅವಳ ಧ್ವಜ ಶುದ್ಧ ಬಿಳಿಯದು. ಅದರ ಅಂಚಿಗೆ ಲಿಲೀ ಹೂಗಳ ಕುಸುರು ಕೆಲಸವಿತ್ತು. ಧ್ವಜದ ಮೇಲೆ ಸ್ವರ್ಗಾಧಿಪತಿ ಲೋಕವನ್ನೇ ಕೈಯಲ್ಲಿ ಎತ್ತಿ ಹಿಡಿದು ನಿಂತ ಆಕೃತಿ. ದೇವದೂತರೆಲ್ಲ ಅವನ ಸುತ್ತಲೂ ಮಂಡಿಯೂರಿದ್ದ ಚಿತ್ರ ಅದರ ಕೆಳಗೆ ಈ “ಜೀಸಸ್ ಮೇರಿಯಾ.”

“ನನ್ನನ್ನು ಓರ್ಲೀನ್ಸಕ್ಕೆ ಮುಟ್ಟಿಸಿರಿ” ಜೋನ್ ಅಂದಳು.

“ಅಲ್ಲಿ ನಾನು ನಿಮಗೊಂದು ಮುಂಗುರಹನ್ನು ಕಳಿಸುತ್ತೇನೆ. ಅಂದರೆ ಅಲ್ಲಿ ಬಿದ್ದ ಆಂಗ್ಲರ ಮುತ್ತಿಗೆಯನ್ನು ಎಬ್ಬಿಸಿ ಓಡಿಸುತ್ತೇನೆ. ದೋಷಿನ್‌ನ ಪಟ್ಟಾಭಿಷೇಕ ಮಾಡಿಸುತ್ತೇನೆ.”

ಅವಳ ಮಾತಿನಿಂದ ಅವಳ ಪಡೆಗಳಲ್ಲಿ ಮಿಂಚು ಸಂಚರಿಸಿತು. ಅವರು ಓರ್ಲೀನ್ಸಕ್ಕೆ ಬಂದರು. ಬ್ರಿಟಿಶ್‌ರೊಂದಿಗೆ ಉಗ್ರವಾದ ದೀರ್ಘಕದನ ನಡೆಯಿತು. ಕಾಳಗದ ಕಣದಲ್ಲಿ ಕಣ್ಣು ಹಾಯಿಸಿದಂತೆಲ್ಲ ಕರಿ ಕುದುರೆಯೇರಿ ಕತ್ತಿ ಝಳಪಿಸುತ್ತ ಧ್ವಜವನ್ನೆತ್ತಿ ಮಿಂಚಾಡುವ ಜೋನಳ ಸ್ಫೂರ್ತಿ ಮೂರ್ತಿಯೇ ಕಾಣುತ್ತಿತ್ತು. ಅವಳು ಸೈನಿಕರನ್ನು ಹುರಿದುಂಬಿಸುತ್ತಿದ್ದಳು-

“ಸಂದೇಹ ಬೇಡ- ಕೋಟೆ ನಿಮ್ಮದು.”

ಒಮ್ಮೆ ಕೋಟೆಯ ಗೋಡೆಗೆ ಆನಿಸಿಟ್ಟ ಏಣಿಯನ್ನು ಏರಿ ಹೋಗುವಾಗ ಹೆಜ್ಜೆ ತಪ್ಪಿ ಜೋನ ಕೆಳಗೆ ಬಿದ್ದಳು, ಗಾಯಗೊಂಡಳು. ಆದರೆ ಮತ್ತೆ ಏರಿಹೋದಳು. ಅವಳ ಪ್ರತಾಪ ಪ್ರಭಾವಗಳಿಗೆ ಬ್ರಿಟಿಷರು ತಬ್ಬಿಬ್ಬಾದರು. ಅವಳು ಮನುಷ್ಯಳಲ್ಲ ಒಬ್ಬ ಡಾಕಿಣಿ, ಮಾಯಾವಿನಿ, ಮಂತ್ರಗಾರ್ತಿ ಎಂದು ಭಾವಿಸಿ ಭಯಪಟ್ಟರು ಮತ್ತು ದಿಕ್ಕಾಪಾಲಾಗಿ ಕಾಲ್ದೆಗೆದರು. ಹದಿನೇಳು ವರ್ಷದ ಆ ವೀರ ಕನ್ನಿಕೆ ಕಾಳಗವನ್ನು ಗೆದ್ದಿದ್ದಳು.

ಇನ್ನೂ ಹಲವು ಕಾಳಗಗಳಾದವು. ದಿವ್ಯದನಿಗೆ ಕಿವಿಗೊಡುತ್ತ ಹೋರಾಡುವ ಜೋನ ಎಲ್ಲೆಡೆಯಲ್ಲಿಯೂ ಗೆದ್ದಳು. ಜುಲೈ ೧೭ಕ್ಕೆ ಅವಳು ತನ್ನ ಪ್ರತಿಜ್ಞೆಯನ್ನು ಪೂರ್ತಿ ಮಾಡಿದಳು. ರ್ಹೀಮ್ಸ  ಕ್ಯಾಥೆಡ್ರಿಲ್ ಮಂದಿರದಲ್ಲಿ ಚಾರ್ಲಸ್ ದೋಫಿನ್‌ನ ಮುಡಿಗೆ ಮುಕುಟವಿಟ್ಟು ಪಟ್ಟಾಭಿಷೇಕ ಮಾಡಿಸಿದಳು. ಜೋನ್ ತನ್ನ ಶ್ವೇತ ಧ್ವಜವನ್ನು ಹಿಡಿದುಕೊಂಡು ಅವನ ಪಕ್ಕದಲ್ಲಿ ನಿಂತಿದ್ದಳು.

“ಓ ನನ್ನ ದೊರೆ, ಈಶ್ವರೇಚ್ಛೆಯನ್ನು ನಾನು ಪಾಲಿಸಿದ್ದಾಯಿತು. ನನಗೀಗ ದೊಮ್ರಿಯ ಹಳ್ಳಿಗೆ ತಿರುಗಿ ಹೋಗಲು ಅಪ್ಪಣೆ ಕೊಡು” ಅವಳೆಂದಳು.

ಆದರೆ ದೊರೆ ಕೇಳಲಿಲ್ಲ, ಅವಳನ್ನು ತನ್ನ ಓಲಗದಲ್ಲಿಯೇ ಉಳಿಯಲು ಬಲವಂತ ಮಾಡಿದನು. ಅಲ್ಲಿ ಆಗ ಅವಳನ್ನು ರಾಜಕನ್ನೆಯಂತೆ ನಡೆಯಿಸಿಕೊಳ್ಳಹತ್ತಿದನು. ಅವಳಿಗೆ ಚಿನ್ನದ ನೂಲಿನಿಂದ ನೆಯ್ದು ಮಾಡಿದ ನಿಲುವಂಗಿಯನ್ನು ತೊಡಿಸಿದರು. ಆದರೆ ಅವಳಿಗೆ ಅದರಿಂದ ಸುಖವಿರಲಿಲ್ಲ, ದೋಫಿನ್‌ನ ಪಟ್ಟಾಭಿಷೇಕವಾದಂದಿನಿಂದ ಅವಳಿಗೆ ಒಂದೇ ಹಂಬಲ-ಬ್ರಿಟಿಷರನ್ನು ಫ್ರಾನ್ಸದಿಂದ ಪೂರ್ತಿ ಹೊಡೆದಟ್ಟುವದು ಹೇಗೆ? ಯಾವಾಗ?

ಆದರೆ ಚಾರ್ಲಸ್ ಈಗ ಭೋಗವಿಲಾಸಗಳಲ್ಲಿ ಮೈಮರೆತನು. ಹೋರಾಟಕ್ಕಿಂತ ಹೊಸ ಅರಸೊತ್ತಿಗೆಯ ಸುಖದ ಸುಪತ್ತಿಗೆ ಅವನಿಗೆ ಸೊಗಸೆನಿಸಿತು. ಅವಳಿಗೆ ಹೋರಾಟಕ್ಕಾಗಿ ಹಣವಾಗಲಿ, ದಂಡಾಗಲೀ ಸಾಕಷ್ಟು ಕೊಡಲೇ ಇಲ್ಲ.

ಇನ್ನೊಂದು ಏಪ್ರಿಲ್ ೧ನೆಯ ದಿನ ಮೂಡಿತು. ಜೋನ ಕೋಟೆಯ ಗೋಡೆಯ ಮೇಲೆ ನಿಂತಿದ್ದಳು. ಆಗ ದಿವ್ಯವಾಣಿ ಮತ್ತೆ ಕಿವಿಯಲ್ಲಿ ನಿಚ್ಚಳವಾಗಿ ನುಡಿಯಿತು. “ನಡು ಬೇಸಿಗೆಯ ಸೆಂಟ ಜಾನ್ ಉತ್ಸವದ ಹಬ್ಬಕ್ಕಿಂತ ಮೊದಲೇ ನಿನ್ನನ್ನು ಸೆರೆ ಹಿಡಿಯುತ್ತಾರೆ. ಆದರೆ ಹೆದರಬೇಡ, ಬಲ ತಾಳು ಧೈರ್ಯತಾಳು, ದೇವರು ನಿನ್ನ ನೆರವಿಗಿದ್ದಾನೆ.”

ಆ ವೀರ ಕನ್ನಿಕೆಗೆ ಸಾವಿನ ಭೀತಿಯೇ ಇದ್ದಿಲ್ಲ, ಸೆರೆಯಾಳಾಗಿ ಬದುಕುವದಕ್ಕಿಂತ ಮೊದಲೇ ತಾನು ಸಾಯಬೇಕೆಂದು ಅವಳು ದಿನದಿನವೂ ಪ್ರಾರ್ಥಿಸಿದಳು.

ಮತ್ತೆ ಯುದ್ಧ ಪ್ರಾರಂಭವಾಯಿತು. ೫೦೦ ಯೋಧರೊಂದಿಗೆ ಜೋನಳು ಕೊಪೆನ್ ಕೋಟೆಯ ಬಿಡುಗಡೆಯಾಗಿ ಹೋದಳು. ಒಮ್ಮೆಲೇ ಅತ್ತ ಅಶ್ವದಳವೊಂದು ಮುಂದೆ ಕಾಣಿಸಿಕೊಂಡಿತು. ಇಬ್ಬಣಕ್ಕೂ ಕದನ ಗಂಟುಬಿತ್ತು. ಎರಡು ಸಲ ಅಶ್ವದಳವನ್ನು ಜೋನ್ ಹಿಂದಕ್ಕಟ್ಟಿದಳು. ಆದರೆ ಹೊಸ ನಡೆಗಳು ಬಂದು ಶತ್ರುದಳಕ್ಕೆ ಸೇರಿಕೊಂಡವು. ಅವರ ಬಲ ಹೆಚ್ಚಿತು, ಜೋನಳ ಜನರು ಕಂಗೆಟ್ಟರು, ಕಾಲ್ದೆಗೆದರು. ಆ ಕೋಲಾಹಲದಲ್ಲಿ ಜೋನಳನ್ನು ಕುದುರೆಯಿಂದ ಕೆಳಗೆಳೆದು ಶತ್ರುಗಳು ಸೆರೆಹಿಡಿದರು.

“ಶರಣು ಬಾ” ಎಂದಾಗ ಜೋನ್ ತನ್ನ ಧ್ವಜವನ್ನು ನೆತ್ತಿಗೆತ್ತಿ ಹಿಡಿದು ಅಂದಳು-

“ನಾನು ನನ್ನ ನಂಬಿಗೆಯನ್ನು ನಿಮಗಿಂತ ಹಿರಿದಾದ ಸ್ಥಾನದಲ್ಲಿ ಮುಡಿಪಿದ್ದೇನೆ. ನನ್ನ ಶಪಥವನ್ನು ನಾನು ಪಾಲಿಸಬೇಕು.”

ಆ ರಾತ್ರಿಗೆ ಅವಳನ್ನು ಬ್ಯೂಲೂ ಕೋಟೆಯಲ್ಲಿ ಬಂಧಿಸಿಟ್ಟರು.

ಚಾರ್ಲಸನು ಅವಳಿಂದಲೇ ಪಟ್ಟವನ್ನು ಕಂಡ ಮೂರ್ಖ ದೊರೆ. ಅವನು ಅವಳ ಬಿಡುಗಡೆಗೆ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಅವಳನ್ನು, ಅವಳು ತನಗಾಗಿ, ನಾಡಿಗಾಗಿ ಮಾಡಿದ ಸೇವೆಯನ್ನೂ ಎಲ್ಲವನ್ನೂ ಮರೆತುಬಿಟ್ಟ. ಆದರೆ ಜೋನಳು ಮಾತ್ರ ಚಾರ್ಲಸರಿಗೆ ಏಕನಿಷ್ಠಳಾಗಿ ಉಳಿದಳು, ಅವನ ವಿರುದ್ಧ ಒಂದು ಕೀಳೂ ಮಾತೂ ಆಡಲಲ್ಲ.

ಜೋನ ಸೆರೆಮನೆಯಿಂದ ಪರಾರಿಯಾಗಲು ಹವಣಿಸಿದಳು, ಆದರೆ ಕಾವಲುಗಾರರು ಅವಳನ್ನು ಹಿಡಿದು ಅಲ್ಲಿಂದ ೪೦ ಮೈಲು ದೂರದ ಒಂದು ಕೋಟೆಗೆ ಒಯ್ದರು. ಅಲ್ಲಿಯೂ ಆಕೆಯು ಕೋಟೆಯ ಕೊತ್ತಳದ ಅರವತ್ತು ಅಡಿ ಎತ್ತರದಿಂದ ಕೆಳಗೆ ಹಾರಿ ಪಾರಾಗಲು ಯತ್ನಿಸಿದಳು. ಆದರೆ ಚಮತ್ಕಾರವೇನೆಂದರೆ ಅವಳು ಸಾಯಲಿಲ್ಲ, ಆದರೂ ಎರಡು ದಿನ ಅನ್ನನೀರು ಮುಟ್ಟದೆ ಕಾಯಿಲೆಯಾಗಿ ಮಲಗಿದಳು. ಬ್ರಿಟಿಷರ ಕೈಗೆ ಬೀಳುವ ಬದಲು ಇಲ್ಲಿಯೆ ಮೊದಲು ಸಾಯುವದು ಲೇಸೆಂದು ಜೋನ್ ತಿಳಿದಳು, ಆದರೇನು? ಅವಳನ್ನು ಸೆರೆ ಹಿಡಿದ ದ್ರೋಹಿಗಳು ೬೦೦೦ ಫ್ರಾಂಕುಗಳಿಗೆ ಬ್ರಿಟಿಷರಿಗೆ ಒಪ್ಪಿಸಿಬಿಟ್ಟರು.

ಬ್ರಿಟಿಷರು ಜೋನಳನ್ನು ರೊಯೆನ್ ಕೋಟೆಗೆ ಒಯ್ದರು. ಅಲ್ಲಿ ಐದು ತಿಂಗಳು ಕತ್ತಲೆ ತುಂಬಿದ ನೆಲಮಾಳಿಗೆಯಲ್ಲಿ ಕೈಕಾಲು ಕಟ್ಟಿ ಸೊಂಟಕ್ಕೆ ಒಂದು ಭಾರೀ ಟೊಣೆಯನ್ನು ಬಿಗಿದು ಇಟ್ಟರು, ಮಲಗುವಾಗಲೂ ಅವಳನ್ನು ಮಂಚಕ್ಕೆ ಬಿಗಿದಿಡುತ್ತಿದ್ದರು.

ಫೆಬ್ರುವರಿಯಲ್ಲಿ ಅವಳನ್ನು ವಿಚಾರಣೆಗೆ ಗುರಿ ಮಾಡಲಾಯಿತು. ರಾಜದ್ರೋಹದ ಅಪರಾಧಕ್ಕಾಗಿ ಅಲ್ಲ-ಅವಳೊಬ್ಬ ಡಾಕಿಣಿ, ಮಂತ್ರಗಾರ್ತಿ ಎಂದು

ನ್ಯಾಯಾಲಯಕ್ಕೆ ತಂದಾಗ ಅವಳು ಆಳುಮಗನಂತೆ ಕಪ್ಪು ಅಂಗಿ ತೊಟ್ಟು ಕೂದಲನ್ನು ಕುತ್ತಿಗೆಯ ಮಟ್ಟಕ್ಕೆ ಕತ್ತರಿಸಿಕೊಂಡಿದ್ದಳು.

ಜೋನಳ ವಿಚಾರಣೆಯ ಹಗರಣ ಆರು ದಿನ ನಡೆಯಿತು. ಕ್ರೂರರೂ ಚತುರರೂ ಆದ ಅಧಿಕಾರಿಗಳು ಎಡಬಿಡದೆ ಅವಳಿಗೆ ಪರಿಪರಿಯಾಗಿ ಪ್ರಶ್ನೆ ಕೇಳಿ ಪೀಡಿಸಿದರು. ಆದರೂ ಆ ನಿರಕ್ಷರ ಹಳ್ಳಿಯ ಹುಡುಗಿ ಹೆದರಲಿಲ್ಲ. ತತ್ತರಿಸಲಿಲ್ಲ. ಒಂದಲ್ಲ ಒಂದು ರೀತಿ ಅವಳನ್ನು ಸಿಲುಕಿಸಲು ನೋಡಿದರು. ಆದರೆ ಅವಳು ಅಂಜಲಿಲ್ಲ, ತನ್ನ ಅಂಬೋಣದಿಂದ ಹಿಂಜರಿಯಲಿಲ್ಲ.

“ನಾನು ದೇವರ ಆಜ್ಞೆ ಪಾಲಿಸಿದೆ, ನನ್ನ ದಿವ್ಯದನಿಯ ಮಾತಿಗೆ ಕಿವಿಗೊಟ್ಟೆ.”

ಇದೊಂದೇ ಅವಳ ಅಂಬೋಣ, ಅವಳು ಕೂಗಿಕೊಂಡಳು-

“ನನ್ನನ್ನು ಕೊಲ್ಲಿರಿ, ಬೆಂಕಿಯಲ್ಲಿ ತಳ್ಳಿರಿ, ನಾನು ಹೇಳುವದೊಂದೇ ಸತ್ಯ, ನಾನು ದೇವರ ವಿರುದ್ಧ-ಧರ್ಮದ ವಿರುದ್ಧ ಏನೂ ಮಾಡಿಲ್ಲ.”

ಆದರೆ ಅವಳನ್ನು ಜೀವಂತ ಸುಡಬೇಕೆಂದು ಶಿಕ್ಷೆ ವಿಧಿಸಲಾಯಿತು. ಶಿಕ್ಷೆ ಕೇಳಿದಾಗ ಒಮ್ಮೆ ಅವಳಿಗೆ ಸಂಶಯ ಆವರಿಸಿತು. ದಿವ್ಯ ದನಿಗಳು ತನಗೆ ಮೋಸ ಮಾಡಿದವೇ? ತನ್ನ ಎಲ್ಲ ಸಾಹಸ ಕಷ್ಟ ವ್ಯರ್ಥವಾಯಿತೆ?- ಅನಿಸಿತು. ಆದರೆ ಅವಳಿಗೆ ಮತ್ತೆ ಧೈರ್ಯ ಚಿಮ್ಮಿ ಬಂದಿತು–ಅಂತರಾಳದಿಂದ ಸಾವನ್ನು ಸ್ವಾಗತಿಸಲು ಸಿದ್ಧಳಾದಳು.

ಮೇ ೩೦ಕ್ಕೆ ಸೆರೆಮನೆಯ ಸಿಪಾಯರು ಅವಳನ್ನು ಹೊರಗೆ ದಹನ ದಂಡನೆಗಾಗಿ ಒಯ್ದರು. ಅವಳಿಗೆ ಬಿಳಿಯ ಅಂಗಿ ತೊಡಿಸಿದ್ದರು. ಪೇಟೆ ಬೀದಿಯಲ್ಲಿ ಜನ ಕಿಕ್ಕಿರಿದು ನೆರೆದಿದ್ದರು. ಅಲ್ಲಿ ಹಾದು ಹೋಗುವಾಗ ಜೋನ ದನಿ ಎತ್ತಿ ಹೇಳಿದಳು-

“ರೊಯೆನ್- ರೋಯೆನ್ ನನಗೆ ಒಂದೇ ಭಯ, ಇಲ್ಲಿಗೆ ಮುಗಿದಿಲ್ಲ, ಇದಕ್ಕಾಗಿ ನೀನು ಮತ್ತೆ ಗೋಳಾಡುವಿ.”

ಅವಳು ನಿಧಾನವಾಗಿ ವಧಾಸ್ತಂಭದ ಕಟ್ಟೆ ಏರಿದಳು. ಅಲ್ಲಿ ಮಂಡಿಯೂರಿ ಮೇರಿ ಮಾತೆಯನ್ನು ಎಲ್ಲ ಸಂತರನ್ನೂ ಪ್ರಾರ್ಥಿಸಿದಳು. ತನ್ನ ಸಮಸ್ತ ಪಾಪಗಳನ್ನು ಕ್ಷಮಿಸಲಿಕ್ಕೆ, ಆಮೇಲೆ ನ್ಯಾಯಾಧೀಶರ ಕಡೆಗೆ ಹೊರಳಿ ಅಂದಳು.

"ನೀವು ನನ್ನೊಂದಿಗೆ ನಡೆದುಕೊಂಡ ಎಲ್ಲ ಕೇಡುಗಳನ್ನು ಕ್ಷಮಿಸಿದ್ದೇನೆ."

ಅವಳ ಹಗೆಗಳೂ ಆಗ ಅತ್ತರು. ಸ್ತಂಭಕ್ಕೆ ಕಟ್ಟುವ ಮುಂಚೆ ಅವಳು 'ಕ್ರಾಸ'ನ್ನು ಬೇಡಿದಳು. ಅಲ್ಲಿಯ ಯಾರ ಹತ್ತಿರವೂ ಕ್ರಾಸ್ ಇದ್ದಿಲ್ಲ. ಆಗ ಒಬ್ಬ ಸಿಪಾಯಿ ತನ್ನ ಬಡಿಗೆಯನ್ನು ಮುರಿದು ಎರಡು ತುಂಡು ಮಾಡಿ ಅವುಗಳನ್ನು ಕ್ರಾಸಿನಿಂದ ಜೋಡಿಸಿ ಕಟ್ಟಿಕೊಟ್ಟನು. ಜೋನ ಅದನ್ನು ಆನಂದದಿಂದ ಎದೆಗೆ ಅವಚಿಕೂಂಡಳು.

ಸ್ತಂಭದಡಿಗೆ ಬೆಂಕಿ ಕೊಟ್ಟರು, ಹೊಗೆಯ ಮೋಡವೆದ್ದು ಅವಳನ್ನು ಅಡಗಿಸಿತು. ಆದರೆ ಬೆಂಕಿಯ ಒಳಗಿನಿಂದ ಅವಳ ಸ್ಪಷ್ಟವಾದ ದನಿ ಬಲವಾಗಿ ಕೇಳಿಬರುತ್ತಿತ್ತು.

"ನಾನು ಕೇಳಿದ ದನಿ ದೇವರದೇ ಆಗಿತ್ತು, ಅದು ನನ್ನನ್ನು ಮೋಸಗೊಳಿಸಲಿಲ್ಲ."

ಮತ್ತೊಮ್ಮೆ ಜನಸ್ತೋಮ ಅವಳ ಕೂಗು ಕೇಳಿತು-

"ಜೀಸಸ್-ಜೀಸಸ್-ಜೀಸಸ್"

ಹೀಗೆ ಏಸುಪ್ರಭುವಿನ ನಾಮವು ನಾಲಗೆಯಲ್ಲಿ ನಲಿದಾಡುತ್ತಿರುವಾಗಲೇ ಫ್ರಾನ್ಸದ ಆ ವೀರಕನ್ನೆ ಏಸುವಿನ ಪಾದವನ್ನು ಸೇರಿದಳು.

# ೯. ಪ್ರೊಕ್ರಸ್ಟಿನ ಮಂಚ

*'ಪ್ರೊಕ್ರಸ್ಟಿನ ಮಂಚ' ಇದೊಂದು ವಾಕ್‌ಪ್ರಯೋಗ. ಪಾಶ್ಚಾತ್ಯರ ಒಂದು ಪೌರಾಣಿಕ ಕಥೆಯಿಂದ ಪ್ರಚಲಿತವಾಗಿದೆ. ಎಲ್ಲದರ ಮೇಲೂ ಒಂದೇ ಸಮರೂಪತೆಯ ಚೌಕಟ್ಟನ್ನು ಬಲಾತ್ಕಾರದಿಂದ ಹೇರುವದಕ್ಕೆ ಪ್ರೊಕ್ರಸ್ಟಿನ ಮಂಚವೆನ್ನುತ್ತಾರೆ. ಒಂದೇ ಇಕ್ಕಟ್ಟಿನ ಸಂದರ್ಭಕ್ಕೆ ಎಲ್ಲ ಆಗು- ಹೋಗುಗಳನ್ನು ಹಿಗ್ಗಾ-ಮಗ್ಗಾ ಹೊಂದಿಸಿಕೊಳ್ಳುವ ಹಟ ಮತ್ತು ಅದರಿಂದ ಆಗುವ ಹಿಂಸೆಗೆ ಈ ಮಂಚ ಪ್ರತೀಕ.*

*ಈ ಪ್ರೊಕ್ರಸ್ಟ ಯಾರು? ಅವನ ಮಂಚ ಎಂತಹದು? ಅದರ ಕಥೆಯನ್ನು ಕೇಳಿ.*

ಪ್ರೊಕ್ರಸ್ಟನ ಒಬ್ಬ ದರೋಡೆಖೋರ ಸೇಫಿಸಸ್ ನದಿಯ ಕೊಳ್ಳದಲ್ಲಿ ಪಾರ್ನಿಸ ಪರ್ವತಗಳ ಕೋಡುಗಳಲ್ಲಿ ಆತ ಮನೆ ಮಾಡಿಕೊಂಡಿದ್ದ, ಇವನ ಕೊಳ್ಳೆ ಹೊಡೆಯುವ ರೀತಿ-ತಂತ್ರ ತುಂಬ ವಿಲಕ್ಷಣ. ಒಬ್ಬ ರಾಜಪುರೋಹಿತನಂತೆ ಅಲಂಕಾರ ಮಾಡಿಕೊಂಡು ಹೆದ್ದಾರಿಯಲ್ಲಿ ನಿಂತು ಅಲ್ಲಿ ಹಾಯುವ ಹಾದಿ ಹೋಕರನ್ನು ಆತ ತನ್ನ ಮನೆಗೆ, ರಾತ್ರಿ ತಂಗಿ ಹೋಗಲಿಕ್ಕೆ ಆಗ್ರಹದಿಂದ ಆಮಂತ್ರಿಸುತ್ತಿದ್ದನು. ದಣಿದು ಬಂದ ದೂರದ ಪ್ರವಾಸಿಗಳು ಅವನ ಆಗ್ರಹಕ್ಕೆ ಒಪ್ಪಿ ಅವನೊಂದಿಗೆ ಹೋಗುತ್ತಿದ್ದರು. ಅವರನ್ನು ಮನೆಗೆ ಒಯ್ದು ಒಳ್ಳೆ ಆತಿಥ್ಯ ಮಾಡಿ ಆ ರಾತ್ರಿ ಮಲಗಲಿಕ್ಕೆ ಅವರಿಗೆ ಒಂದು ಮಂಚವನ್ನು ಕೊಡುತ್ತಿದ್ದನು. ಪ್ರವಾಸಿಯು ಮಂಚಕ್ಕಿಂತ ಉದ್ದ ಅಗಲವಿದ್ದರೆ ಅವನ ಕೈಕಾಲುಗಳನ್ನು ಕಡಿದು ಅವನು ಗಿಡ್ಡನಿದ್ದರೆ ಕಾಲು ಕುಗ್ಗಿಸಿ ಜಗ್ಗಿ ಎಳೆದು. ಬಿಗಿದು ಆ ಮಂಚದ ಅಳತೆಗೆ ಹೊಂದಿಸುವದು ಪ್ರೊಕ್ರಸ್ಟಿಸ್‌ನ ಪದ್ಧತಿ, ಇಂಥ ಪ್ರಯೋಗದಿಂದ ಬರುವ ನಿದ್ದೆಯಿಂದ ಆ ಅತಿಥಿಗಳು ಮತ್ತೆ ಎಚ್ಚರಾಗುವದುಂಟೆ? ಹೀಗೆ ಸಿರಿವಂತ ದಾರಿಕಾರರನ್ನು ಕೊಲೆ ಮಾಡಿ ಅವರ ಸೊತ್ತನ್ನೆಲ್ಲ ಪ್ರೊಕ್ರಸ್ಟಿಸನು ಎತ್ತಿ ಹಾಕುತ್ತಿದ್ದನು. ಹಲವರು ಈ ಮೋಸಕ್ಕೆ ಒಳಗಾದರೂ ಒಮ್ಮೆ ಒಳಪಟ್ಟವರು ಮತ್ತೊಮ್ಮೆ ಒಳಪಡುತ್ತಿದ್ದಿಲ್ಲ, ಆದ್ದರಿಂದ ಈ ಮೋಸ ಮುಂದರಿಯಿತು.

ಆದರೆ ಯಾರೂ ಬಹುಕಾಲ ಯಾರನ್ನೂ ಮೋಸಗೊಳಿಸಲಾರರು, ದುಷ್ಟ ಪ್ರೊಕ್ರಸ್ಟಿಸನಿಗೆ ಯೋಗ್ಯ ಇದಿರಾಳಿಯೊಬ್ಬ ಭೆಟ್ಟಿಯಾದನು. ಈತನೇ ಥಿಸಿಯಸ್, ಗ್ರೀಕರಲ್ಲಿಯ ಒಬ್ಬ ಪರಮ ಪರಾಕ್ರಮಿಯಾದ ದೇವಪುತ್ರ. ಆ ಘಟನೆ ಹೀಗೆ ಒದಗಿ ಬಂದಿತು.

ಒಂದು ದಿನ ಥಿಸಿಯಸ್ ಸೇಫಿಸಸ್ ಹೊಳೆಯ ಕೊಳ್ಳವನ್ನು ಸುತ್ತು ಹಾಕುವ ಹೆದ್ದಾರಿಗುಂಟ ಪಾರ್ನಿಸ ಪರ್ವತದ ಬುಡದಲ್ಲಿ ಸಾಗಿದ್ದನು. ಆಗ ಒಬ್ಬ ಉದ್ದನ್ನ ಚೆಲುವ ಬಲಿಷ್ಠ ವ್ಯಕ್ತಿ ಗುಡ್ಡದಿಂದ ಇಳಿದುಬಂದು ಅವನನ್ನು ಭೆಟ್ಟಿಯಾದನು. ಆತ ಬೆಲೆಯುಳ್ಳ ಬಟ್ಟೆಗಳನ್ನು ತೊಟ್ಟಿದ್ದನು. ಆತನ ಭುಜದ ಮೇಲೆ ಚಿನ್ನದ ಕಡಗಗಳಿದ್ದವು. ಕೊರಳಿಗೆ ರತ್ನಗಳ ಒಂದು ಪಟ್ಟಿ ಇತ್ತು. ಆತ ಮುಂದೆ ಬಂದು ಅತಿ ವಿನಯದಿಂದ ಬಗ್ಗಿ, ಎರಡೂ ಕೈಗಳನ್ನು ಜೋಡಿಸಿ ಅಂದ-

“ಸ್ವಾಗತಂ! ಸುಂದರ ತರುಣನೆ! ಈ ಪರ್ವತ ಪ್ರದೇಶಕ್ಕೆ ನಿನಗೆ ಸುಸ್ವಾಗತ! ನೀನು ಬಂದದ್ದು ನನಗೆ ಭಾರೀ ಸಂತೋಷ. ಅತಿಥಿ ಅಭ್ಯಾಗತರನ್ನು ಸತ್ಕರಿಸುವದಕ್ಕಿಂತ ಹೆಚ್ಚಿನ ಸೌಭಾಗ್ಯ ಸಜ್ಜನರಿಗೆ ಇನ್ನಾವುದಿದೆ? ನೀನು ಬಹಳ ದಣಿದು ಬಂದಿರುವಿ. ನನ್ನ ಕೋಟೆಗೆ ಬಂದುಬಿಡು. ಅಲ್ಲಿ ಈ ರಾತ್ರಿ ವಿಶ್ರಾಂತಿ ಪಡೆಯಬಹುದು.”

“ನಿಮ್ಮ ಆಮಂತ್ರಣಕ್ಕೆ ನಾನು ತುಂಬ ಆಭಾರಿ. ಆದರೆ ನನಗೆ ಆದಷ್ಟು ತ್ವರೆಯಿಂದ ಈ ಕೊಳ್ಳದಾಟಿ ಹೋಗಬೇಕಾಗಿದೆ, ಅಥಿದ್ನಾಯಿಂಗೆ ಮುಟ್ಟಬೇಕಾಗಿದೆ.”

“ಅಯ್ಯೋ! ಹಾಗಾದರೆ ನೀನು ನೇರದಾರಿಯಿಂದ ಬಹಳ ದೂರ ಬಂದಿರುವಿ. ಈ ರಾತ್ರಿ ನೀನು ಹೇಗೂ ಅಥಿದ್ನಾಯಿಗೆ ಮುಟ್ಟಲಾರೆ. ನಡುವೆ ಮೈಲುಗಟ್ಟಲೆ ಗುಡ್ಡ ಬೆಟ್ಟ ಕಡಿದಾದ ಕಣಿವೆಗಳಿರುತ್ತವೆ. ಕತ್ತಲೆಯಲ್ಲಿ ಅವುಗಳನ್ನು ಏರುವದು, ಇಳಿಯುವದು ತುಂಬ ಗಂಡಾಂತರ. ನಾನು ನಿನಗೆ ಭೆಟ್ಟಿಯಾದದ್ದು ಒಳಿತೇ ಆಯಿತು. ಏಕೆಂದರೆ ನನ್ನ ಎಲ್ಲ ಸಂತೋಷ ನಿನ್ನಂಥ ಹೊಸಬರನ್ನು ಕಂಡು, ನನ್ನ ಕೋಟೆಗೆ ಒಯ್ದು ಅವರಿಗೆ

ಔತಣ ನೀಡಿ ಉಪಚಾರ ಮಾಡಿ ಅವರ ಬಾಯಿಂದ ದೇಶ-ವಿದೇಶಗಳ ಕಥೆಗಳನ್ನು ಕೇಳುವದೇ ಆಗಿದೆ. ನೀನು ನನ್ನ ಜತೆ ಬಾ, ನಮ್ಮಲ್ಲ ಉತ್ತಮ ಚಿಗುರೆ ಮಾಂಸ, ಬೆಲೆಬಾಳುವ ಕೆಂಪು ಮದ್ಯ ಮತ್ತು ನಮ್ಮ ಹೆಸರಾದ ಮಂಚ ಇವುಗಳ ಸುಖವನ್ನು ಸೇವಿಸು, ನನ್ನ ಆ ಮಂಚ ನಿನಗೆ ಗೊತು ಅಷ್ಟೇ! ಇಲ್ಲಿ ಬಂದು ಹೋದ ಪ್ರವಾಸಿಗಳಿಲ್ಲ ಹೇಳುತ್ತಾರೆ. ಅಂಥ ಮಂಚ ಅವರು ಎಲ್ಲೂ ಎಂದಿಗೂ ನೋಡಿಯೇ ಇಲ್ಲ. ಆ ಮಂಚದ್ದೊಂದು ಸೋಜಿಗ, ಅತಿಥಿಯ ಮೈಕಟ್ಟು ಏನೇ ಇರಲಿ, ಆತ ಉದ್ದನಿರಲಿ-ಗಿಡ್ಡನಿರಲಿ, ಮಂಚ ಅವನ ಮೈಗೆ ಸರಿಯಾಗಿ ಹೊಂದಿಕೊಳ್ಳುತ್ತದೆ. ಒಂದು ಕೂದಲು ಹೆಚ್ಚೆಲ್ಲ-ಕಡಿಮೆ ಇಲ್ಲ. ಆತ ಅದರ ಮೇಲೆ ಒಮ್ಮೆ ಮಲಗಿದರೆ ಮುಗಿಯಿತು. ಅಂಥ ನಿದ್ದೆ ಅವನು ಹಿಂದಾಗಲಿ ಮುಂದಾಗಲಿ ನೋಡಲಾರ.”

ಹೀಗೆಂದು ಅವನು ಥಿಸಿಯಸ್‌ನ ಕೈ ಹಿಡಿದನು. ಹಾಗೂ ಅವನನ್ನು ಮುಂದೆ ಹೋಗಲು ಬಿಡಲಿಲ್ಲ.

ಅಲ್ಲಿಂದ ಮುಂದೆ ಹೋಗಲೇಬೇಕೆಂದು ಥಿಸಿಯಸ್‌ನ ಇಚ್ಛೆ, ಆದರೆ ಇಂಥ ಆತಿಥ್ಯಶೀಲ ಗೃಹಸ್ಥನೊಂದಿಗೆ ಸಿಡಿದು ನಡೆಯಲು ಸಿಗ್ಗು. ಅಲ್ಲದೆ ಆ ಅದ್ಭುತ ಮಂಚವನ್ನು ಒಮ್ಮೆ ನೋಡಬೇಕೆಂಬ ಕುತೂಹಲವು ಕೂಡಿತು. ಅದೂ ಅಲ್ಲದೆ ದೀರ್ಘ ಪ್ರವಾಸದ ಪ್ರಯಾಸದಿಂದ ದಣಿದು ಹಸಿದಿದ್ದ.

ಇಷ್ಟಾದರೂ ಈ ಮನುಷ್ಯನಿಂದ ದೂರ ಸರಿಯಲೇಬೇಕೆಂದು ಥಿಸಿಯಸ್‌ನಿಗೆ ಅನಿಸಿತು. ಆತನ ದನಿ ಸೌಮ್ಯವಿದ್ದರೂ ದೇಶಾವರಿಯದಿತ್ತು. ಅದು ಇಂಪಾಗಿರಲಿಲ್ಲ. ಕಪ್ಪೆಯ ದನಿಯಂತಿತ್ತು. ಅವನ ಕಣ್ಣುಸೌಮ್ಯವಿದ್ದರೂ ಕಲ್ಲಿನಂತೆ ಕಾಂತಿಹೀನವಾಗಿದ್ದವು. ಆದಾಗ್ಯೂ ಆಗ ಒಪ್ಪಿ ಪ್ರೊಕ್ರಸ್ಟಿಸ್‌ನ ಜತೆಗೆ ಹೊರಟನು.

ಕಣಿವೆಯ ಗುಂಟ ಅವರಿಬ್ಬರೂ ಪರ್ವತವೇರಲು ಹತ್ತಿದರು. ಕಡಿದಾದ ಎತ್ತರದ ಹೆಬ್ಬಂಡೆಗಳ ಕಪ್ಪು ನೆರಳುಗಳೊಳಗಿಂದ ಮುಂದೆ ಹೋದಂತೆ ಕಣಿವೆಯ

ದಾರಿ ಇಕ್ಕಟ್ಟಾಯಿತು. ಬಂಡೆ ಬೆಟ್ಟಗಳು ಎತ್ತರವಾದವು. ಕೆಳಗೆ ಒಂದು ಹೆದ್ದೊರೆ ಭೋರ್ಗರೆಯುತ್ತ ನುಗ್ಗಿತ್ತು. ಒಂದೂ ಗಿಡಗಂಟೆ ಇದ್ದಿಲ್ಲ. ಎಲ್ಲವೂ ಶೂನ್ಯ, ಬೆಟ್ಟದ ತುದಿಯಿಂದ ಕೊರೆಯುವ ಚಳಿಗಾಳಿ ಬೀಸುತ್ತಿತ್ತು. ಥಿಸಿಯಸ್‌ನಿಗೆ ಇದೆಲ್ಲ ಭಯಾನಕವಾಗಿ ಅನಿಸಿತು.

"ನಿಮ್ಮ ಕೋಟೆ ಈ ನಿರ್ಜನಶೂನ್ಯ ಸ್ಥಳದಲ್ಲಿ ಇದೆಯೇ?" ಆತ ಕೇಳಿದ.

"ಹೌದು, ಆದರೆ ಒಮ್ಮೆ ಅದರೊಳಗೆ ಕಾಲಿಟ್ಟರೆ ಅಲ್ಲಿಯ ಆತಿಥ್ಯ ಉಪಚಾರ ಎಲ್ಲ ಶೂನ್ಯವನ್ನೂ ತುಂಬಿಬಿಡುವುದು. ಅಷ್ಟು ಸುಖ-ಸಂತೋಷ ಅಲ್ಲಿದೆ" ಎಂದ ಪ್ರೊಕ್ರಸ್ಟಿಸ್.

ಅಷ್ಟರಲ್ಲಿ ಅವರು ನಡೆದುಬಂದ ದಾರಿಯಲ್ಲಿ ತೀರ ಕೆಳಗೆ ಕತ್ತೆಗಳ ಸಾಲೊಂದು ಸರಕು ಹೇರಿಕೊಂಡು ಬರುವದು ಕಂಡಿತು. ಅದರ ಸಂಗಡ ವರ್ತಕರ ತಂಡೊಂದು ನಡೆದಿತ್ತು.

"ಅಯ್ಯೋ, ಪಾಪ, ನಾನು ನೋಡಿದ್ದು ಚೆನ್ನಾಯಿತು. ರಾತ್ರಿ ಅವರು ಎಲ್ಲಿಗೆ ಹೋದಾರು? ಅವರೂ ನನ್ನ ಅತಿಥಿಗಳಾಗಲಿ, ಅಲ್ಲಿ ಕೆಳತನಕ ಓಡಿ ಅವರನ್ನು ಕರೆದುಕೊಂಡು ಬರುತ್ತೇನೆ. ಆತನಕ ನೀನು ಇಲ್ಲಿಯೆ ತಡೆ. ಇಂದು ರಾತ್ರಿ ನಾವೆಲ್ಲ ಕೂಡಿ ಕಲೆತು ಹಬ್ಬ ಮಾಡೋಣ, ದೇವರ ದಯೆ! ನನ್ನ ಮನೆಗೆ ತಾನಾಗಿ ಅತಿಥಿಗಳು ಬರುತ್ತಾರೆ."

ಹೀಗೆಂದು ಅತ ಹೊರಳಿ ಬಂದ ದಾರಿಯಿಂದ ಗುಡ್ಡ ಇಳಿದು ಹೋದ ಥಿಸಿಯಸ್ ಸಾವಕಾಶವಾಗಿ ಆ ಕಣಿವೆಯನ್ನೇರಿ ಸಾಗಹತ್ತಿದನು.

ಆದರೆ ಮುಂದೆ ಹೋದಂತೆ ಆತನಿಗೆ ಒಬ್ಬ ಮುದುಕ ಭೆಟ್ಟಿಯಾದ ಆತ ಹಳ್ಳದ ಬದಿಯಲ್ಲಿ ಇಳಿದು ಬಂದು ಬಿದ್ದ ಸೌದೆಯನ್ನು ಒಟ್ಟು ಹಾಕುತ್ತಿದ್ದ ಆ ಸೌದೆಯನ್ನೆಲ್ಲ

ಹೊರೆ ಕಟ್ಟಿ ಅದನ್ನು ಹೆಗಲಿಗೇರಿಸಲು ಪೇಚಾಡುತ್ತಿದ್ದ ಥೀಸಿಯಸ್‌ನನ್ನು ಕಂಡೊಡನೆ ಆ ಮುದುಕ ಕೂಗಿದ-

"ಓ ಚೆಲುವಾ, ನನ್ನ ಈ ಹೊರೆಗಿಷ್ಟು ಕೈ ಹಚ್ಚು. ನನ್ನ ಕೈಕಾಲು ಕೊರಡಾಗಿ ಹೋಗಿವೆ-ಈ ಮುದಿ ಪ್ರಾಯದಲ್ಲಿ."

ಥೀಸಿಯಸ್ ಆ ಹೊರೆಯನ್ನೆತ್ತಿ ಮುದುಕನ ಹೆಗಲಿಗೆ ಏರಿಸಿದನು. ಮುದುಕ ಅವನನ್ನು ಹರಸಿ ಚೆನ್ನಾಗಿ ದಿಟ್ಟಿಸಿ ನೋಡಿ ಕೇಳಿದ-

"ಚೆಲುವ, ನೀನು ಯಾರು? ಈ ಹಾಳುಬಿದ್ದ ದಾರಿಯಲ್ಲಿ ಏಕ ಅಲೆದು ಬಂದಿ?"

"ನಾನು ಯಾರೆಂಬುದನ್ನು ನನ್ನ ತಂದೆ ತಾಯಿ ಬಲ್ಲರು, ಇತ್ತ ಬಂದ ಕಾರ್ಯ ಒಬ್ಬ ಅತಿಥಿಶೀಲ ಸದ್ಗೃಹಸ್ತನ ನನ್ನನ್ನು ಕರೆದುಕೊಂಡು ಬಂದ, ಈ ರಾತ್ರಿ ಆತ ನನಗೆ ಉತ್ತಮ ಊಟ ಹಾಕಿ ಅವನಲ್ಲಿಯ ಅದ್ಭುತ ಮಂಚದಲ್ಲಿ ಮಲಗಿಸುತಾನೆ."

"ಅಯ್ಯೋ!" ಆ ಮುದುಕ ಎರಡೂ ಕೈಗಳನ್ನು ತಟ್ಟಿ ಮರುಗಿದನು. "ಅಯ್ಯೋ! ಪ್ರಾರಬ್ಧವೇ! ಪ್ರಾಯದ ಪೋರನೆ, ನೀನು ಸುಮ್ಮನೆ ನರಳಿ ಸಾಯುವಿ. ಏಕೆಂದರೆ ನಿನ್ನನ್ನು ಕರೆದು ತಂದವನು ಸಭ್ಯ ಗೃಹಸ್ಥನಲ್ಲ, ಆತನೊಬ್ಬ ದರೋಡೆಕೋರನು. ಮಂದಿಯ ಕೊಲೆಗಾರನು, ಹಾದಿಯಲ್ಲಿ ಸಿಕ್ಕವರನ್ನು ದೋಚಿಕೊಳ್ಳುವ ಭಯಂಕರ ದುಷ್ಟನು. ಅವನ ಆ ಮಂಚ ಅದ್ಭುತವೆಂಬುದು ಸುಳ್ಳಲ್ಲ, ಆದರೆ ಅದರಲ್ಲಿ ಮಲಗಿದವರು ಮತ್ತೆ ಏಳುವುದಿಲ್ಲ."

"ಅದು ಹೇಗೆ?"

“ಹೇಗೆಂದರೆ, ಮಲಗಿದವರನ್ನು ಆ ಮಂಚಕ್ಕೆ ಸರಿಯಾಗಿ ಕೈಕಾಲು ಕತ್ತರಿಸಿ ಅಥವಾ ಜಗ್ಗಿ ಬಿಗಿದು, ಸರಿಯಾಗಿ ಹೊಂದಿಸುವನು. ನಾನು ಏಳು ವರುಷಗಳ ಹಿಂದೆ ಕೈಗೆ ಸಿಕ್ಕು ಆ ಮಂಚದಲ್ಲಿ ಮಲಗಿದ್ದೆ.”

“ಹಾಗಾದರೆ ಹೇಗೆ ಎದ್ದು ಪಾರಾದೆ?”

“ಅದು ನನ್ನದೆ ಅದೃಷ್ಟ, ನಾನೊಬ್ಬನೇ ಆ ಮಂಚದ ಆಯಕ್ಕೆ ಸರಿಯಾಗಿ ಇದ್ದಕ್ಕಿದ್ದಂತೆ ಹೊಂದಿಕೊಂಡೆ. ಆದ್ದರಿಂದ ನನ್ನ ಜೀವ ಉಳಿಯಿತು. ಆದರೆ ಆ ಅತಿಥಿಯ ಮೈಕಟ್ಟು ಏನೇ ಇರಲಿ, ಆತ ಉದ್ದನಿರಲಿ-ಗಿಡ್ಡನಿರಲಿ, ಮಂಚ ಅವನ ಮೈಗೆ ಸರಿಯಾಗಿ ಹೊಂದಿಕೊಳ್ಳುತ್ತದೆ. ಒಂದು ಕೂದಲು ಹೆಚ್ಚಿಲ್ಲ-ಕಡಿಮೆ ಇಲ್ಲ. ಆತ ಅದರ ಮೇಲೆ ಒಮ್ಮೆ ಮಲಗಿದರೆ ಮುಗಿಯಿತು. ಅಂಥ ನಿದ್ದೆ ಅವನು ಹಿಂದಾಗಲಿ ಮುಂದಾಗಲಿ ನೋಡಲಾರ.”

ಹೀಗೆಂದು ಅವನು ಥಿಸಿಯಸ್‌ನ ಕೈ ಹಿಡಿದನು. ಹಾಗೂ ಅವನನ್ನು ಮುಂದೆ ಹೋಗಲು ಬಿಡಲಿಲ್ಲ.

ಅಲ್ಲಿಂದ ಮುಂದೆ ಹೋಗಲೇಬೇಕೆಂದು ಥಿಸಿಯಸ್‌ನ ಇಚ್ಛೆ, ಆದರೆ ಇಂಥ ಆತಿಥ್ಯಶೀಲ ಗೃಹಸ್ಥನೊಂದಿಗೆ ಸಿಡಿದು ನಡೆಯಲು ಸಿಗ್ಗು. ಅಲ್ಲದೆ ಆ ಅದ್ಭುತ ಮಂಚವನ್ನು ಒಮ್ಮೆ ನೋಡಬೇಕೆಂಬ ಕುತೂಹಲವು ಕೂಡಿತು. ಅದೂ ಅಲ್ಲದೆ ದೀರ್ಘ ಪ್ರವಾಸದ ಪ್ರಯಾಸದಿಂದ ದಣಿದು ಹಸಿದಿದ್ದ.

ಇಷ್ಟಾದರೂ ಈ ಮನುಷ್ಯನಿಂದ ದೂರ ಸರಿಯಲೇಬೇಕೆಂದು ಥಿಸಿಯಸ್‌ನಿಗೆ ಅನಿಸಿತು. ಅತನ ದನಿ ಸೌಮ್ಯವಿದ್ದರೂ ದೇಶಾವರಿಯದಿತ್ತು. ಅದು ಇಂಪಾಗಿರಲಿಲ್ಲ. ಕಪ್ಪೆಯ ದನಿಯಂತಿತ್ತು ಅವನ ಕಣ್ಣುಸೌಮ್ಯವಿದ್ದರೂ ಕಲ್ಲಿನಂತೆ ಕಾಂತಿಹೀನವಾಗಿದ್ದವು. ಆದಾಗ್ಯೂ ಆಗ ಒಪ್ಪಿ ಪ್ರೊಕ್ರಸ್ಟಿಸ್‌ನ ಜತೆಗೆ ಹೊರಟನು.

ಕಣಿವೆಯ ಗುಂಟ ಅವರಿಬ್ಬರೂ ಪರ್ವತವೇರಲು ಹತ್ತಿದರು. ಕಡಿದಾದ ಎತ್ತರದ ಹೆಬ್ಬಂಡೆಗಳ ಕಪ್ಪು ನೆರಳುಗಳೊಳಗಿಂದ ಮುಂದೆ ಹೋದಂತೆ ಕಣಿವೆಯ ದಾರಿ ಇಕ್ಕಟ್ಟಾಯಿತು. ಬಂಡೆ ಬೆಟ್ಟಗಳು ಎತ್ತರವಾದವು. ಕೆಳಗೆ ಒಂದು ಹೆದ್ದೊರೆ ಭೋರ್ಗರೆಯುತ್ತ ನುಗ್ಗಿತ್ತು. ಒಂದೂ ಗಿಡಗಂಟೆ ಇದ್ದಿಲ್ಲ. ಎಲ್ಲವೂ ಶೂನ್ಯ, ಬೆಟ್ಟದ ತುದಿಯಿಂದ ಕೊರೆಯುವ ಚಳಿಗಾಳಿ ಬೀಸುತ್ತಿತ್ತು. ಥಿಸಿಯಸ್‌ನಿಗೆ ಇದೆಲ್ಲ ಭಯಾನಕವಾಗಿ ಅನಿಸಿತು.

"ನಿಮ್ಮ ಕೋಟೆ ಈ ನಿರ್ಜನಶೂನ್ಯ ಸ್ಥಳದಲ್ಲಿ ಇದೆಯೇ?" ಆತ ಕೇಳಿದ.

"ಹೌದು, ಆದರೆ ಒಮ್ಮೆ ಅದರೊಳಗೆ ಕಾಲಿಟ್ಟರೆ ಅಲ್ಲಿಯ ಆತಿಥ್ಯ ಉಪಚಾರ ಎಲ್ಲ ಶೂನ್ಯವನ್ನೂ ತುಂಬಿಬಿಡುವುದು. ಅಷ್ಟು ಸುಖ-ಸಂತೋಷ ಅಲ್ಲಿದೆ" ಎಂದ ಪ್ರೊಕ್ರಸ್ಟಿಸ್.

ಅಷ್ಟರಲ್ಲಿ ಅವರು ನಡೆದುಬಂದ ದಾರಿಯಲ್ಲಿ ತೀರ ಕೆಳಗೆ ಕತ್ತೆಗಳ ಸಾಲೊಂದು ಸರಕು ಹೇರಿಕೊಂಡು ಬರುವದು ಕಂಡಿತು. ಅದರ ಸಂಗಡ ವರ್ತಕರ ತಂಡೊಂದು ನಡೆದಿತ್ತು.

"ಅಯ್ಯೋ, ಪಾಪ, ನಾನು ನೋಡಿದ್ದು ಚೆನ್ನಾಯಿತು. ರಾತ್ರಿ ಅವರು ಎಲ್ಲಿಗೆ ಹೋದಾರು? ಅವರೂ ನನ್ನ ಅತಿಥಿಗಳಾಗಲಿ, ಅಲ್ಲಿ ಕೆಳತನಕ ಓಡಿ ಅವರನ್ನು ಕರೆದುಕೊಂಡು ಬರುತ್ತೇನೆ. ಆತನಕ ನೀನು ಇಲ್ಲಿಯ ತಡೆ. ಇಂದು ರಾತ್ರಿ ನಾವಲ್ಲ ಕೂಡಿ ಕಲೆತು ಹಬ್ಬ ಮಾಡೋಣ, ದೇವರ ದಯೆ! ನನ್ನ ಮನೆಗೆ ತಾನಾಗಿ ಅತಿಥಿಗಳು ಬರುತ್ತಾರೆ."

ಹೀಗೆಂದು ಅತ ಹೊರಳಿ ಬಂದ ದಾರಿಯಿಂದ ಗುಡ್ಡ ಇಳಿದು ಹೋದ ಥಿಸಿಯಸ್ ಸಾವಕಾಶವಾಗಿ ಆ ಕಣಿವೆಯನ್ನೇರಿ ಸಾಗಹತ್ತಿದನು.

ಆದರೆ ಮುಂದೆ ಹೋದಂತೆ ಆತನಿಗೆ ಒಬ್ಬ ಮುದುಕ ಭೆಟ್ಟಿಯಾದ ಆತ ಹಳ್ಳದ ಬದಿಯಲ್ಲಿ ಇಳಿದು ಬಂದು ಬಿದ್ದ ಸೌದೆಯನ್ನು ಒಟ್ಟು ಹಾಕುತ್ತಿದ್ದ, ಆ ಸೌದೆಯನ್ನೆಲ್ಲ ಹೊರೆ ಕಟ್ಟಿ ಅದನ್ನು ಹೆಗಲಿಗೇರಿಸಲು ಪೇಚಾಡುತ್ತಿದ್ದ, ಥೀಸಿಯಸ್‌ನನ್ನು ಕಂಡೊಡನೆ ಆ ಮುದುಕ ಕೂಗಿದ-

"ಓ ಚೆಲುವಾ, ನನ್ನ ಈ ಹೊರೆಗಿಷ್ಟು ಕೈ ಹಚ್ಚು, ನನ್ನ ಕೈಕಾಲು ಕೊರಡಾಗಿ ಹೋಗಿವೆ-ಈ ಮುದಿ ಪ್ರಾಯದಲ್ಲಿ"

ಥೀಸಿಯಸ್ ಆ ಹೊರೆಯನ್ನೆತ್ತಿ ಮುದುಕನ ಹೆಗಲಿಗೆ ಏರಿಸಿದನು. ಮುದುಕ ಅವನನ್ನು ಹರಸಿ ಚೆನ್ನಾಗಿ ದಿಟ್ಟಿಸಿ ನೋಡಿ ಕೇಳಿದ-

"ಚೆಲುವ, ನೀನು ಯಾರು? ಈ ಹಾಳುಬಿದ್ದ ದಾರಿಯಲ್ಲಿ ಏಕೆ ಅಲೆದು ಬಂದಿ?"

"ನಾನು ಯಾರೆಂಬುದನ್ನು ನನ್ನ ತಂದೆ ತಾಯಿ ಬಲ್ಲರು, ಇತ್ತ ಬಂದ ಕಾರ್ಯ ಒಬ್ಬ ಅತಿಥಿಶೀಲ ಸದ್ಗೃಹಸ್ತನ ನನ್ನನ್ನು ಕರೆದುಕೊಂಡು ಬಂದ, ಈ ರಾತ್ರಿ ಆತ ನನಗೆ ಉತ್ತಮ ಊಟ ಹಾಕಿ ಅವನಲ್ಲಿಯ ಅದ್ಭುತ ಮಂಚದಲ್ಲಿ ಮಲಗಿಸುತ್ತಾನೆ."

"ಅಯ್ಯೋ!" ಆ ಮುದುಕ ಎರಡೂ ಕೈಗಳನ್ನು ತಟ್ಟಿ ಮರುಗಿದನು. "ಅಯ್ಯೋ! ಪ್ರಾರಬ್ಧವೇ! ಪ್ರಾಯದ ಪೋರನೆ, ನೀನು ಸುಮ್ಮನೆ ನರಳಿ ಸಾಯುವಿ. ಏಕೆಂದರೆ ನಿನ್ನನ್ನು ಕರೆದು ತಂದವನು ಸಭ್ಯ ಗೃಹಸ್ಥನಲ್ಲ, ಆತನೊಬ್ಬ ದರೋಡೆಕೋರನು. ಮಂದಿಯ ಕೊಲೆಗಾರನು, ಹಾದಿಯಲ್ಲಿ ಸಿಕ್ಕವರನ್ನು ದೋಚಿಕೊಳ್ಳುವ ಭಯಂಕರ ದುಷ್ಟನು. ಅವನ ಆ ಮಂಚ ಅದ್ಭುತವೆಂಬುದು ಸುಳ್ಳಲ್ಲ, ಆದರೆ ಅದರಲ್ಲಿ ಮಲಗಿದವರು ಮತ್ತೆ ಏಳುವುದಿಲ್ಲ."

"ಅದು ಹೇಗೆ?"

“ಹೇಗೆಂದರೆ, ಮಲಗಿದವರನ್ನು ಆ ಮಂಚಕ್ಕೆ ಸರಿಯಾಗಿ ಕೈಕಾಲು ಕತ್ತರಿಸಿ ಅಥವಾ ಜಗ್ಗಿ ಬಿಗಿದು, ಸರಿಯಾಗಿ ಹೊಂದಿಸುವನು. ನಾನು ಏಳು ವರುಷಗಳ ಹಿಂದೆ ಕೈಗೆ ಸಿಕ್ಕು ಆ ಮಂಚದಲ್ಲಿ ಮಲಗಿದ್ದೆ.”

“ಹಾಗಾದರೆ ಹೇಗೆ ಎದ್ದು ಪಾರಾದೆ?”

“ಅದು ನನ್ನದೆ ಅದೃಷ್ಟ, ನಾನೊಬ್ಬನೇ ಆ ಮಂಚದ ಆಯಕ್ಕೆ ಸರಿಯಾಗಿ ಇದ್ದಕ್ಕಿದ್ದಂತೆ ಹೊಂದಿಕೊಂಡೆ. ಆದ್ದರಿಂದ ನನ್ನ ಜೀವ ಉಳಿಯಿತು. ಆದರೆ ಆ, ದಿನದಿಂದ ನಾನು ಆ ದುಷ್ಟನ ಜೀತದಾಳಾಗಿ ದುಡಿಯುತ್ತಿದ್ದೇನೆ.”

“ಅಜ್ಜಾ ನೀನು ಯಾರು?”

“ನಿನಗೆ ಥೀಬ್ಸ್ ನಗರ ಗೊತ್ತೇ?”

“ಹೌದು, ಕಂಚಿನ ಅಗಸೆ ಬಾಗಿಲು ಇದ್ದ ಆ ಪಟ್ಟಣವಲ್ಲವೇ?”

“ಸರಿ, ನಾನು ಆ ಸಮೃದ್ಧ ನಗರದ ಒಬ್ಬ ಧನಾಢ್ಯ ವರ್ತಕನಿದ್ದೆ.

ಆದರೆ ಇಂದು ದುಷ್ಟನ ಗುಲಾಮನಾಗಿ ನೀರು ಸೇದುತ್ತಿದ್ದೇನೆ. ಸೌದೆ ಕಡಿಯುತ್ತಿದ್ದೇನೆ. ಇವನು ಲೋಕಕಂಟಕ, ಇವನ ಪಾರುಪತ್ಯ ಯಾರು ಮಾಡುವರೋ?” ಎಂದು ಆ ಮುದುಕ ನಿಟ್ಟುಸಿರು ಎಳೆದನು.

ಥಿಸಿಯಸ್ ಮಾತಾಡಲಿಲ್ಲ, ರೋಷಾವೇಷದಿಂದ ಅವಡುಗಚ್ಚಿದನು. “ಚೆಲುವಾ, ನೀನು ಈಗ ಇಲ್ಲಿಂದ ಕಾಲ್ದೆಗೆ. ಅವನು ಬರುವಷ್ಟರಲ್ಲಿ ಪಾರಾಗು; ನಿನ್ನೆಯೇ ಈತ ಒಂದು ತರುಣ ದಂಪತಿಯನ್ನು ಮನೆಗೆ ಕರೆದು ತಂದ, ತರುಣನ ಕೈಕಾಲು ಕಡಿದುಹಾಕಿದ, ತರುಣಿಯ ಕಾಲು ಕುತ್ತಿಗೆಗಳನ್ನು ಜಗ್ಗಿ ಎಳೆದು ಬಿಗಿದಿದ್ದ, ಇಬ್ಬರನ್ನೂ ಕೊಂದ, ಹೀಗೆ ದಿನಾಲು ಸಾಯುವವರ ಸಂಖ್ಯೆಗೆ ಲೆಕ್ಕವಿಲ್ಲ. ನಾನಂತೂ ಸತ್ತವರಿಗಾಗಿ ಕಣ್ಣೀರು ಬಿಡುವದನ್ನೇ ಬಿಟ್ಟಿದ್ದೇನೆ.”

“ಈ ನರರಾಕ್ಷಸನ ಹೆಸರೇನು?”

“ಅವನ ತಂದೆ ಇಟ್ಟ ಹೆಸರು ದಮಸ್ಟೆಸ್. ಆದರೆ ಮಂದಿ ಕರೆಯುವ ಹೆಸರು ಪ್ರೊಕ್ರುಸ್ಟಿಸ್ ಅಂತ. ನೀನು ಇಲ್ಲಿಂದ ಓಡು, ಆದರೆ ಹೋಗುವಿಯಾದರೂ ಎಲ್ಲಿಗೆ? ಈ ಬಂಡೆಗಳು ಕಡಿದಾಗಿ ನಿಂತಿವೆ. ಅವನ್ನು ಏರಿ ಹೋಗುವದಾದರೂ ಹೇಗೆ? ಬೇರೆ ಹಾದಿಯಾದರೂ ಎಲ್ಲಿದೆ?”

ಆ ಮುದುಕ ಹತಾಶನಾಗಿಯೇ ಅಂದನು.

ಆಗ ಥಿಸಿಯಸ್ ಅವನ ಬಾಯಿಯನ್ನು ತನ್ನ ಕೈಯಿಂದ ಮುಚ್ಚಿ- “ಓಡುವ ಅಗತ್ಯವೇನೂ ಇಲ್ಲ ಅಜ್ಜಾ” ಎಂದು ಆ ಕಣಿವೆಯ ದಾರಿಯಲ್ಲಿ ಹಿಂದಿರುಗಿದನು.

“ಮತ್ತೆ ನಾನು ನಿನಗೆ ಎಚ್ಚರಿಕೆ ಕೊಟ್ಟೆನೆಂದು ಆ ದೈತ್ಯನಿಗೆ ಹೇಳಬೇಡ! ಅವನು ನನ್ನನ್ನು ಕೊಂದೇಬಿಟ್ಟಾನು.”

ಮುದುಕನು ಅವನ ಬೆನ್ನಿಗೆ ಕೂಗಿದನು.

ಥೀಸಿಯಸ್ ಕ್ರೋಧಾವಿಷ್ಟನಾಗಿ ಮುಂದೆ ನಡೆದ, ಈ ನಾಡು ಕೇಡಿನ ಬೀಡು. ಇದರಿಂದ ಜನರ ಬಿಡುಗಡೆ ಪೂರ್ತಿ ಆಗುವದು ಯಾವಾಗ? ಎಂದು ಅಂದುಕೊಂಡ, ಅಷ್ಟರಲ್ಲಿ ಪ್ರೊಕ್ರುಸ್ಟಿಸ್ ವರ್ತಕರ ತಂಡದೊಂದಿಗೆ ನಗುತ್ತ ಹರಟುತ್ತ ಕಣಿವೆಯ ದಾರಿಯಲ್ಲಿ ಏರಿ ಬಂದನು. ಥಿಸಿಯಸ್‌ನನ್ನು ಕಂಡು ಆತ ಕೂಗಿದ.

“ಓ ಪ್ರಿಯ ಮಿತ್ರನೇ, ನಿನಗೆ ಬಹಳ ಹೊತ್ತು ಕಾಯಿಸಿದೆನಲ್ಲವೆ?” ಆದರೆ ಥಿಸಿಯಸ್ ಕೇಳಿದ-

“ಅತಿಥಿಗಳನ್ನು ಮಂಚದಲ್ಲಿ ಬಿಗಿದು ಕಟ್ಟಿ ಇಲ್ಲವೆ ಕೈಕಾಲು ಕಡಿದು ಕೊಲ್ಲುವವನಿಗೆ ಏನು ಮಾಡಬೇಕು-ನಾಡಿನಲ್ಲಿ ಕ್ಷೇಮವನ್ನು ತರಬೇಕಾದರೆ?”

ಈ ಮಾತಿಗೆ ಪ್ರೊಕ್ರಸ್ಟಿಸ್‌ನ ಮುಖಚರ್ಯೆ ಸರ್‍ರನೆ ಇಳಿದುಹೋಯಿತು. ಅವನ ತುಟಿ ಹಸಿರಾದವು, ಕೆನ್ನೆ ಕಪ್ಪಿಟ್ಟವು. ಆತನ ಕೈ ಸೊಂಟದ ಕತ್ತಿಗೆ ಹೋಯಿತು. ಆದರೆ ಥಿಸಿಯಸ್ ಅವನ ಮೇಲೆ ಹಾರಿದನು.

“ಇದು ನಿಜವೋ, ಯಜಮಾನರೇ ಸುಳ್ಳೋ?” ಥಿಸಿಯಸ್ ಮತ್ತೆ ಕೂಗಿದ.

ಪ್ರೊಕ್ರಸ್ಟಿಸ್ ಪಿಟ್ಟೆನ್ನಲಿಲ್ಲ, ಆಗ ಥಿಸಿಯಸ್ ಅವನನ್ನು ಎತ್ತಿ ದೂರ ಒಗೆದನು. ಮತ್ತು ತನ್ನ ಭಯಂಕರ ಗದೆಯನ್ನು ಎತ್ತಿ ಬೀಸಿದನು. ಪ್ರೊಕ್ರಸ್ಟಿಸ್ ಕತ್ತಿ ಹಿರಿದು ಹೊಡೆಯುವ ಮುಂಚೆಯೇ ಥಿಸಿಯಸ್ ಗದೆಯನ್ನು ಅವನ ನೆತ್ತಿಗೆ ಹೊಡೆದನು. ಪ್ರೊಕ್ರಸ್ಟಿಸ್ ನೆಲಕ್ಕೆ ಕುಸಿದನು. ಥಿಸಿಯಸ್ ಮತ್ತೆ ಗದೆಯೆತ್ತಿ ಹೊಡೆದನು. ಆಗ ಆ ಕೊಲೆಗಡುಕನ ತಲೆ ಒಡೆಯಿತು. ಅವನ ದುರಾತ್ಮ ಚೀರುತ್ತ ಅರಚುತ್ತ ನರಲೋಕಕ್ಕೆ ಹೋಯಿತು, ಕಗ್ಗವಿಯ ಕತ್ತಲೆಯಲ್ಲಿ ತೊಗಲುಬಾವುಲಿ ಹಾರಿ ಹೋಗುವ ಹಾಗೆ.

ಆಮೇಲೆ ಥಿಸಿಯಸ್ ಅವನ ಮೈಮೇಲಿನ ಆಭರಣಗಳನ್ನೆಲ್ಲ ತೆಗೆದುಕೊಂಡನು. ಅವನ ಮನೆಗೆ ಹೋಗಿ ಅಲ್ಲಿ ದೋಚಿ ಬಚ್ಚಿಟ್ಟಿದ್ದ ಹೇರಳ ಸಂಪತ್ತನ್ನು ಆ ಸೀಮೆಯ ಜನರನ್ನೆಲ್ಲ ಕರೆದು ಅವರಿಗೆ ಹಂಚಿಕೊಟ್ಟನು.

ನಂತರ ಆ ಬೆಟ್ಟವಿಳಿದು ಮುಂದೆ ಸಾಗಿದನು.

## ೧೦. ಇಣಕಿ ನೋಡಿದ ಟಾಂ

*ಇಣುಕು ನೋಟ ಯಾರಿಗೂ ಯಾವಾಗಲೂ ಪ್ರಿಯ. ಮುಚ್ಚಿದ ಬಾಗಿಲು, ಕದ ನಮಗೆ ಕುತೂಹಲಕ್ಕೆ ಒಂದು ಮೂಕ ಕರೆ, ಅದು ತುಸು ಬಿರುಕು ಬಿಟ್ಟರಂತೂ ಸರಿಯೇ. ಅಲ್ಲಿ ಅಧಿಕಪ್ರಸಂಗಿಯ ಕಣ್ಣು ಅಂಟಿಕಕೊಳ್ಳದೆ ಬಿಡುವದೇ ಇಲ್ಲ. ಆದರೆ ಅನೇಕ ಸಲ ವಿಪರೀತ ಕುತೂಹಲ ಕ್ಷೇಮಕರವಲ್ಲವೆಂಬುದೇ ಲೋಕಾನುಭವವು.*

*ಆಂಗ್ಲ ಭಾಷೆಯಲ್ಲಿ 'ಪೀಪಿಂಗ್ ಟಾಂ' ಎಂಬುದೊಂದು ವಾಕ್ ಪ್ರಯೋಗವಿದೆ. ಟಾಮ್ (TOM) ಒಬ್ಬ ಅಧಿಕಪ್ರಸಂಗಿಯಾದ ಅತಿ ಕುತೂಹಲಿ, ನೋಡಲಾರದ್ದನ್ನು ನೋಡಲು ಹೋಗಿ ಕಣ್ಣು ಕುಕ್ಕಿಸಿಕೊಂಡನಂತೆ, ಇಣಕಿ ನೋಡಲು ಕಣ್ಣು ಬಿಟ್ಟು ಈ ಬಡಪಾಯಿ ಕುರುಡಾದನು. ಅದು ಹೇಗೆ?*

ಮರ್ಸಿಯಾ ಎಂಬುದೊಂದು ಚಿಕ್ಕ ರಾಜ್ಯ, ಯೂರೋಪಿನಲ್ಲಿ ಅಲ್ಲಿಯ ಸರದಾರ ಲಿಯೋಫ್ರಿಕ್. ಈ ರಾಜ್ಯ ಅವನದೇ ಜಾಗೀರು, ಅದಕ್ಕೆ ಅವನೇ ದೊರೆ, ಆದರೆ ಲಿಯೋಫ್ರಿಕ್ ಒಬ್ಬ ಕೂರ-ಕಠೋರ ಆಳರಸನಾಗಿದ್ದನು. ತನ್ನ ಪ್ರಜೆಗಳನ್ನು ಚಿಕ್ಕಪುಟ್ಟ ನೆವಕ್ಕೆ ಪೀಡಿಸುತ್ತಿದ್ದನು.

ಆದರೆ ಅವನ ಹೆಂಡತಿ ಗಾಡಿವಾ ಹಾಗಲ್ಲ, ಗಂಡನಿಗೆ ಸರಿವಿರುದ್ಧ ಮಹಾ ಸಾಧ್ವಿ ಶಿರೋಮಣಿ. ಅವಳಿಗೆ ಪ್ರಜೆಯೆಂದರೆ ತನ್ನ ಮಕ್ಕಳಂತೆ, ಅವಳಿಗೆ ಮಕ್ಕಳೂ ಇದ್ದಿಲ್ಲ, ಗಂಡನೆಷ್ಟು ನಿಷ್ಠುರನೋ ಹೆಂಡತಿ ಅಷ್ಟೇ ನಯವಿನಯವಂತೆ, ಅವಳ ರೂಪಕ್ಕೆ ಅವಳ ಗುಣವೇ ಸರಿಸಾಟಿ. ಪರಮ ಸುಂದರಿ, ಪರಮ ಪತಿವ್ರತೆ, ರಾವಣನಿಗೆ ಮಂಡೋದರಿಯಿದ್ದಂತೆ.

ದೊರೆ ಲಿಯೋಫ್ರಿಕನ ದಬ್ಬಾಳಿಕೆಯ ಜುಲುಮೆ ಜಬರುಗಳಿಂದ ಪಾರಾಗಲು ಪ್ರಜೆಗೆ ಒಂದೇ ಉಪಾಯ ಗೊತ್ತಿತ್ತು. ದೊರೆಸಾನಿ ಗಾಡಿವಾಳನ್ನು ಮೊರೆಹೊಕ್ಕುವದು.

ಒಮ್ಮೆ ಹಾಗೆಯೇ ಆಯಿತು. ಲಿಯೋಫ್ರಿಕ್ ಕಾವೆಂಟ್ರಿ ಎಂಬ ಒಂದು ವಟ್ಟಿಳಾದ ಜನರ ಮೇಲೆ ಭಾರಿ ಕರವನ್ನು ಹೇರಿದನು. ಅಲ್ಲಿಯ ಪ್ರಜೆಗೆ ಅದು ತಲೆಭಾರವಾಯಿತು. ತೆರಿಗೆ ತೆತ್ತು ಸಾಯಲು ತಪ್ಪಿದರೂ ಸಾಯುವುದು ತಪ್ಪದು, ದಂಡ ತೆರುವದೆಂದರೆ ತಲೆದಂಡವೇ!

ಮಾಡುವದೇನು? ಕಾವೆಂಟ್ರಿಯ ಪ್ರಜೆಯೆಲ್ಲ ರಾಣಿಯಲ್ಲಿಗೆ ಧಾವಿಸಿದರು. ಈ ತೆರಿಗೆಯಿಂದ ತಮ್ಮನ್ನು ಉಳಿಸೆಂದು ಮೊರೆಯಿಟ್ಟರು. ಸಾಧ್ವಿ ಗಾಡಿವಾ ಅವರಿಗೆ ಅಭಯವಿತ್ತಳು. ಅವಳಿಗೂ ತನ್ನ ಗಂಡನು ಪ್ರಜೆಗಳಿಗೆ ಹೀಗೆ ಗಂಡಾಂತರಕ್ಕೆ ಕಾರಣನಾದದ್ದು ಏನೂ ಸೇರಲಿಲ್ಲ. ಪ್ರಜೆಗಳ ಪೀಡಾ ಪರಿಹಾರಕ್ಕಾಗಿ ಆಕೆ ಏನು ಮಾಡಲೂ ಸಿದ್ಧಳಾದಳು.

ಅಂದು ರಾತ್ರಿ ಅಂತಃಪುರದಲ್ಲಿ ಗಾಡಿವಾ ಲಿಯೊಫ್ರಿಕ್‌ನನ್ನು ಏಕಾಂತದಲ್ಲಿ ಕುರಿತು ಕೇಳಿದಳು. ಲಿಯೊಫ್ರಿಕ್ ಪ್ರಜೆಗೆ ನಿರ್ದಯಪೀಡಕನಾಗಿದ್ದರೂ ಗಾಡಿವಾಳನ್ನು ಮನವಾರೆ ಪ್ರೀತಿಸುತ್ತಿದ್ದನು. ಆ ರಾತ್ರಿ ಆತ ತುಂಬ ಗೆಲುವಿನಲ್ಲಿ ಇದ್ದುದ್ದನ್ನು ಕಂಡು ರಾಣಿಯು ಈ ತೆರಿಗೆಯ ಪ್ರಸ್ತಾಪವೆತ್ತಿದಳು. ಅದನ್ನು ತೆಗೆದುಹಾಕಲು ಬೇಡಿಕೊಂಡಳು.

ಲಿಯೊಫ್ರಿಕ್ ಯಾವ ಲಹರಿಯಲ್ಲಿ ಓಲಾಡುತ್ತಿದ್ದನೋ! ತುಂಬ ಪರಿಹಾಸದಲ್ಲಿ ಅಂದುಬಿಟ್ಟ-

“ನೋಡು ಚಿನ್ನ, ನಿನ್ನ ಇಷ್ಟದಂತೆಯೇ ಆಗಲಿ, ಆದರೆ ನನ್ನದೊಂದು ಶರ್ತು.”

“ಅದೇನು ದೊರೆ?”

ಆತ ನಕ್ಕು ಅಂದನು- “ಏನಿಲ್ಲ, ನೀನು ನಡುಹಗಲಿನಲ್ಲಿ ನಗರದ ಬೀದಿಯಲ್ಲಿ ಬೆತ್ತಲೆಯಾಗಿ ಕುದುರೆಯನ್ನೇರಿ ಸಾಗಬೇಕು. ಅಂದರೆ ನಾನು ಆ ಕರವನ್ನು ರದ್ದು ಮಾಡುತ್ತೇನೆ.”

ಗಾಡಿವಾ ಒಂದು ಕ್ಷಣ ಅಪ್ರತಿಭಳಾದಳು. ಇದೆಂಥ ವಿಕೃತ ಹಟ. ಆದರೆ ಮರುಕ್ಷಣವೆ ಅವಳಿಗೆ ಅನಿಸಿತು. ನಗರದ ಜನಕ್ಕೆಲ್ಲ ಪರಿಹಾರದ ಸಂತೋಷ ದೊರೆಯುವದಾದರೆ ಬೆತ್ತಲೆಯಾಗಿ ಬೀದಿಯಲ್ಲಿ ಸಾಗಿ ಬಂದರೆ ನನಗಾಗುವ ನಷ್ಟವೇನು? ಈ ಪ್ರಜೆಯೆಲ್ಲ ನನ್ನ ಮಕ್ಕಳೆ ತಾನೆ? ಕೂಡಲೆ ಆಕೆಯು ಗಂಡನ ಈ ವಿಚಿತ್ರ ಶರ್ತನ್ನು ಒಪ್ಪಿಕೊಂಡಳು, ಅವಳಿಗೆ ಗೊತ್ತು ಗಂಡ ಹಠಮಾರಿ, ಹೆಮ್ಮಾರಿ, ಆದರೂ ಪ್ರಾಮಾಣಿಕ, ತುಂಬ ಹೆಮ್ಮೆಯ ವ್ಯಕ್ತಿ, ಆಡಿದ ಮಾತಿಗೆ ತಪುತ್ತಿದ್ದಿಲ್ಲ,

ಮರುದಿನ ರಾಣಿ ಗಾಡಿವಾ ರಾಜಮಾರ್ಗದಲ್ಲಿ ನಗ್ನಳಾಗಿ ಕುದುರೆಯೇರಿ ಸಾಗಿ ಬರುವಳೆಂದೂ, ಆ ಸಮಯಕ್ಕೆ ಜನರೆಲ್ಲರೂ ತಮ್ಮ ತಮ್ಮ ಮನೆಯೊಳಗೇ ಇದ್ದು ಹೊರಗೆ ತಲೆ ಹಾಕತಕ್ಕದ್ದಲ್ಲವೆಂದೂ ಗಾಡಿವಾ ಡಂಗುರ ಹೊಯಿಸಿದಳು.

ಮಧ್ಯಾಹ್ನಕ್ಕೆ ಅಶ್ವಾರೋಹಿಣಿಯಾಗಿ ರಾಣಿಯು ಬೀದಿಯಲ್ಲಿ ಹೊರಟಳು. ನಾಗರಿಕರೆಲ್ಲರೂ ತಮ್ಮ ಬಾಗಿಲು ಕಿಟಕಿಗಳನ್ನೆಲ್ಲ ಮುಚ್ಚಿಕೊಂಡಿದ್ದರು. ರಾಣಿಯ ಮಾತೆಂದರೆ ಅವರಿಗೆ ಮಹಾಪ್ರಸಾದ, ಅವಳು ಅವರಿಗೆ ಮಹಾತಾಯಿ, ಅವಳನ್ನು ಬೆತ್ತಲೆ ನೋಡುವ ಧೈರ್ಯ ಯಾರಿಗಿದೆ? ಅಲ್ಲದೆ ಆಕೆ ಮಹಾಪತಿವ್ರತೆ, ಅವಳ ತೇಜಸ್ಸು ಯಾರ ಕಣ್ಣಿಗೆ ದಕ್ಕೀತು?

ರೂಪಸುಂದರಿ ಗಾಡಿವಾ ಕುದುರೆಯ ಮೇಲೆ ಕುಳಿತು ರಾಜಮಾರ್ಗದಲ್ಲಿ ನಡೆದು ಬಂದಳು-ರಾಜನಿಟ್ಟ ಶರ್ತನ್ನು ಪ್ರಜೆಯ ಕಲ್ಯಾಣಕ್ಕಾಗಿ ಪೂರ್ತಿ ಮಾಡಲಿಕ್ಕೆ ಬೀದಿ-ಕೇರಿ-ಮನೆ- ಮಹಡಿ-ಜಗುಲಿಗಳೆಲ್ಲ ನಿರ್ಜನ ಶೂನ್ಯ

ಆದರೆ ಥಾಮಸ್ ಅಥವಾ ಟಾಂ ಒಬ್ಬ ಅಸಾಧ್ಯ ಅಧಿಕಪ್ರಸಂಗಿ ತಿಳಿಗೇಡಿಯಿದ್ದಷ್ಟೇ ಕಿಡಿಗೇಡಿ, ಈತನಿಗೆ ಸುಮ್ಮನೆ ಬಿದ್ದಿರುವದಾಗಲಿಲ್ಲ. ಕೂತಲ್ಲಿಂದಲೇ ಕೊಂಚ ಕದ ತೆರೆದು ಕುತ್ತಿಗೆ ಹೊರಚಾಚಿ ರಾಣಿಯತ್ತ ಕಣ್ಣು ಹಾಯಿಸಿಯೇ ಬಿಟ್ಟನು ಮತ್ತು ತಕ್ಷಣವೇ ಕುರುಡಾಗಿಬಿಟ್ಟನು, ಸಾಧ್ವಿ ಗಾಡಿವಾಳ ಸಾತ್ವಿಕ ಸೌಂದರ್ಯದ

ತೇಜಸ್ಸು ಅವನ ಆ ತುಂಟ ಕಣ್ಣುಗಳನ್ನು ಕುಕ್ಕಿತು. ಇಣಕಿ ನೋಡಿದ ಟಾಂ-ಪೀಪಿಂಗ ಟೌಂ- ತನ್ನ ಏಪರೀತ ಕುತೂಹಲದ ಫಲವಾಗಿ ಕಣ್ಣನ್ನೇ ಕಳೆದುಕೊಂಡನು.

ನಮ್ಮಲ್ಲಿ ಸತಿ ಅನಸೂಯೆಯಿಂದ ತ್ರಿಮೂರ್ತಿಗಳು ನಗ್ನಭಿಕ್ಷೆ ಬೇಡಿದ ಪುರಾಣ ಕಥೆಯು ಪ್ರಸಿದ್ಧವಾಗಿದೆ. ಆದರೆ ಈ ಗಾಡಿವಾಳ ಅಥವಾ ಇಣಕಿ ನೋಡಿದ ಟಾಂನ ಕಥೆ ಅದಕ್ಕಿಂತ ಪ್ರಭಾವಿಯಾಗಿದೆ.

## ೧೧. ರಾಜಾ ಆರ್ಥರನ ದುಂಡು ಮೇಜು

*"ದುಂಡು ಮೇಜಿನ ಪರಿಷತ್ತು" ಎಂಬ ಮಾತನ್ನು ನಾವೆಲ್ಲರೂ ಕೇಳಿದ್ದೇವೆ. ಯಾವುದಾದರೊಂದು ಪ್ರಶ್ನೆಯನ್ನು ಎಲ್ಲ ಪಕ್ಷದವರೂ ಒಂದೆಡೆ ಕೂತು ಚರ್ಚಿಸುವುದಕ್ಕೆ, ಈ ಹೆಸರು ಬಿದ್ದಿದೆ. ಗಾಂಧೀಜಿ ಬ್ರಿಟನ್ನಿನಲ್ಲಿ ನಡೆದ ಇಂಥ ಒಂದು ಪರಿಷತ್ತಿಗೆ ಹೋದದ್ದು ಭಾರತದ ಇತಿಹಾಸದಲ್ಲಿ ಅಂಕಿತವಾಗಿದೆ. ಆದರೆ ಈ ಮಾತಿನ ಮೂಲ ೧,೫೦೦ ವರ್ಷ ಹಿಂದಿನ ಬ್ರಿಟಿಷ್ ಚರಿತ್ರೆಯಲ್ಲಿ ಇದೆ. ಅರಾಜಕತೆಯಲ್ಲಿ ತೊಳಲುತ್ತಿದ್ದ ಇಂಗ್ಲೆಂಡಿನಲ್ಲಿ ಶಾಂತಿ ವ್ಯವಸ್ಥೆಗಳನ್ನು ನೆಲೆಗೊಳಿಸಿದ ರಾಜಾ ಆರ್ಥರ್ ಬ್ರಿಟಿಶ್ ಇತಿಹಾಸದ ವಿಕ್ರಮಾದಿತ್ಯನೆನ್ನಬಹುದು. ಅವನ ವೀರ ಸರದಾರರನ್ನು ಕಲೆಹಾಕಿ ದುಂಡುಮೇಜಿನ ಸುತ್ತ ಸಮಸ್ಯೆಗಳನ್ನು ಚರ್ಚಿಸಿ ನಿರ್ಣಯ ತೆಗೆದುಕೊಳ್ಳುತ್ತಿದ್ದುದರಿಂದ ಈ ಮೇಜು ಇಂಗ್ಲಿಷ್ ಭಾಷೆಯಲ್ಲಿ ಶಾಶ್ವತ ಸ್ಥಾನ ಪಡೆದಿದೆ. ರಾಜಾ ಆರ್ಥರನ ಕಥೆಯನ್ನು ಇಲ್ಲಿ ಸಂಗ್ರಹಿಸಲಾಗಿದೆ.*

ಬಹು ಪ್ರಾಚೀನ ಕಾಲದಲ್ಲಿ ಬ್ರಿಟನ್ನನ್ನು ಒಂದು ನೂರು ವರ್ಷ ರೋಮನ್ನರು ಬಂದು ಆಳಿದರು. ರೋಮನ್ನರು ಚೆನ್ನಾಗಿಯೇ ಆಳಿದರು. ಅವರು ಬ್ರಿಟನ್ನಿನ ಜನಕ್ಕೆ ನಾಗರಿಕತೆಯನ್ನು ಕಲಿಸಿದರು. ಅವರ ಬುನಾದಿಯ ಗೊಡ್ಡು ಬದುಕು ತಿದ್ದಿ, ನರಬಲಿ ಕೊಡುವ ಅವರ ಮೂಢ ನಂಬಿಗೆಗಳನ್ನು ಬಿಡಿಸಿ ತಮ್ಮ ಸಂಸ್ಕೃತಿಯನ್ನು ಹಾಕಿಕೊಟ್ಟರು. ರೋಮನ್ನರ ಆಳ್ವಿಕೆಯಲ್ಲಿ ಬ್ರಿಟನ್ನು ಸೌಮ್ಯವಾಯಿತು. ಕ್ರೈಸ್ತ ಧರ್ಮವನ್ನು ಅಂಗೀಕರಿಸಿತು.

ಆದರೆ ಮುಂದೆ ರೋಮನ್ನರ ಸಾಮ್ರಾಜ್ಯದ ಮೇಲೆ, ರೋಮ್ ನಗರದ ಮೇಲೆಯೇ ಬರ್ಬರರ ದಾಳಿಯಾಯಿತು. ಆಗ ತಮ್ಮ ಮೂಲ ರಾಜ್ಯದ ಸಂರಕ್ಷಣೆಗೆ ಅವರು ಈ ಬ್ರಿಟನ್ನಿನ ದೂರದ ಸಾಮ್ರಾಜ್ಯವನ್ನು ಕೈಬಿಟ್ಟು ಸೈನ್ಯ ಹೊರಟು ಹೋದರು.

ಒಮ್ಮೆಲೆ ದೊರೆತ ಈ ಸ್ವಾತಂತ್ರ್ಯದಿಂದ ಬ್ರಿಟನ್ನಿನ ಜನ ಕಂಗೆಟ್ಟರು. ದೀರ್ಘ ಕಾಲ ಸುರಾಜ್ಯಕ್ಕೆ ಮೈಯೊಗ್ಗಿಕೊಂಡ ಗುಲಾಮ ರಾಷ್ಟ್ರ ಒಮ್ಮೆಲೆ ಸ್ವರಾಜ್ಯವನ್ನು ದಕ್ಕಿಸಿಕೊಳ್ಳಲಾರದಾಯಿತು. ಯೂರೋಪಿನ ದಂಡೆಯಿಂದ ಸ್ಯಾಕ್ಷನ್ ಎಂಬ ಕಾಡು ತಂಡಗಳ ದಾಳಿ ಬ್ರಿಟನ್ನಿನ ಮೇಲೆ ಆಯಿತು. ದೇಶದಲ್ಲಿ ಅರಾಜಕ ಅವ್ಯವಸ್ಥೆ ನೆಲಸಿತು. ಪಾಳೆಯಗಾರರ ಪುಂಡ ಪೈಪೋಟಿ ಹೆಚ್ಚಿತು. ರೋಮನ್ನರನ್ನೆ ತಿರುಗಿ ಬಂದು ಆಳಬೇಕೆಂದು ಮೊರೆಯಿಡಲು ಮಂದಿಯು ರೋಮಿಗೆ ಹೋದರು! ಆದರೆ ರೋಮನ್ನರು ಮರಳಿ ಬರಲಿಲ್ಲ.

ಇಂಥ ದಾರುಣ ದುರ್ದೆಸೆಯಲ್ಲಿ ದೇಶದ ದುಃಖವನ್ನು ದೂರ ಮಾಡಲು ಆರ್ಥರ್ ದೊರೆಯು ಉದಿಸಿಬಂದನು. ಅವನು ಎಲ್ಲಿ, ಯಾವಾಗ ನಿಶ್ಚಿತವಾಗಿ ಆಳಿದನೆಂಬುದು ಗೊತ್ತಿಲ್ಲ.

ಅವನ ಅರಮನೆ ಲಂಡನ್ನಿನ ಬಳಿ ವೆಸ್ಟ್ ಮಿನಿಸ್ಟರಿನಲ್ಲಿ ಇತ್ತು. ವಿಂಚೆಸ್ಟರಿನಲ್ಲಿಯೂ ಅವನು ಆಸ್ಥಾನ ನೆರೆಯಿಸುತ್ತಿದ್ದನು.

ಅರ್ಥರನ ಹುಟ್ಟು ಗುಟ್ಟು ಎಲ್ಲ ಚಿದಂಬರ ರಹಸ್ಯ, ಮರ್ಲಿನ್ ಬ್ಲೇಯಿಸ್ ಮುಂತಾದ ಮಹಾಮಾಂತ್ರಿಕರಿಗೆ ಅದು ಗೊತ್ತಿರಬೇಕು. ಮರ್ಲಿನ್ ಆರ್ಥರನಿಗೆ ತೀರ ಹತ್ತಿರದವನು. ಆದರೆ ಅವರಾರೂ ಆ ಗುಟ್ಟನ್ನು ಬಯಲು ಮಾಡಲಿಲ್ಲ. ಅವನ ಹುಟ್ಟಿನ ಒಂದು ವೃತ್ತಾಂತ ಹೀಗೆ:

ಇಂಗ್ಲೆಂಡಿನಲ್ಲಿ ಉಥರ್ ಎಂಬ ಕ್ರೂರ, ದುಷ್ಟ ರಾಜನಿದ್ದ, ಯಗರ್ನ್ ಎಂಬ ಒಬ್ಬ ಚೆಲುವೆಯನ್ನು ಮದುವೆಯಾಗಲು ಉಥರ್ ಹೊಂಚು ಹಾಕಿದನು. ಅವಳು ಗೊರ್ಲೊಯಿಸ್ ಎಂಬ ಸರದಾರನ ಹೆಂಡತಿ, ಆದರೆ ಈ ವಿಧಿನಿಷೇಧವನ್ನು ಕ್ರೂರನಾದ ಉಥರ್ ಪಾಲಿಸುವವನೇ? ಆತನು ಗೊರ್ಲೊಯಿಸನನ್ನು ಕೊಂದು ಅವನ ಹೆಂಡತಿಯನ್ನು ಅಪಹರಿಸಿ ಮದುವೆಯಾದನು. ಮಂತ್ರವಾದಿಗಳ ಸಹಾಯದಿಂದ

ಗೊರ್ಲೋಯಿಸನ ರೂಪ ಧರಿಸಿ ಮೊದಲು ಅವಳ ಶೀಲಭಂಗ ಮಾಡಿ ಅಂದೇ ರಾತ್ರಿ ಅವಳ ಗಂಡನನ್ನು ಕೊಂದು ಅವಳನ್ನು ಮದುವೆಯಾದನೆಂದೂ ಹೇಳುತ್ತಾರೆ. ಆದರೆ ಮದುವೆಯಾದ ಕೆಲವೇ ತಿಂಗಳಲ್ಲಿ ಉಥರ್ ಸತ್ತನು. ಆತ ಸತ್ತ ದಿನವೇ ರಾತ್ರಿ ಯಗರ್ನ್ ಒಂದು ಗಂಡು ಕೂಸನ್ನು ಹೆತ್ತಳು, ಆ ಕೂಸೇ ಆರ್ಥರ್ ಆದರೆ ಆತ ಯಾರ ಮಗ? ಅವನ ತಂದೆ ಉಥರನೋ, ಗೊರ್ಲೋಯಿಸೋ?

ಪಟ್ಟಕ್ಕೆ ಹಕ್ಕುದಾರ ಹುಟ್ಟಿದನಾದರೂ ಈ ಕೂಸಿನ ಕ್ಷೇಮದ ಆಶೆ ಇದ್ದಿಲ್ಲ, ರಣಹದ್ದುಗಳಂತೆ ಹಲವಾರು ಮನ್ನೆಯರು ಉಥರನ ಗದ್ದುಗೆ ಎತ್ತಿಹಾಕಲು ಸಿದ್ಧರಾಗಿದ್ದರು. ಅವರಿಂದ ಪಾರು ಮಾಡಿ ಬಾಲ ಆರ್ಥರ್‌ನನ್ನು ಕಾಪಾಡುವ ಹೊಣೆಯನ್ನು ಮಾಂತ್ರಿಕನೂ ಕಾಲಜ್ಞಾನಿಯೂ ಆದ ಮರ್ಲಿನ್ ಎಂಬಾತ ವಹಿಸಿಕೊಂಡನು. ಮರ್ಲಿನ್ ಆ ಶಿಶುವನ್ನು ಸರ್ ಆಟಿಟನ್ ಎಂಬ ಸರದಾರನ ವಶಕ್ಕೆ ರಕ್ಷಣೆಗಾಗಿ ಒಪ್ಪಿಸಿದನು. ಶ್ರೀಕೃಷ್ಣನು ನಂದಗೋಕುಲದಲ್ಲಿ ಬೆಳೆದಂತೆ ಅಲ್ಲಿ ಆರ್ಥರನು ಪ್ರವರ್ಧಮಾನನಾದನು.

ಇನ್ನೊಂದು ಕಥೆಯ ಪ್ರಕಾರ ಆರ್ಥರನು ಸಮುದ್ರದಲ್ಲಿ ತೇಲಿ ಬಂದು ಇಂಗ್ಲೆಂಡಿನ ದಡದಲ್ಲಿ ಒಗೆಯಲ್ಪಟ್ಟ ಪವಾಡ ಶಿಶುವಾಗಿದ್ದನು. ಅವನನ್ನು ಮರ್ಲಿನ್ "ಈತನೇ ದೊರೆ ಈತನೇ ಉಥರನ ಉತ್ತರಾಧಿಕಾರಿ" ಎಂದು ಸಾರಿದನು. ಇದ್ದರೂ ಇರಬಹುದು, ಆರ್ಥರ್ ಇತರ ಬ್ರಿಟನ್ನರಂತೆ ಕಾಣುತ್ತಿದ್ದಿಲ್ಲ. ಉಥರ್, ಗೊರ್ಲೋಯಿಸ್, ಯಗರ್ನ ಇವರೆಲ್ಲ ತುಸು ಕಂದಿ ಕೆಂಪು. ಆದರೆ ಆರ್ಥರ್ ಹೆಚ್ಚು ಬೆಳ್ಳಗೆ, ಬ್ರಿಟನ್ನರ ಕೂದಲು ಕಪ್ಪು, ಆದರೆ ಇವನದು ಹೊಂಬಣ್ಣದ್ದು.

ಅಂತೂ ಸರ್ ಆಂಟನ್ ಆರ್ಥರನನ್ನು ಚೆನ್ನಾಗಿ ಜೋಪಾನ ಮಾಡಿದನು. ಉತ್ತಮ ಸೈನಿಕ ಶಿಕ್ಷಣ ಕೊಟ್ಟನು. ಮರ್ಲಿನ್ ಅವನನ್ನು ಒಳ್ಳೆಯ ಜ್ಞಾನಿಯಾಗಿ ಮಾಡಿದನು. ಆದರೆ ತನ್ನ ಇಂದ್ರಜಾಲ ಮಾಂತ್ರಿಕ ಮಾಟವನ್ನು ಏನೂ ಕಲಿಸಲಿಲ್ಲ,

ಆರ್ಥರ್ ಕತ್ತಿ-ಕುದುರೆ ಕಾಳಗಗಳ ಎಲ್ಲ ತಂತ್ರಗಳಲ್ಲಿ ನಿಷ್ಣಾತನಾದ ವೀರನಾದನು. ಆತ ಧೀರನೂ ಧೀಮಂತನೂ ಇದ್ದಂತೆಯೇ ಸೌಮ್ಯನೂ ದಯಾಳುವೂ ಆಗಿದ್ದನು.

ಒಂದು ದಿನ ಆರ್ಥರನು ಗುರು ಮರ್ಲಿನ್ನನ ಸಂಗಡ ಒಂದು ಸರೋವರದ ತೀರದಲ್ಲಿ ನಡೆದಿದ್ದಾಗ ಒಬ್ಬ ಹೆಂಗಸಿನ ಬಿಳಿಯ ರೇಶಿಮೆಯನ್ನು ತೊಟ್ಟ ನೀಳ್ತೋಳ್ ಇದ್ದಕ್ಕಿದ್ದಂತೆ ಆ ಕೊಳದ ನಡುವಿನಿಂದ ಮೇಲೆದ್ದಿತು. ಅದರ ಕೈಯಲ್ಲಿ ಒಂದು ಖಡ್ಗ ಇತ್ತು. ಆರ್ಥರ್ ಚಕಿತನಾಗಿ ಒಂದು ದೋಣಿಯನ್ನೇರಿ ಸರೋವರದ ಮಧ್ಯಕ್ಕೆ ಹೋಗಿ ಆ ಖಡ್ಗವನ್ನು ತೆಗೆದುಕೊಂಡನು. ಅದರ ಹಿಡಿಕೆಯು ಅದ್ಭುತ ರತ್ನಗಳಿಂದ ಖಚಿತವಾಗಿತ್ತು. ಅದರ ಅಲುಗಿನ ಒಂದು ಮಗ್ಗಲಿಗೆ "ನನ್ನನ್ನು ತೆಗೆದುಕೊ" ಎಂದೂ ಇನ್ನೊಂದು ಮಗ್ಗಲಿಗೆ "ನನ್ನನ್ನು ಬಿಸಾಡು" ಎಂದೂ ಕೊರೆದಿತ್ತು. ಅದನ್ನು ಓದಿ ಆರ್ಥರ್ ನೊಂದುಕೊಂಡನು, ಅದರೆ ಗುರು ಮರ್ಲಿನ್ ಹೇಳಿದನು-"ಅದನ್ನು ತೆಗೆದುಕೋ ಮತ್ತು ಹೊಯ್ಯು, ಅದನ್ನು ಬಿಸಾಡುವ ವೇಳೆ ಇನ್ನೂ ದೂರವಿದೆ."

ಆರ್ಥರ್ ಆ ಖಡ್ಗವನ್ನು ಎತ್ತಿಕೊಂಡನು. ಅದನ್ನು "ಎಕ್ಸ್-ಕ್ಯಾಲಿಬರ್" (ಉಕ್ಕನ್ನು ಕಡಿಯುವಂಥದು) ಎಂದು ಕರೆದನು. ಯಾವ ಕವಚವೂ ಅದನ್ನು ತಡೆಯದು. ಮುಂದೆ ಆ ಖಡ್ಗವೇ ಎಲ್ಲ ಯುದ್ಧಗಳಲ್ಲಿ ಆರ್ಥರ್ ದೊರೆಯನ್ನು ಅಜೇಯನನ್ನಾಗಿ, ಅಪ್ರತಿರಥನನ್ನಾಗಿ ಮಾಡಿತು.

ಕೆಮೆಲೋಟಿನ (ಈಗ ವಿಂಚೆಸ್ಟರ್) ಪ್ರಾರ್ಥನಾ ಮಂದಿರಲ್ಲಿ ಆರ್ಥರನಿಗೆ ಮರ್ಲಿನ್ ಪಟ್ಟಾಭಿಷೇಕವನ್ನು ಮಾಡಿದನು. ಉಥರ್ ಸತ್ತು ಬಹು ಕಾಲವಾದರೂ ಇಂಗ್ಲೆಂಡಿಗೆ ಯೋಗ್ಯ ದೊರೆ ಇನ್ನೂ ಪಟ್ಟಕ್ಕೆ ಬಂದಿದ್ದಿಲ್ಲ. ಈಗಲೂ ಅನೇಕರು ಆರ್ಥರನನ್ನು ಒಪ್ಪಲಿಲ್ಲ. ಆತ ಉಥರನ ಮಗನೇ ಅಲ್ಲವೆಂದು ಜರೆದವರೂ ಕೆಲವರಿದ್ದರು. ಆದರೆ ಒಳ್ಳೆಯ ಮನ್ನೆಯರೆಲ್ಲ ಅವನನ್ನು ಒಡೆಯನೆಂದು ಒಪ್ಪಿ ರಾಜನಿಷ್ಠೆಯ ಶಪಥವೆತ್ತಿದರು. ಅಂಥ ಮನ್ನೆಯರನ್ನೆಲ್ಲ ಮುಂದೆ ಕರೆದು ಮರ್ಲಿನ್ ಅವರಿಂದ ಈ ಪ್ರತಿಜ್ಞೆಗಳನ್ನು ಮಾಡಿಸಿದನು: "ರಾಜನ ಗೌರವವನ್ನು, ಆಜ್ಞೆಯನ್ನು

ಪಾಲಿಸುತ್ತೇನೆ. ಒಬ್ಬಳೇ ಹೆಣ್ಣನ್ನು ಪ್ರೀತಿಸುತ್ತೇನೆ. ಮತ್ತು ಅವಳಿಗೆ ಪ್ರಾಮಾಣಿಕವಾಗಿ ನಡೆಯುತ್ತೇನೆ. ಮತ್ತು ಯಾವಾಗಲೂ ಶುದ್ಧ ಮತ್ತು ಪವಿತ್ರ ಚರಿತ್ರವನ್ನು ಪಾಲಿಸುತ್ತೇನೆ." ಇವರೇ ಸುಪ್ರಸಿದ್ಧ ದುಂಡು ಮೇಜಿನ ಸರದಾರರು (ನೈಟ್ಸ್) ಅರ್ಥರನ ಸಭಾ ಮಂದಿರದಲ್ಲಿ ಇವರೆಲ್ಲರೂ ಸುತ್ತು ಸರಿಸಮಾನವಾಗಿ ಕೂಡ್ರಲು ಮರ್ಲಿನ್ ಒಂದು ದೊಡ್ಡ ದುಂಡು ಮೇಜನ್ನು ಮಾಡಿಸಿದ್ದನು.

ಅನಂತರ ಆರ್ಥರ್‌ನ ಪರಾಕ್ರಮದ ಪರೀಕ್ಷೆಯ ಪ್ರಸಂಗ ಶೀಘ್ರವೇ ಬಂದಿತು. ಕ್ಯಾಮಿಲಿಯಾರ್ಡ್ ಸಂಸ್ಥಾನದ ಲಿಯೊಡೊಗ್ರಾನ್ - ಎಂಬ ರಾಜ ರಾಜಾ ಆರ್ಥರ್‌ನಲ್ಲಿ ಸಹಾಯಕ್ಕಾಗಿ ಮೊರೆಯಿಟ್ಟನು. ಅವನ ರಾಜ್ಯದಲ್ಲಿ ಕಾಡುನಾಯಿ-ತೋಳಗಳು, ಅತ್ತ ಸ್ಯಾಕ್ಸನ್ ಬಳಗಗಳು ದಾಳಿ ಇಟ್ಟು ಜನರನ್ನು ಹಣ್ಣು ಮಾಡಿದ್ದವು.

ಆರ್ಥರ್ ಅವನ ನೆರವಿಗೆ ಧಾವಿಸಿದನು. ಅವನ ಸ್ವಾಗತಕ್ಕೆ ಆ ರಾಜಧಾನಿಯ ಬೀದಿಗಳಲ್ಲಿ ಜನಸ್ತೋಮ ನೆರೆದಿತ್ತು. ಆ ನೆರವಿನಲ್ಲಿ ರಾಜಕುಮಾರಿ ಗನಿವರ್ ನಿಂತಿದ್ದಳು, ಆಗಿನ ರಾಜಕುಮಾರಿಯರಲ್ಲಿಯೇ ಅವಳು ಪರಮ ಸುಂದರಿಯೆಂದು ಖ್ಯಾತಿ ಇತ್ತು, ಅವಳೂ ರೂಪಗರ್ವಿತೆ. ಆರ್ಥರ್ ತನ್ನ ಇತರ ಸರದಾರರಂತೆಯೇ ಕವಚ ಶಿರಸ್ತ್ರಾಣಗಳನ್ನು ತೊಟ್ಟಿದ್ದನು. ಆದ್ದರಿಂದ ಗನಿವರಳಿಗೆ ಅವನು ಯಾರೆಂದು ಗೊತ್ತಾಗಲಿಲ್ಲ. ಆದರೆ ಅವನು ಆಕೆಯನ್ನು ಗುರುತಿಸಿದನು. ಅವಳ ಲಾವಣ್ಯಕ್ಕೆ ಸೋತು ಅವಳೇ ನನ್ನ ರಾಣಿಯಾಗಬೇಕೆಂದು ಆಗಲೇ ಮನದೊಳಗೆ ನಿರ್ಧರಿಸಿಯೂ ಬಿಟ್ಟನು. ಕೆಲವೇ ಕಾಳಗಗಳನ್ನು ಘನಘೋರವಾಗಿ ಹೂಡಿ ಗೆದ್ದು ಸಾಕ್ಸನ್ನರನ್ನು ಅವರ ಹಡಗುಗಳಿಗೆ ಹೊಡದಟ್ಟಿದನು. ಆಮೇಲೆ ಕಾಡು ಪಶುಗಳನ್ನೆಲ್ಲ ಬೇಟೆ ಆಡಿ ಆ ನಾಡನ್ನು ನಿರ್ಭಯಗೊಳಿಸಿದನು. ಇನ್ನು ಉಳಿದದ್ದು ಒಂದೇ, ಗನಿವರಳನ್ನು ರಾಣಿಯನ್ನಾಗಿ ಮಾಡಿಕೊಳ್ಳುವ ಕಾರ್ಯ.

ಆದರೆ ಅದರ ಪ್ರಸ್ತಾಪವೆತ್ತುವ ಮೊದಲು ಕೆಟ್ಟ ವಾರ್ತೆ ಬಂದಿತು. ಅವನ ಪಟ್ಟವನ್ನೇ ಒಪ್ಪದ ಸರದಾರರು ಅವನ ವಿರುದ್ಧ ಬಂಡೆದ್ದಿದ್ದರು. ಆದ್ದರಿಂದ ಆರ್ಥರ್

ಕ್ಯಾಮಿಲಿಯಾರ್ಡಿನಿಂದ ಹೊರಟನು. ಬಂಡುಗಾರನಿಗೆ ಅವನ ಮಲ ಸೋದರಿಯ ಗಂಡ ಲೋಟ ದೊರೆಯು ಪಿತೂರಿಯಾಗಿದ್ದನು. ಬಂಡುಗಾರರ ಬಲ ಹೆಚ್ಚಿತ್ತು. ಆದರೆ ಆರ್ಥರನ ಕೈಯಲ್ಲಿ ದಿವ್ಯ ಎಕ್ಸ್‌ಕ್ಯಾಲಿಬರ್ ಇತ್ತು. ಅವನ ಸುತ್ತಲೂ ಅನನ್ಯ ನಿಷ್ಠೆಯ ಪಣ ತೊಟ್ಟ ದುಂಡು ಮೇಜಿನ ಸರದಾರ ಸಂಗಾತಿಗಳಿದ್ದರು. ದಿನವಿಡೀ ತುಮುಲ ಯುದ್ಧವಾಯಿತು. ಕೊನೆಗೆ ಆರ್ಥರ್‌ನಿಗೇ ಗೆಲುವಾಯಿತು. ಬಂಡುಗಾರರು ದಿಕ್ಕೆಟ್ಟು ಓಡಿದರು.

ಇನ್ನು ಅವನ ಪಟ್ಟಕ್ಕೆ ಕುತ್ತು ಉಳಿಯಲಿಲ್ಲ. ಇನ್ನು ಉಳಿದದ್ದು ಪಟ್ಟದರಾಣಿಯ ಆಗಮನ ಒಂದೇ, ಆರ್ಥರ್ ರಾಜಧಾನಿ ಬಿಟ್ಟು ಹೋಗುವಂತಿದ್ದಿಲ್ಲ, ಆದ್ದರಿಂದ ವಧುವನ್ನು ಯಾಚಿಸಲು ತಮ್ಮ ನಚ್ಚಿನ ನಂಬುಗೆಯ ಸರದಾರ ಸರ್ ಬೆಡಿವರನನ್ನೂ ಇನ್ನಿಬ್ಬರನ್ನೂ ಲಿಯೊಡೊಗ್ರಾನ್ ದೊರೆಯಲ್ಲಿ ಕಳುಹಿದನು.

ಅವರು ಹೋಗಿ ಕನ್ನೆಯನ್ನು ಬೇಡಿದರು ಲಿಯೊಡೊಗ್ರಾನ್ ಕೃತಜ್ಞನಿದ್ದನು. ಆದರೆ ಆರ್ಥರನ ಕುಲ, ಜನ್ಮ ರಾಜಪದವಿಯ ಬಗೆಗೆ ತಿಳಿಯದೆ ಹೆಣ್ಣು ಕೊಡುವದು ಹೇಗೆ? ಅದೇ ಸಮಯ ಆರ್ಥರನ ಸೋದರಿ ಬೆಲ್ಲೆಸೆಂಟ್ ತನ್ನ ಇಬ್ಬರು ಹುಡುಗರೊಂದಿಗೆ ಅಲ್ಲಿಗೆ ಬಂದಿದ್ದಳು. ಅವಳನ್ನು ಆತ ಕೇಳಿದನು. ಬೆಲ್ಲೆಸೆಂಟ್ ಆರ್ಥರನ ಜನ್ಮರಹಸ್ಯವನ್ನು ಅರುಹುವಾಗ ತನ್ನ ಇಬ್ಬರು ಹುಡುಗರನ್ನು ಅಲ್ಲಿಂದ ಹೋಗಲು ಹೇಳಿದಳು, ಹಿರಿಯವನು ಗಾಸ್ವೆನ್, ಜಿಗಿದೆದ್ದು ಹೊರಟುಹೋದನು, ಆದರೆ ಕಿರಿಯ ಮಾಡ್ರೆಡ್ ಮಹಾಧೂರ್ತ, ರಹಸ್ಯವೆಂದೊಡನೆ ಹೊರಗೆ ಹೋಗಿ ಬಾಗಿಲಿನಾಚೆ ನಿಂತು ಕೇಳಿದನು.

ಬೆಲ್ಲೆಸೆಂಟ್ ಲಿಯೊಡೊಗ್ರಾನ್‌ನಿಗೆ ಆರ್ಥರನ ಹುಟ್ಟು ಸಾವುಗಳ ಗುಟ್ಟನ್ನು ಅರುಹಿದಳು. ಆರ್ಥರ್ ಸಾಯಲಾರನು, ಆದರೆ ಸದೇಹ ನಿರ್ಯಾಣ ಮಾಡುವನೆಂದು ಮರಿನ್ ಹೇಳಿದ ಸಂಗತಿಯನ್ನು ಆಕೆ ತಿಳಿಸಿದಳು, ರಾಜನಿಗೆ ಸಮಾಧಾನವಾಗಿ ತಾನು ಗನಿವರಳನ್ನು ಅರ್ಪಿಸುವೆನೆಂದು ಆತ ಸರ್ ಬೆಡಿವರನೊಂದಿಗೆ ನಿರೂಪ ಕಳಿಸಿದನು.

ಆಗ ಆರ್ಥರ್ ತನ್ನ ಇನ್ನೊಬ್ಬ ವಿಶ್ವಾಸಿಕ ಸರದಾರ ಸರ್ ಲಾನ್ಸಲಾಟನನ್ನು ಗನಿವರಳನ್ನು ತರಲು ಕಳುಹಿದನು, ಅವನು ಅವಳನ್ನು ಕರೆತರಲು ಹೋದಾಗ ವಸಂತ ಮಾಸ, ಶೃಂಗಾರ ಮಾಸ, ಸರ್ ಲಾನ್ಸಲಾಟನೂ ಆರ್ಥರ್‌ನ ಮನ್ನೆಯರ ಮಂಡಳದಲ್ಲಿಯೇ ಮನ್ಮಥನಂತೆ ಮನೋಹರನು. ಅವನು ಇಂಗ್ಲೆಂಡಿನಲ್ಲಿಯೇ ಅಪ್ರತಿಮ ವೀರನಾಗಿದ್ದನು, ಹೆಂಗಳೆಯರು ಅವನಿಗಾಗಿ ಹಂಬಲಿಸುತ್ತಿದ್ದರು. ಆತನೋ ಯಾರನ್ನೂ ಹಚ್ಚಿಕೊಳ್ಳದೆ ಬ್ರಹ್ಮಚಾರಿಯಾಗಿದ್ದನು, ನೋಡಿದೊಡನೆ ಗನಿವರಳು ಅವನನ್ನು ಮೋಹಿಸಿದಳು. ಅವನ ಚೆಲುವಿಗೆ ಕರಗಿದಳು, ಆದರೆ ಸುಮ್ಮನಿದ್ದಳು. ಅರ್ಥರ್ ದೇವರಂತೆ. ಲಾನ್ಸಲಾಟ್ ಸುಂದರ ಪುರುಷ. ದೇವರಲ್ಲಿ ಭಕ್ತಿ, ಪೂಜೆ ಈ ಪುರುಷನಲ್ಲಿ ಪ್ರಣಯವೇ ಸಾಧ್ಯ.

ಆದಾಗ್ಯೂ ಮಹಾ ವಿಜೃಂಭಣೆಯಿಂದ ರಾಜಾ ಆರ್ಥರನ ಮದುವೆ ಗನಿವರಳೊಂದಿಗೆ ಜರುಗಿತು. ಆತ ಪರಮ ತೃಪ್ತನಾದನು. ಅವಳ ಅಂತರಂಗ ಅವನ ಸರಳ ಮನಸ್ಸಿಗೆ ತೋಚಲೇ ಇಲ್ಲ. ಸರ್ ಲಾನ್ಸಲಾಟನಿಗೂ ಅದು ತೋಚಿದ್ದಿಲ್ಲ.

ಮದುವೆಯೊಂದಿಗೆ ರಾಜಾ ಆರ್ಥರ್‌ನಿಗೆ ಅನರ್ಥ ಪರಂಪರೆಯ ಆರಂಭವಾಯಿತೆನ್ನಬಹುದು. ಮದುವೆಯ ಮೇಜವಾನಿ ನಡೆದಾಗಲೇ ರೋಮಿನಿಂದ ಕಪ್ಪಕಾಣಿಕೆ ಬೇಡಲು ದೂತರು ಬಂದರು. ಆದರೆ ಆರ್ಥರ್ ಈಗ "ಇಂಗ್ಲೆಂಡ್ ಸ್ವತಂತ್ರ, ರೋಮ್ ಸಾಮ್ರಾಜ್ಯಕ್ಕೆ ಒಳಪಟ್ಟಿಲ್ಲ, ಆದ್ದರಿಂದ ಕಪ್ಪಕಾಣಿಕೆ ಇಲ್ಲ" ವೆಂದು ನಿರಾಕರಿಸಿ ಕಳುಹಿದನು. ಅವರು ಹೋರಾಡಲು ಪಡೆಗಳನ್ನು ಕಳುಹಿಸಿದರು. ಅವನ್ನು ಧೀರ ಆರ್ಥರ್ ಸೋಲಿಸಿ ಸದೆಬಡಿದನು. ಅನೇಕ ಬಂಡುಗಾರ ಮನ್ನೆಯರನ್ನು ಸ್ಯಾಕ್ಸನ್ ದಾಳಿಗರನ್ನು ಆತ ಪರಾಭವಗೊಳಿಸಿ ತನ್ನ ದುಂಡು ಮೇಜಿನ ಮನ್ನೆಯರ ಸಹಾಯದಿಂದ ದೇಶದಲ್ಲಿ ಭದ್ರವಾದ ಸತ್ತೆಯನ್ನು ಸ್ಥಾಪಿಸಿದನು. ಹಿರಿ ಕಿರಿ ಸರದಾರರನ್ನು ರಾಜರುಗಳನ್ನು ತಗ್ಗಿಸಿ ತನ್ನ ಸತ್ತೆಗೆ ಒಳಪಡಿಸಿದನು. ಪ್ರಜೆಗಳಿಗೆ ಕಾಡು

ಮೃಗಗಳ ಬಾಧೆಯೂ, ದಾಳಿಗಾರರ ಭಯವೂ, ಕಳ್ಳಕೊಳ್ಳೆಗಾರರ ಉಪಟಳವೂ ಇಲ್ಲವಾಯಿತು.

ಆರ್ಥರ್‌ನು ಆದರ್ಶ ರಾಜನಾದನು. ಅವನ ಆದರ್ಶ ರಾಜ್ಯದ ಸ್ಥಾಪನೆ ವ್ಯವಸ್ಥೆ ವಿಸ್ತಾರಗಳಿಗೆ ಅವನ ಮನ್ನೆಯರು ಹೇಗೋ ಮಾಂತ್ರಿಕ ಗುರು ಮರ್ಲಿನನೂ ಕಾರಣನು. ಆದರೆ ವಿಪತ್ತಿನಲ್ಲಿ ಒಟ್ಟಾಗಿ ನಿಂತ ದುಂಡು ಮೇಜಿನ ಈ ಸರದಾರರು ಸಂಪತ್ತಿನಲ್ಲಿ ಬಿರುಕು ಬಿಟ್ಟರು. ಆ ಸರದಾರರಲ್ಲಿ ಗ್ಯಾಲ್ಹಾಡ್, ಪರ್ಸೀವಲ್, ಗೇರಿಯಂಟ್, ಗಾರೆಥ್, ಸರ್ ಲಾನ್ಸಲಾಟ್, ಸರ್ ಬೆಡಿವರ್ ಪ್ರಭೃತಿ ಅತಿರಥ ಮಹಾರಥಿಗಳಾಗಿದ್ದರು. ಆದರೆ ಇವರೆಲ್ಲ ಸಿಡಿದೆದ್ದರು.

ಇದೆಲ್ಲದ್ದಕ್ಕೂ ಮೂಲ ಮಹಾರಾಣಿ ಗನಿವರ್, ಮಾನವಶ್ರೇಷ್ಠನಾದ ಪತಿಯನ್ನು ಪ್ರೇಮಿಸುವದು ಅವಳಿಂದಾಗಲಿಲ್ಲ, ಸರ್ ಲಾನ್ಸಲಾಟನ ಮೇಲೆ ನೆಟ್ಟುಹೋಗಿದ್ದ. ಮನವನ್ನು ಕದಲಿಸುವುದೂ ಆಗಲಿಲ್ಲ, ಪಂದ್ಯಾಟಗಳಲ್ಲಿ ಪ್ರತಿಯೊಬ್ಬ ಸರದಾರನನ್ನು ಸೋಲಿಸಿ ಅತಿ ಶ್ರೇಷ್ಠನೆಂದು ಸರ್ ಲಾನ್ಸಲಾಟ್ ಸಾರಲ್ಪಟ್ಟಾಗ ಅವಳ ಕಣ್ಣುಗಳು ಪ್ರೇಮದಿಂದ ಥಳಹಳಿಸುತ್ತಿದ್ದವು. ಅವನ ಮೇಲೆ ಅವಳ ಅನುಗ್ರಹ ವ್ಯಕ್ತವಾಗಿಯೇ ಕಾಣಬರುತ್ತಿತ್ತು. ಯಾವ ಹೆಣ್ಣಿಗೂ ಮನವೊಪ್ಪಿಸದ ಲ್ಯಾನ್ಸಲಾಟ್ ಅವಳಲ್ಲಿ ಅನುರಕ್ತನಾದ, ಅವರು ಗುಪ್ತವಾಗಿ ಬೆರೆಯುತ್ತಿದ್ದರು. ಆದರದು ಬಹಳ ಕಾಲ ಗುಪ್ತವಾಗಿ ಉಳಿಯಲಿಲ್ಲ, ಮೆಲ್ಲಮೆಲ್ಲನೆ ಈ ಪ್ರಣಯ ದುಂಡು ಮೇಜಿನ ಸರದಾರರಲ್ಲಿ ಗುಜು ಗುಜು ಮಾತಿನ ವಿಷಯವಾಯಿತು.

ಸರದಾರರಲ್ಲಿ ಪರಸ್ಪರ ಛಿದ್ರಗಳು ಬೆಳೆದವು. ಯುದ್ಧವೊಂದರಲ್ಲಿ ಹೊರತು ಉಳಿದ ಸಮಯ ಅವರು ಒಗ್ಗಟ್ಟಾಗುವುದು ಅಸಂಭವವೆನಿಸಿತು. ಮಾಂತ್ರಿಕ ಪುರೋಹಿತ ಮರ್ಲಿನ್ ಬದುಕಿದ್ದರೆ ದುಂಡುಮೇಜು ಒಡೆಯುವುದನ್ನು ತಪ್ಪಿಸುತ್ತಿದ್ದವೇನೋ, ಆದರೆ ವಿವಿಯನ್ ಎಂಬ ಅರಮನೆಯ ದಾಸಿ ಮಂಥರೆಯಂತೆ ಉಪ್ಪುಂಡವರ ನಾಶಕ್ಕಾಗಿ ಗಂಟುಬಿದ್ದಳು. ಅವಳು ಸವಿಮಾತು

ವಂಚಕವಿನಯಗಳಿಂದ ವೃದ್ಧ ಮರ್ಲಿನನನ್ನು ಮರುಳು ಮಾಡಿ ಅವನ ಮರಣಕ್ಕೆ ಕಾರಣವಾಗಬಹುದಾದ ಏಕಮಾತ್ರ ಅಭಿಚಾರೋಪಾಯದ ಗುಟ್ಟು ತಿಳಿದುಕೊಂಡಳು. ಅನಂತರ ಅನಿಮಿತ್ತ ದ್ವೇಷಿಯಾದ ಅವಳು ಮರ್ಲಿನನನ್ನು ಮೋಸದಿಂದ ಅಡವಿಯ ಒಂದು ಮರದ ಪೊಟರೆಯಲ್ಲಿ ಮಂತ್ರಬದ್ಧನಾಗಿಸಿ ಸೆರೆಯಿಟ್ಟಳು. ರಾಣಿಗೂ ಸರ್ ಲಾನ್ಸಲಾಟನಿಗೂ ಇದ್ದ ಗುಪ್ತ ಸಂಬಂಧವನ್ನು ರಾಜನ ಕಿವಿಗೂ ಹಾಕಿದಳು. ಉದಾತ್ತ ಜೀವಿಯಾದ ಆತ ಈ ಚಾಡಿಯನ್ನು ನಂಬಲೊಪ್ಪಲಿಲ್ಲ. ಆದರೆ ಮನದಲ್ಲೇ ಅದು ಕೊರೆಯತೊಡಗಿತು.

ಮರ್ಲಿನ್ ಪೊಟರೆಯಲ್ಲಿಯೇ ನವೆದು ಮೃತನಾದನು. ಸರ್ ಗ್ಯಾಲ್ಹಾಡ್- ದುಂಡುಮೇಜಿನ ಮನ್ನೆಯರಲ್ಲಿಯೇ ಅತಿ ಪವಿತ್ರಾತ್ಮನೆನಿಸಿದ್ದನು-ಇಹಲೋಕವನ್ನು ಬಿಟ್ಟು ತೆರಳಿದನು, ಸರ್ ಪರ್ಸೀವಲ್ ಆಸ್ಥಾನದ ಬದುಕಿಗೆ ಹೇಸಿ ಸಂನ್ಯಾಸಿ ಆಗಿಬಿಟ್ಟನು.

ಇದೀಗ ದುಷ್ಟ ಮಾಡ್ರೆಡನಿಗೆ ಸುಲಭ ಸಂಧಿ, ಹಿಂದೆ ತಾಯಿ ಬೆಲ್ಲೆಸೆಂಟಳ ಬಾಯಿಯಿಂದಲೇ ಕದ್ದು ನಿಂತು ಆತ ಆರ್ಥರ್‌ನ ರಹಸ್ಯವನ್ನು ಕೇಳಿದ್ದನು. ಅಂದಿನಿಂದಲೂ ಆರ್ಥರನ ನಾಶದ ಹೊಂಚು ಆತ ಹಾಕಿದ್ದನು. ಅಲ್ಲದೆ ಸರ್ ಲಾನ್ಸಲಾಟನನ್ನು ಆತ ದ್ವೇಷಿಸುತ್ತಿದ್ದನು. ಏಕೆಂದರೆ ಒಮ್ಮೆ ಗನಿವರ್ ತನ್ನ ಸಖಿಯರೊಂದಿಗೆ ಉಪವನದಲ್ಲಿ ಕೂತಿದ್ದಾಗ ಈ ಮಾಡ್ರೆಡ್ ಅಲ್ಲಿಯೂ ಏನಾದರೊಂದು ಗೌಪ್ಯವನ್ನು ಕೇಳಬೇಕೆಂದು. ಆವಾರದ ಗೋಡೆಯ ಮೇಲೆ ಅಡ್ಡ ಬಿದ್ದು ಕಿವಿಗೊಟ್ಟು ಕದ್ದು ಕೇಳುತ್ತಿದ್ದನು. ಆಗ ಅದೇ ಹಾದಿಯಲ್ಲಿ ಹೋಗುತ್ತಿದ್ದ ಸರ್ ಲಾನ್ಸಲಾಟ್ ಅವನನ್ನು ಕಾಲುಹಿಡಿದು ಜಗ್ಗಿ ಝಾಡಿಸಿ ಒಗೆದುಬಿಟ್ಟನು. ಆಮೇಲೆ ಲಾನ್ಸಲಾಟನಿಗೆ ತಿಳಿಯಿತು. ಈ ಕಳ್ಳ-ರಾಜನ ಸೋದರಳಿಯನೆಂದು ಆಗ ಮಾಡ್ರೆಡನ ಕ್ಷಮೆ ಕೋರಿದನು. ಆದರೆ ಈ ಅಪಮಾನದ ದ್ವೇಷವನ್ನು ಮಾಡ್ರಡ್ ಎಂದೂ ಮರೆಯಲಿಲ್ಲ

ಈ ಸಮಾಚಾರವನ್ನು ಸರ್ ಲ್ಯಾನ್ಸಲಾಟ್ ಹೇಳಿದೊಡನೆ ರಾಣಿಯ ಎದೆ ಧಸ್ಸೆಂದಿತು. ಈ ದುಷ್ಟ ತಮ್ಮಿಬ್ಬರ ಮಾನವನ್ನು ಬೀದಿಗೆಳೆಯದೆ ಬಿಡನೆಂದು ಅವಳಿಗೆ ತೋರಿತು.

ಭೀತಳಾದ ಅವಳೊಂದು ದಿನ ರಾತ್ರೆ ದೊಡ್ಡದೊಂದು ದುಃಸ್ವಪ್ನ ಕಂಡಳು. ಕರಾಳವಾದ ನೆರಳು ನಾಡಿನಲ್ಲೆಲ್ಲ ಉದ್ದಕ್ಕೂ ಚಾಚಿದ್ದು ಅದರಲ್ಲಿ ಪಟ್ಟಣಗಳು ಉರಿಯುತ್ತಿವೆ. ಮಂದಿ ಹೋರಾಡುತ್ತಿದ್ದಾರೆ. ಹೆಂಡಿರು ಮಕ್ಕಳ ಹಾಹಾಕಾರವೆದ್ದಿದೆ! ಏನೋ ಅನರ್ಥ ಬರಲಿದೆ. ಅದಕ್ಕೆ ಅವಳೇ ಮೂಲವಾಗಿದ್ದಾಳೆ.

ತತ್ತರಿಸಿದ ರಾಣಿ ಲ್ಯಾನ್ಸಲಾಟನಿಗೆ ಹೇಳಿದಳು: "ಓ ಲ್ಯಾನ್ಸಲಾಟ್, ನೀನು ನನ್ನ ಕಣ್ಣೆದುರಿನಿಂದ ನಿನ್ನ ದೂರದ ನಾಡಿಗೆ ಹೋಗು, ಇಲ್ಲಿದ್ದರೆ ನಾವಿಬ್ಬರೂ ಕೂಡುವೆವು. ಕೂಡಿದರೆ ಘೋರ ಅನರ್ಥವಾಗುವುದು." ಲ್ಯಾನ್ಸಲಾಟ್ "ಹೋಗುವೆ" ಎನ್ನುತ್ತ ಅಲ್ಲೇ ಇದ್ದುಬಿಟ್ಟ, ಅವನೂ ರಾಣಿಯೂ ಕೂಡುತ್ತಲೇ ಇದ್ದರು.

ಒಂದು ದಿನ ಮುಂಜಾನೆ ಆರ್ಥರ್ ದೊರೆಗೆ ರಾಜ್ಯದ ದೂರದ ಭಾಗದಿಂದ ಕರೆ ಬಂದಿತು. ಆತ ಅತ್ತ ಹೊರಟುಹೋದನು. ಹೋಗುವಾಗ ಮಾಡ್ರೆಡನಿಗೆ ತನ್ನ ವತಿಯಿಂದ ಆಡಳಿತ ನೋಡಲು ಹೇಳಿದನು.

ಅನರ್ಥಗಳಿಂದ ಕಂಗೆಟ್ಟ ರಾಣಿ "ಹೋಗು ಪ್ರಿಯಾ, ನನ್ನ ಮೇಲೆ ಪ್ರೀತಿಯಿದ್ದರೆ ಹೋಗು" ಎಂದಳು. ಪುನಃ ಒಮ್ಮೆ ಮಾತ್ರ ಕೂಡಿ ಅಗಲುವುದು ಎಂದು ಅವರು ನಿರ್ಧರಿಸಿದರು. ಅಂದು ರಾತ್ರಿ ಅವರು ಸಂಧಿಸಿದಾಗ ಹೊಂಚು ಹಾಕುತ್ತಿದ್ದ ಮಾಡ್ರೆಡ್ ತನ್ನ ಬಂಟರೊಡನೆ ಬಂದು, "ದ್ರೋಹೀ! ಬಾ ಹೊರಗೆ" ಎಂದು ಕೂಗಿದ, ಲ್ಯಾನ್ಸಲಾಟ ಎದ್ದು ಕ್ರೋಧದಿಂದ ಅವನ ಮೇಲೆ ನುಗ್ಗಿ ಅವನನ್ನು ಕೆಡಹಿದ. ಆತ ಮೂರ್ಛಿತನಾದ, ಆದರೆ ಆಗಬಾರದ್ದು ಆಗಿಹೋಗಿತ್ತು. "ಪ್ರಿಯೇ ನನ್ನೊಡನೆ ಬಂದುಬಿಡು! ನನ್ನ ಕೋಟೆಯಲ್ಲಿರು! ಪ್ರಪಂಚವೇ ಎದಿರುಬಿದ್ದರೂ ನಿನ್ನನ್ನ

ಕಾಪಾಡುವೆ" ಎಂದ ಲಾನ್ಸಲಾಟ್, ಆದರೆ ಅವಳು ಒಪ್ಪಲಿಲ್ಲ. "ನೀನಾದರೆ ಬಹ್ಮಚಾರಿ, ನಾನು ಅರಸನೊಬ್ಬನ ವಿವಾಹಿತ ಪತ್ನಿ, ನನ್ನದೆಲ್ಲ ಮುಗಿದುಹೋಯಿತು. ನೀನು ನಿನ್ನ ನಾಡಿಗೆ ಹೋಗು, ನನಗೊಂದು ಕುದುರೆ ತಾ" ಎಂದಳು. ಕುದುರೆ ಬಂತು. ಇಬ್ಬರೂ ದಾರಿ ಕವಲೊಡೆಯುವವರೆಗೆ ಜತೆಗೆ ಸಾಗಿದರು. ಅಲ್ಲಿ ಒಬ್ಬರನ್ನೊಬ್ಬರು ಚುಂಬಿಸಿ ಕಣ್ಣೀರುಗರೆದು ಅಗಲಿದರು.

ಆತ ತನ್ನ ನಾಡಿಗೆ ಸಾಗಿದ, ಅವಳು ಅಲೆನ್ಸಬರಿಯ ಸನ್ಯಾಸಿನೀ ಮಠಕ್ಕೆ ಹೋಗಿ ತಾನಾರಂದು ತಿಳಿಸದೆನೇ ಆಶ್ರಯ ಪಡೆದಳು. ಶೇಷ ಜೀವನವನ್ನು ಸನ್ಯಾಸಿನಿಯಾಗಿ ಕಳೆಯುವುದೆಂದು ನಿರ್ಧರಿಸಿದಳು.

ಇತ್ತ ಧೂರ್ತ ಮಾಡ್ರೆಡ್ ಲಾನ್ಸಲಾಟನು ಗನಿವರ ರಾಣಿಯನ್ನು ಫ್ರಾನ್ಸಿಗೆ ಕದ್ದೊಯ್ದನೆಂದು ಹೂಲಿ ಎಬ್ಬಿಸಿದನು. ಆರ್ಥರ್ ಹಿಂದಿರುಗಿ ಬಂದಾಗ ಅರಮನೆಯಲ್ಲಿ ರಾಣಿ ಇದ್ದಿಲ್ಲ, ಸುದ್ದಿ ಮಾತ್ರ ಹಬ್ಬಿತ್ತು. ಕೂಡಲೆ ಆರ್ಥರ್‌ನು ಲಾನ್ಸಲಾಟನ ಮೇಲೆಯೇ ದಂಡಯಾತ್ರೆ ಹೂಡಿದನು. ತಾನು ರಾಣಿಯನ್ನು ಕರೆತಂದಿಲ್ಲವೆಂದು ಸರದಾರದೂತನೊಂದಿಗೆ ತನ್ನ ದೊರೆಗೆ ಹೇಳಿ ಕಳುಹಿಸಿದರೆ ಆರ್ಥರ್ ನಂಬಲಿಲ್ಲ, ಲಾನ್ಸಲಾಟನಿಗೆ ಗನಿವರಳ ಪತ್ತೆಯೇ ಇದ್ದಿಲ್ಲ!

ಆರ್ಥರ್ ಲಾನ್ಸಲಾಟನ ಬೆನ್‌ವಿಕ್ ಕೋಟೆಗೆ ಮುತ್ತಿಗೆ ಹಾಕಿದನು. ಮೊದಲು ಸರ್ ಲ್ಯಾನ್ಸಲಾಟ್ ದೊರೆಯ ವಿರುದ್ಧ ಕೈ ಎತ್ತಲು ಸಿದ್ಧನಾಗಲಿಲ್ಲ. ಆರ್ಥರ್‌ನ ಪರವಾಗಿ ಮಾಡ್ರೆಡನ ಅಣ್ಣ ಗಾಸ್ಟೇನ್ ಮತ್ತೆ ಮತ್ತೆ ಲಾನ್ಸಲಾಟನನ್ನು ಯುದ್ಧಕ್ಕೆ ಆಹ್ವಾನಿಸಿದನು. ಆಗ ಕೆರಳಿ ಈ ಮಹಾ ವೀರನು ಗಾಸ್ಟೆನನೊಂದಿಗೆ ಗಂಟೆಗಟ್ಟಲೆ ಕಾದು ಗಾಸ್ಟೆನಿನ ಶಿರಸ್ತ್ರಾಣ ಒಡೆದು ತಲೆಯಲ್ಲಿ ಆಳವಾದ ಗಾಯವಾಗುವಂತೆ ಕತ್ತಿಯಿಂದ ಹೊಡೆದು ಕೆಡಹಿದನು.

ಸಾವಿರಾರು ನಂಬಿಗೆಯ ಸರದಾರರನ್ನು ಕಳೆದುಕೊಂಡು ರಾಜ ವಿಷಣ್ಣನಾಗಿದ್ದ, ಸಂಧಿ ಸಾಧಿಸಿ ರಾಜಧಾನಿಯಲ್ಲಿದ್ದ ಮಾಡ್ರೆಡ್ ತನ್ನ ಹಂಚಿಕೆಯ ಪ್ರಕಾರ ತಾನೇ ರಾಜನೆಂದು ಘೋಷಿಸಿದನು. ವಂಚನೆ ಹೊರಬಿತ್ತು. ಮಾಡ್ರೆಡ್ ಆರ್ಥರ್‌ನನ್ನು ಎದುರಿಸಲು ಡೋವ್ವರಿಗೆ ಬಂದನು. ಆರ್ಥರ್ ಅವನನ್ನು ಬಾರೆಂಡೌನ ಎಂಬಲ್ಲಿಗೆ ಹಿಮ್ಮೆಟ್ಟಿಸಿದನು. ಈಗ ಗಾಸ್ಟೆನ್ ಸಾಯಲು ಬಿದ್ದಿದ್ದನು. ಕೃತಕರ್ಮಕ್ಕಾಗಿ ಪಶ್ಚಾತ್ತಾಪಪಡುತ್ತಿದ್ದನು. ಸರ್ ಲಾನ್ಸಲಾಟನಿಗೆ ಪತ್ರ ಬರೆದನು. ತನ್ನನ್ನು ಕ್ಷಮಿಸಿ ದೊರೆಯ ನೆರವಿಗೆ ಧಾವಿಸಬೇಕೆಂದು.

ಇತ್ತ ಕ್ರೈಸ್ತ ಮಠದಲ್ಲಿ ಗನಿವರಳು ಪಶ್ಚಾತ್ತಾಪದಲ್ಲಿ ಕೊರಗಿದಳು. ಅವಳಿಂದಲೇ ದೇಶಕ್ಕೆ ದೊರೆಗೆ ಅನಿಷ್ಟ ಬಂತೆಂದು ಅವಳ ಇದುರಿಗೇ ಮಠದ ದಾಸಿ ಅನ್ನುತ್ತಿದ್ದಳು. ಆ ದಾಸಿಗೆ ಗೊತ್ತಿಲ್ಲ. ತಾನು ದೂಷಿಸುವ ರಾಣಿ ತನ್ನ ಮುಂದೆ ಕೂತಿದ್ದಾಳೆಂದು! ಅಷ್ಟರಲ್ಲಿ ಆ ಮಠದ ಹೊರಗೇ ಖರಪುಟಗಳ ಸದ್ದು ಕೇಳಿಸಿತು. ರಾಜಾ ಆರ್ಥರ್‌ನೇ ಅಲ್ಲಿಗೆ ಬಂದಿದ್ದನು. ಆರ್ಥರ್ ನೇರವಾಗಿ ಅವಳ ಕೋಣೆಗೇ ಬಂದನು. ಗನಿವರ್ ಭಯ ಲಜ್ಜೆ ಶೋಕಗಳಿಂದ ಅರ್ಧ ಮೂರ್ಛಿತಳಾಗಿದ್ದಳು. ದೊರೆಯು “ನಿನ್ನ ತಂದೆ ಭಾಗ್ಯವಂತ–ನೀನು ಕುಲಟೆಯೆಂದು ತಿಳಿಯುವ ಮೊದಲೇ ಮಡಿದನು! ನಾನೂ ಭಾಗ್ಯವಂತ, ನೀನು ನನಗಿನ್ನೂ ಒಬ್ಬ ಮಗನನ್ನು ಹೆತ್ತಿಲ್ಲ! ನಿನ್ನ ಮಕ್ಕಳು– ಬೆಂಕಿ ಮತ್ತು ಕತ್ತಿ. ಅರಾಜಕತೆ ಮತ್ತು ಸಾಕ್ಸನ್ನರ ಪ್ರತಿದಾಳಿ. ನಾನೂ ಲಾನ್ಸಲಾಟನೂ ಕೂಡಿ ಅವನನ್ನು ಹಿಮ್ಮೆಟ್ಟಿಸಿದ್ದೆವು. ಹನ್ನೆರಡು ಸಲ ಕಾಳಗವನ್ನು ಹೂಡಿ ಈಗ ನಿನ್ನಿಂದಾಗಿ ಅದೇ ಲಾನ್ಸಲಾಟನೊಂದಿಗೆ ನನ್ನ ಅತ್ಯಂತ ನಿಕಟಮಿತ್ರನೊಂದಿಗೆ ಹೋರಾಡಿ ಬಂದಿದ್ದೇನೆ. ದುಂಡು ಮೇಜಿನ ಅನೇಕ ಸರದಾರರು ನನಗಾಗಿ ಸತ್ತರು. ಸಾಯುತ್ತಿದ್ದಾರೆ. ಉಳಿದವರು ನಿನ್ನನ್ನು ರಕ್ಷಿಸುವರು, ನಾನು ಬದುಕಿರುವ ತನಕವೂ ನಿನ್ನ ಕೂದಲು ಕೂಡ ಕೊಂಕಲಿಕ್ಕಿಲ್ಲ. ಆದರೆ ನಾನೋ ಹಳೆಯ ಪ್ರವಾದಿ ಹೇಳಿದಂತೆ ನನ್ನ ನಿಯತಿಯನ್ನು ಎದುರಿಸಲು ಹೊರಟೆನು. ನೀನು ನನ್ನ ಬಾಳನ್ನು ನಾಡನ್ನು ಹಾಳು

ಮಾಡಿದಿ. ಆದರೂ ನಿನ್ನಲ್ಲಿ ನನ್ನ ಪ್ರೀತಿ ಇನ್ನೂ ಇದೆ. ನಿನ್ನನ್ನು ಬಯ್ಯಲು ನಾನು ಬಂದಿಲ್ಲ. ಇನ್ನು ನನ್ನ ನಿನ್ನ ಭೆಟ್ಟಿ ಸ್ವರ್ಗದಲ್ಲಿ ಹೋಗಿಬರುತ್ತೇನೆ" ಎಂದನು.

ಆರ್ಥರ್‌ನ ಇದಿರು ಮಾಡೆಡ್ ಹಿಂಜರಿಯುತ್ತ ಸಾಗಿದ-ಕಡಲ ತೀರದವರೆಗೆ ಅಲ್ಲಿ ಇತ್ತಂಡಗಳಲ್ಲಿ ಘೋರ ಸಂಗ್ರಾಮವೇ ಆರಂಭವಾಯಿತು! ಆರ್ಥರನ ರಣಕಹಳೆಗೆ ಅವನ ಸೈನಿಕರಲ್ಲಿ ಮಿಂಚು ಹರಿದಾಡಿತು. ಅವರು ಮುನ್ನುಗ್ಗಿದರು. ಆದರೆ ಅಷ್ಟರಲ್ಲಿ ಅವನ ಒಬ್ಬ ನಂಬಿಗಸ್ತ ಸರದಾರ ಗೇರಿಯಂಟ್ ಹಗೆಯ ಬಾಣದಿಂದ ಮಡಿದನು.

ಪಲಾಯನ ಮಾಡಿದ ಮಾಡ್ರೆಡ್ ಆರ್ಥರ್‌ನ ಮೇಲೆ ಒಮ್ಮೆಲೆ ತಿರುಗಿ ಬಿದ್ದನು. ಅರ್ಧ ಗಂಟೆ ಕಾಲ ನಿಕರದ ಕದನ ನಡೆಯಿತು. ಕೊನೆಗೆ ಕಣದಲ್ಲಿ ಮಾಡ್ರೆಡ್ ನಿಂತಿದ್ದ. ಆರ್ಥರ್ ಸಾಯುವ ಮೊದಲು ಮಾಡ್ರೆಡ್‌ನ ಎದುರಿಗೆ ಹೋಗಿ ತನ್ನ ಎಕ್ಸ್‌ಕ್ಯಾಲಿಬರ್ ಖಡ್ಗವನ್ನೆತ್ತಿ ಅವನನ್ನು ಇಬ್ಬಾಗ ಮಾಡಿ ಕೆಡಹಿದನು. ಆದರೆ ಕೆಡಹುವ ಮುಂಚೆ ಮಾಡ್ರೆಡ್ ಆರ್ಥರನ ತಲೆಗೆ ಕತ್ತಿಯಿಂದ ಆಳವಾದ ಗಾಯ ಮಾಡಿಯೇ ಬಿಟ್ಟನು.

ಆಗ ಸರ್ ಬೆಡಿವರ್ ತನ್ನ ಒಡೆಯನನ್ನು ಎತ್ತಿ ಗುಡ್ಡದ ತುದಿಯ ಒಂದು ಇಗರ್ಜಿಗೆ ಒಯ್ದನು. ಅಲ್ಲಿ ಒಯ್ದು ಆರ್ಥರನನ್ನು ಸಲದ ಮೇಲೆ ಮಲಗಿಸಿದನು. ಆಗ ಆರ್ಥರನಿಗೆ ನೆನಪಾಯಿತು, ಎಕ್ಸ್‌ಕ್ಯಾಲಿಬರಿನ ಇನ್ನೊಂದು ಬದಿಗೆ ಬರೆದ್ದು: "ನನ್ನನ್ನು ಬಿಸಾಡು." ಆರ್ಥರ್ ಬೆಡವರನಿಗೆ ಅಂದನು:

"ನನ್ನ ದುಂಡುಮೇಜು ಒಡೆಯಿತು. ಅದರ ಸರದಾರರು ಸಾವಿನ ಕಾವಿನಲ್ಲಿ ಒರಗಿದ್ದಾರೆ. ನಾನು ಒಂದು ರಾಷ್ಟ್ರವಾಗಿ ಕಟ್ಟಿದ ಜನರೇ ನನ್ನನ್ನು ಕೊಂದಿದ್ದಾರೆ. ಆದರೆ ನಾನು ಸಾಯುವುದಿಲ್ಲ. ಹೀಗೆಯೇ ಆಚೆಗೆ ಸಾಗುತ್ತೇನೆ. ಈ ಎಕ್ಸ್‌ಕ್ಯಾಲಿಬರ್ ಒಯ್ದು ಆ ಸರೋವರದಲ್ಲಿ ಒಗೆದು ಅಲ್ಲಿ ನಡೆದದ್ದನ್ನು ಬಂದು ಹೇಳು."

ಸರ್ ಬೆಡಿಯರ್ ಆ ದಿವ್ಯ ಖಡ್ಗವಿಡಿದು ಸರೋವರ ತೀರಕ್ಕೆ ಬಂದನು. ಅದನ್ನು ಒರೆಗಳೆದನು. ಅದು ಬೆಳದಿಂಗಳಲ್ಲಿ ಜ್ವಾಲೆಯಂತೆ ಮಿಂಚಿತು. ಅದರ ರತ್ನಖಚಿತ ಹಿಡಿಕೆಯೂ ಹಾಗೆಯೇ ಕಣ್ಣು ಕುಕ್ಕಿತು.

ಆಹಾ! ಇಂಥ ಖಡ್ಗವನ್ನು ನೀರಿಗೆ ಒಗೆಯುವುದೇ? ಆಸೆ ಬುರುಕತನದಿಂದ ಅವನು ಖಡ್ಗವನ್ನು ಅಲ್ಲೇ ಹುದುಗಿಸಿಟ್ಟು ಮರಳಿ ಬಂದು ಆರ್ಥರನಿಗೆ ಸುಳ್ಳು ಹೇಳಿದನು. ಆರ್ಥರ್ ಅವನನ್ನು ನಂಬದೆ ಮರಳಿ ಕಳಿಸಿದನು. ಬೆಡಿವರ್ ಮೂರು ಸಲ ಹೋದನು. ಮೂರು ಸಲ ದಿವ್ಯ ಖಡ್ಗವನ್ನು ಎಸೆಯಲಾರದೆ ಮರಳಿ ಬಂದನು.

ಕೊನೆಗೆ ಆರ್ಥರ್ ದೊರೆಗೆ ಕೋಪ ವಿಪರೀತವಾಯಿತು. “ಅಯ್ಯೋ ದುಷ್ಟ ದುರ್ದೈವಿ, ಶಠ ಹೃದಯದ ಸರದಾರ! ಈ ದೊರೆ ಸಾಯುವಾಗ ಅವನ ಶಕ್ತಿ ಅವನನ್ನು ಬಿಟ್ಟು ಹೋಗಬೇಕೆ? ನಾನು ಅಳಿಯುವ ತನಕವೂ ನನ್ನ ಆಜ್ಞೆ ನೀನು ಪಾಲಿಸಬೇಕು. ಹೇಳಿದ ಕರ್ತವ್ಯ ಮಾಡು, ಇಲ್ಲವಾದರೆ ಈ ನನ್ನ ಕೈಗಳಿಂದ ನಿನ್ನನ್ನು ಕೊಲ್ಲುವೆನು!” ಎಂದು ಅವನು ಕೆರಳಿ ಕೂಗಿದನು.

ಸರ್ ಬೆಡಿವರ ವಿಧಿಯಿಲ್ಲದೆ ಮತ್ತೆ ಹೊರಟನು. ಆತ ಎಕ್ಸ್‌ಕ್ಯಾಲಿಬರ್ ಎತ್ತಿ ಹಿಡಿದು ಕಣ್ಣು ಮುಚ್ಚಿಕೊಂಡು ಮತ್ತು ಎಲ್ಲ ಕಸುವಿನಿಂದ ಅದನ್ನು ನೀರಿಗೆ ಒಗೆದನು. ಅದು ಕೋಲ್ಮಿಂಚಿನಂತೆ ಝಗ್ಗನೆ ಬೆಳಗಿ ನೀರಿಗೆ ಎರಗಿತು. ಅಷ್ಟರಲ್ಲಿ ಒಂದು ಭುಜವು ನೀರಿನಿಂದೆದ್ದು ಅದನ್ನು ಹಿಡಿದು ಮೂರು ಸಲ ಝಳಪಿಸಿ ನೀರಿನಡಿಗೆ ಎಳೆದುಕೊಂಡು ಕಣ್ಮರೆ ಆಯಿತು.

ಈ ಸಲ ಸರ್ ಬೆಡಿವರ ಪರಮ ಸಂತೋಷದಿಂದ ಆಶ್ಚರ್ಯದಿಂದ ಓಡಿಬಂದು ತನ್ನ ದೊರೆಗೆ ನಡೆದುದನ್ನೆಲ್ಲ ಅರುಹಿದನು.

ಅನಂತರ ಆರ್ಥರ್ ತೇಕುತ್ತ ಕೊಳದ ತಡಿಗೆ ತನ್ನನ್ನು ಒಯ್ಯಲು ಹೇಳಿದನು.

ತೆರೆಗಳ ಅಬ್ಬರದೊಳಗಿನಿಂದ ವಿಲಾಪದ ದನಿಯೂ ಕೇಳಿಬಂದಿತು. ಮರುಕ್ಷಣಕ್ಕೆ ಒಂದು ದೊಡ್ಡ ದೋಣಿ ದಂಡೆಗೆ ಬಂದು ನಿಂತಿತ್ತು. ದೋಣಿಯಲ್ಲಿ ಮೂವರು ರಾಣಿಯರಿದ್ದರು. ಅವರು ಶ್ರದ್ಧೆ ಭರವಸೆ, ಪ್ರೀತಿಗಳ ದೇವತೆಯರಾಗಿದ್ದರು.

ಆರ್ಥರನನ್ನು ಅವನ ಆಜ್ಞೆಯಂತೆ ಸರ್ ಬೆಡಿವರ ಆ ದೋಣಿಯಲ್ಲಿ ಒರಗಿಸಿದನು. ಅದರಲ್ಲಿದ್ದವರು ಅವನನ್ನು ಬರಮಾಡಿಕೊಂಡರು. ಅವರಲ್ಲಿ ಅತಿ ಚೆಲುವೆ ಆರ್ಥರನ ತಲೆಯನ್ನು ತೊಡೆಯಲ್ಲಿ ಇರಿಸಿಕೊಂಡಳು. ಅವನ ಬಿಳಿಯ ಮುಖ ನೆತ್ತರದಿಂದ ಕಪಿಟ್ಟಿತ್ತು. ಜಯಸ್ತಂಭ ಮುರಿದು ಬಿದ್ದಂತೆ ಆರ್ಥರ್ ರಾಜನು ಒರಗಿದ್ದನು.

## ೧೨. ಹಿಯವಥಾ

*ಎಚ್. ಡಬ್ಲ್ಯೂ. ಲಾಂಗ್‌ಫೆಲೋ ಅಮೇರಿಕೆಯ ಒಬ್ಬ ಜಗತ್ಪ್ರಸಿದ್ಧ ರಾಷ್ಟ್ರಕವಿ– ಅಲ್ಲಿಯ ಕಳೆದ ಶತಮಾನದ ಮಹಾಕವಿ. ಅವನು ಹಳೆಯ ಅಮೇರಿಕೆಯ ಆದಿವಾಸಿಗಳ (ಕೆಂಪು ಇಂಡಿಯನ್ನರ) ಮಹಾಪುರುಷ ಹಿಯವಥಾನ ಕಥೆಯನ್ನು ಒಂದು ಜನಪ್ರಿಯ ಖಂಡ ಕಾವ್ಯವಾಗಿ ರೂಪಿಸಿದ್ದಾನೆ. ಹಿಯವಥಾನ ಕಥೆ ಪ್ರಪಂಚದ ಹಿರಿಯ ಆಖ್ಯಾಯಿಕೆಗಳಲ್ಲಿ ಒಂದು. ಕೆಂಪು ಇಂಡಿಯನ್ನರಿಗೆ ಹಿಯವಥಾ ಮೂಲಪುರುಷ, ಪವಾಡಪುರುಷ, ಒಬ್ಬ ಅವತಾರಿ, ಅವನ ಕಥೆಯಲ್ಲಿ ಚರಿತ್ರೆ ಮತ್ತು ಕಲ್ಪನೆ ಹಾಸುಹೊಕ್ಕಾಗಿ ಹೆಣೆದುಕೊಂಡು ಅದ್ಭುತ ರಮ್ಯತೆಯನ್ನು ನಿರ್ಮಿಸಿವೆ.*

*ಹಿಯವಥಾ ಯೋಧ; ಬುದ್ಧಿವಂತ, ಧೀರಶಾಂತ ನಾಯಕ. ಪ್ರಚಂಡ ಪರಾಕ್ರಮಿ ಆದರೂ ಹಿಂಸ್ರವೃತ್ತಿಯವನಲ್ಲ. ಪಶುಪಕ್ಷಿಗಳ ಮಾತನ್ನು ಬಲ್ಲ ವಿಶ್ವಾಮಿತ್ರ. ಅವನ ಬಳಿಯಲ್ಲಿ ಮಾಯೆಯ ಕೈಚೀಲಗಳಿದ್ದವು. ಅವನನ್ನು ತೊಟ್ಟರೆ ಆತ ಎಂಥ ಅದ್ಭುತ ಸಾಮರ್ಥ್ಯವನ್ನೂ ಪ್ರಕಟಿಸಬಲ್ಲ. ತನ್ನ ಜನರ ಕಲ್ಯಾಣಕ್ಕಾಗಿ, ತನ್ನ ಜಾತಿಯ ಉತ್ಥಾನಕ್ಕಾಗಿ ಹೆಣಗಿ ದೇವಕಲ್ಪನೆನಿಸಿಕೊಂಡ ಹಿಯವಥಾನ ಕಥೆಯನ್ನು ಇಲ್ಲಿ ಸಂಕ್ಷೇಪಿಸಿ ಕೊಡಲಾಗಿದೆ.*

೧

ಹಿಯವಥಾನ ತಂದೆ ಪಡುಗಾಳಿ ಎಂದು ಅಂದಿನ ಜನರ ನಂಬಿಕೆ. ತಂದೆಯ ಹೆಸರು ಮುಜೆಕೀವಿಸ್, ಈ ಹೆಸರಿನ ಅರ್ಥವೇ ಪಶ್ಚಿಮದ ಗಾಳಿ (ಹನುಮನಂತೆಯೇ ಹಿಯವಥ ಪವನಪುತ್ರ) ತಂದೆ ಮುಜೆಕೀವಿಸ್ ಮಹಾಕ್ರೂರ, ದುಷ್ಟ ಹಿಯವಥಾ ಹುಟ್ಟಿದೊಡನೆ ಅವನ ತಾಯಿ ವಿನೊನ್ನಾಳನ್ನು ಈ ತಂದೆ ಹಾಗೆಯೇ ಸಾಯಲು ಬಿಟ್ಟವನು. ಹಿಯವಥಾ ತಬ್ಬಲಿಯಾಗಿಯೇ ಬೆಳೆದನು. ಅವನ ಅಜ್ಜಿ ನೊಕೊಮಿಸ್

ಪುಟ್ಟ ಹಿಯವಥಾನನ್ನು ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡಿದಳು. ಈ ಅಜ್ಜಿಯಿಂದಲೇ ಆತ ನಿಸರ್ಗಪ್ರೇಮವನ್ನೂ ಪಶುಪಕ್ಷಿಗಳ ಭಾಷೆಯನ್ನೂ ಕಾಡಾಡಿ ಬದುಕಿನ ರಹಸ್ಯ ಸ್ವಾರಸ್ಯಗಳನ್ನೂ ಕಲಿತನು.

ಅಜ್ಜಿಯಂತೆಯೇ ಹಿಯವಥಾನಿಗೆ ಇನ್ನೊಬ್ಬ ಗುರು; ಅವನ ಹಳ್ಳಿಯ ಕತೆಗಾರ ಮುದಿ ಇಯಾಗೊ. ಊರ ಮಂದಿಗೆ ಹಳೆಯ ಕಥೆಗಳನ್ನು ಹೇಳುವ ಈ ಮುದುಕನು ಹಿಯವಥಾನಿಗೆ ಪುಟ್ಟ ಬಿಲ್ಲು-ಬಾಣಗಳನ್ನು ಮಾಡಿಕೊಟ್ಟು ಅವನ್ನು ಉಪಯೋಗಿಸಲಿಕ್ಕೆ ಕಲಿಸಿದನು. ಚಿಗರೆಯಂತೆ ಓಡಲು, ಮೀನಿನಂತೆ ಈಜಲು ಕಲಿಸಿದನು. ಮತ್ತು ಅಜ್ಜಿ ನೊಕೊಮಿಸ್ ಅವನಿಗಾಗಿ ಚಿಗರೆಯ ಚರ್ಮದಿಂದ ಅದ್ಭುತ ಕೈಚೀಲಗಳನ್ನು ಹೊಲಿದುಕೊಟ್ಟಳು. ಈ ಚೀಲಗಳನ್ನು ತೊಟ್ಟಾಗ ಅವನ ಕೈಗಳು ಎಂಥ ಬಂಡೆಗಳನ್ನೂ ಸುಲಭವಾಗಿ ಸೀಳಬಲ್ಲವು. ಮರಗಳನ್ನು ಮುರಿದು ಎತ್ತಿ ಒಗೆಯಬಲ್ಲವು.

ಹಿಯವಥಾ ಚಂಡವಿಕ್ರಮಿಯಾಗಿ ಬೆಳೆದನು. ಶೂರನೂ ಧೀರನೂ ಜಾಣನೂ ಆಗಿ ತನ್ನ ಜನರ ಧುರೀಣನಾದನು. ಅಜ್ಜಿ ನೊಕೊಮಿಸಳಿಂದ ಆತ ತಂದೆಯ ಕಥೆಯನ್ನು ಕೇಳಿದ್ದನು. "ಮುಜೆಕೀವಿಸ್‌ನಲ್ಲಿಗೆ ನಾನು ಹೋಗುವೆನು. ಪಡುಗಾಳಿಯ ಅಗಸೆಯನ್ನು ಹೊಕ್ಕುವನು!" ಎಂದು ಆತ ಅಜ್ಜಿಗೆ ಹೇಳಹತ್ತಿದನು. ತನ್ನ ತಾಯಿಗೆ ತೋರಿಸಿದ ಕ್ರೌರ್ಯದ ಕಥೆ ಕೇಳಿ ಮುಜೆಕೀವಿಸನ ಬಗೆಗೆ ಹಿಯವಥಾ ಉರಿದೆದ್ದು ಕಿಡಿಕಿಡಿ ಆಗಿದ್ದನು.

ಅಜ್ಜಿ ಎಷ್ಟು ಬೇಡವೆಂದರೂ ಆತ ಕೇಳಲಿಲ್ಲ. ತನ್ನ ಬಿಲ್ಲುಬಾಣ ಮತ್ತು ಮಾಯಾ ಕೈಚೀಲಗಳನ್ನು ತೆಗೆದುಕೊಂಡು ತಂದೆಯನ್ನು ಕಾಣಲು ಹಿಯವಥಾ ಹೊರಟನು. ರಾಕಿ ಪರ್ವತಗಳಲ್ಲಿ ಪಡುಗಾಳಿಯ ರಾಜ್ಯ. ಅಲ್ಲಿ ತಂದೆಯನ್ನು ಭೆಟ್ಟಿ ಆದನು. ತಂದೆಗೆ ಮಗನನ್ನು ಕಂಡೊಡನೆ ಪರಮಾನಂದವಾಯಿತು. ಬಹುಕಾಲ ತಂದೆ-ಮಗ ಬಗೆಬಗೆಯಾಗಿ ಮಾತುಕತೆ ನಡೆಯಿಸಿದರು. ಮುಜೆಕೀವಿಸ್ ತನ್ನ ಶಕ್ತಿಸಾಹಸಗಳ

ಬಗೆಗೆ ಬಹಳ ಜಂಬ ಕೊಚ್ಚಿಕೊಂಡನು. ಹಿಯವಥಾ ಉಕ್ಕುವ ಸಿಟ್ಟನ್ನು ಹತ್ತಿಕ್ಕಿ ಅದನ್ನೆಲ್ಲ ಕೇಳುತ್ತ ಕುಳಿತನು.

"ಓ ಮುಜೆಕೀವಿಸ್, ನಿನಗೆ ಯಾತರಿಂದಲೂ ಅಪಾಯವೆಂಬುದು ಇಲ್ಲವೆ? ಯಾವುದಕ್ಕೂ ನೀನು ಹೆದರುವುದಿಲ್ಲವೇ?" ಹಿಯವಥಾ ಕೇಳಿದನು.

"ನನಗೆ ಅದೊ ಆ ಬಂಡೆಗಲ್ಲಿನ ಹೊರತು ಬೇರೆ ಯಾತರ ಭಯವೂ ಇಲ್ಲ!" ಅಂದ ತಂದೆ. "ಮತ್ತೆ ಮಗನೇ, ನಿನಗೆ ಯಾತರಿಂದ ಭಯ?"

ಹಿಯವಥಾ ಮಹಾಚತುರ, ಸುಳ್ಳೇ ಹೇಳಿದ: "ಅದೋ ಆ ಪೊದೆಯಿಂದ!" ಪೊದೆಗೆ ಮುಜೆಕೀವಿಸ್ ಕೈಚಾಚಿದೊಡನೆ ಹಿಯವಥಾ ಹೆದರಿ ಹೌಹಾರಿದಂತೆ ಕೂಗಿಕೊಂಡನು.

ಆಮೇಲೆ ತಂದೆಯು ಹಿಯವಥಾನ ತಾಯಿಯ ವಿಚಾರ ಹೇಳತೊಡಗಿದನು. ಆಗ ಹಿಯವಾಥನಿಗೆ ಸಹಿಸಲು ಆಗಲಿಲ್ಲ. ಆತ ಒಮ್ಮೆಲೆ ನೆಗೆದು ಹಾರಿ ಹತ್ತಿರದ ಆ ಹೆಬ್ಬಂಡೆಯನ್ನು ಸೀಳಿ ಮುರಿದು ಎತ್ತಿ ತಂದೆಯ ತಲೆಗೆ ತೂರಿದನು. ಆದರೆ ಮುಜೆಕೀವಿಸನೂ ಮಗನಷ್ಟೇ ಚತುರನಿದ್ದ, ಆತನೂ ಸುಳ್ಳು ಹೇಳಿದ್ದ. ಅವನಿಗೆ ಆ ಬಂಡೆಯ ಭಯವೇನೂ ಇದ್ದಿಲ್ಲ. ಆತ ಮಗ ಹೇಳಿದ ಆ ಪೊದೆಯ ಟೊಂಗೆ ಕಿತ್ತು ಹಿಯವಾಥನ ಕಡೆಗೆ ಎಸೆದ. ಮಗ ಒಗೆದ ಬಂಡೆಯ ತುಂಡುಗಳನ್ನು ಬರೆ ಬಾಯಿಂದ ಊದಿದ ಉಸುರಿಗೆ ಹಾರಿಸಿಬಿಟ್ಟ, ಹಿಯವಥಾ ದೊಡ್ಡಕ್ಕೆ ನಕ್ಕುಬಿಟ್ಟ, ಪೂದೆಗೆ ಆತ ಅಂಜುವ ಆಳೇ?

ತಂದೆ ಮಗ ಇಬ್ಬರೂ. ಭೀಕರವಾಗಿ ಹೋರಾಡಿದರು. ಮೂರು ದಿನ ಅಹೋರಾತ್ರಿ ಕಾದಾಡಿದರು. ಗುಡ್ಡ ಬೆಟ್ಟ ನೆಲ ನೀರು ಎಲ್ಲ ಆ ಕದನದ ಕೋಲಾಹಲಕ್ಕೆ ಕಳವಳಗೊಂಡವು. ಕೊನೆಗೂ ತಂದೆ ಮಗ ಯಾರೂ ಸೋಲಲಿಲ್ಲ. ಪಡುಗಾಳಿಯ ಅಗಸೆಗೆ ಅವರು ತಲುಪಿದರು. "ನಿನ್ನ ಸತ್ವಪರೀಕ್ಷೆ ಆಯಿತು. ನೀನು ಶೂರ ಧೀರನಿರುವಿ.

ನೀನು ನನ್ನ ಮಗ. ನನ್ನನ್ನು ಕೊಲ್ಲಲಾರೆ. ನಿನ್ನ ಮನೆಗೆ ಹೋಗು. ನಿನ್ನ ಜನರೊಂದಿಗೆ ಬಾಳು. ಅವರಲ್ಲಿ ಕೆಲಸ ಮಾಡು. ಸತ್ತಮೇಲೆ ನೀನು ನನ್ನನ್ನು ಸೇರಿ ನನ್ನ ರಾಜ್ಯದಲ್ಲಿ ಪಾಲು ಪಡೆಯುವಿ" ಎಂದನು ತಂದೆ ಮುಜೆಕೀವಿಸ್.

೨

ರಾಕಿ ಪರ್ವತದಿಂದ ಮನೆಗೆ ಮರಳುವಾಗ ಹಿಯವಥಾ ದೆಕೋಥಾ ನಾಡಿನಲ್ಲಿ ತಂಗಿದನು. ಅವನ ಬಾಣಗಳನ್ನು ಅಲ್ಲಿಯ ಒಬ್ಬ ಮುದಿ ಬಾಣಗಾರನಲ್ಲಿ ಮಸೆದು ಮೊನೆ ಮಾಡಿಸಿಕೊಳ್ಳುವುದಿತ್ತು. ಆ ಮುದುಕನಿಗೆ ಕರಿಯಲೆಯ ನೀಲಗೂದಲಿನ ಒಬ್ಬ ಚೆಲುವೆಯಾದ ಮಗಳಿದ್ದಳು. ಅವಳ ಹೆಸರು ಮಿನೆಹ್ವಾ. ಆ ಹೆಸರಿನ ಅರ್ಥ ಕುಲುಕುಲು ನಗುವ ನೀರು ಎಂದು! ಅಲ್ಲಿಂದ ಬಾಣಗಳನ್ನು ಮಸೆದುಕೊಂಡು ಮನೆಗೆ ಬಂದರೂ ಹಿಯವಥಾನ ಎದೆಯಲ್ಲಿ ಆ ಚೆಲುವೆಯ ಬಾಣಕ್ಕಿಂತ ಹರಿತವಾದ ಮೊನೆನೋಟವು ನಟ್ಟಿತು. ಅವಳ ರೂಪು ಅವನ ಕಣ್ಣು ಕಟ್ಟಿತ್ತು. ಮಿನಹ್ವಾಳನ್ನು ಆತ ಮರೆಯಲಾರದಾದನು.

ಹಿಯವಥಾ ಅಜ್ಜಿಗೆ ಹೇಳಿದನು- ತನ್ನ ಈ ಪ್ರಣಯ ರಹಸ್ಯವನ್ನು ಒಂದು ಹೆಣ್ಣು ಹುಡುಕಿಕೊಂಡು ಅಷ್ಟು ದೂರ-ದೆಕೊಥಾ ನಾಡಿಗೆ ಹೋಗಬೇಕೆ? ಅಜ್ಜಿಯ ಸವಾಲು, ಆಕೆ ಉಪದೇಶವಿತ್ತಳು: "ಮದುವೆ ಬೇಕಿದ್ದರೆ ನಮ್ಮಲ್ಲಿಯ ಹೆಣ್ಣನ್ನೇ ಕಟ್ಟಿಕೊ. ಆ ದೆಕೋಥಾ ಜನರು ಕಾಡು ಪುಂಡರು, ನಮ್ಮ ಜನರೊಂದಿಗೆ ಆಗಾಗ್ಗೆ ಕಾದಾಡುತ್ತಿರುತ್ತಾರೆ. ನಮ್ಮ ಹಗೆಗಳ ಹೆಣ್ಣು ನಿನ್ನ ಹೆಂಡತಿ ಆಗಬೇಕೆ?"

ಆದರೆ ಹಿಯವಥಾ ಹೇಳಿದ: "ನಾನು ಅವಳನ್ನು ಮದುವೆ ಆದರೆ ನಾವೂ ಅವರೂ ಗೆಳೆಯರಾಗಿ ಬಾಳಬಹುದು. ಮತ್ತೆ ಕದನ ಕಾದಾಟ ಆಗಲಿಕ್ಕಿಲ್ಲ." ಹೀಗೆ ಅವನು ಅಜ್ಜಿಗೇ ಬುದ್ಧಿ ಹೇಳಿ ಮಿನೆಹ್ವಾಳನ್ನು ಒಲಿಸಿ ತರಲು ಹೊರಟನು. ಅಡವಿಯ

ದಾರಿಯಲ್ಲಿ ಒಂದು ಎರಳೆಯನ್ನು ಕೊಂದು ಹೆಗಲ ಮೇಲೆ ಹೊತ್ತು ತಾನು ಮೆಚ್ಚಿದ ಹೆಣ್ಣಿಗೆ ಉಡುಗೊರೆಯಾಗಿ ಒಯ್ದನು.

ಮುದುಕ ಅಂಬುಗಾರ ಅತಿಥಿಯನ್ನು ಔದಾರ್ಯದಿಂದ ಬರಮಾಡಿಕೊಂಡನು. ಹಿಯವಥಾ ತನ್ನ ಅಜ್ಜಿಯ ತನ್ನ ನಾಡಿನ ವೃತ್ತಾಂತವನ್ನೆಲ್ಲ ಬಣ್ಣಿಸಿದನು. ಮುದುಕನಲ್ಲಿ ಕನ್ನೆಗಾಗಿ ಬೇಡಿಕೆ ಇಟ್ಟನು. “ನಮ್ಮ ನಿಮ್ಮ ಬಣಗಳಲ್ಲಿ ಇನ್ನು ಶಾಂತಿ ನೆಲಸಲಿ, ನಿನ್ನ ಮಗಳು ನನ್ನ ಮಡದಿ ಆಗಲಿ” ಎಂದನು.

ಮುದುಕ “ನಗುವ ನೀರೆ”ಯ ಕಡೆಗೆ ನೋಡಿದನು. “ಮಿನೆಹ್ವಾ ಒಪ್ಪಿದರೆ ಸರಿ. ಏನೇ ಮಗು, ನಿನ್ನ ಬಯಕೆ ಏನು?” ಆ ಚೆಲುವೆ ತಂದೆಯ ಬಳಿಯಿಂದ ಎದ್ದು ಹೋಗಿ ಹಿಯವಥಾನ ಹತ್ತಿರ ಕೂತಳು. “ದೊರೆ, ನಾನು ನಿನ್ನ ಬೆನ್ನಿಗೆ ಬರುತ್ತೇನೆ” ಎಂದಳು.

ಮರುದಿನ ಮಿನೆಹ್ವಾಳೊಂದಿಗೆ ಹಿಯವಥಾ ತನ್ನ ನಾಡಿಗೆ ಹೊರಟನು ಮುದಿ ಅಂಬುಗಾರ ಒಬ್ಬನೇ ಉಳಿದನು. ಆತ ನಿಟ್ಟುಸಿರು ಬಿಟ್ಟ: “ಇದು ಹೀಗೆಯೇ ಆಗುವುದು, ನಮ್ಮ ಹೆಣ್ಣುನ ಮಕ್ಕಳನ್ನು ನಾವು ಸಾಕಿಸಲುಹಿ, ಮುದ್ದಿನಿಂದ ಬೆಳೆಸುತ್ತೇವೆ. ನಾವು ಮುದಿಯಾಗಿ ಅವರಿಂದ ಆರೈಕೆ ಬಯಸುತ್ತೇವೆ. ಅಷ್ಟರಲ್ಲಿ ಊರಿಗೆ ಒಬ್ಬ ಆಗಂತುಕ, ತೀರ ಅಪರಿಚಿತ ಬಂದುಬಿಡುತ್ತಾನೆ ಆತ ನಕ್ಕದ್ದೇ ತಡ, ಮುದಿ ತಂದೆಯನ್ನು ಮುದ್ದಿನ ಮನೆಯನ್ನು ಬಿಟ್ಟು ಮಗಳು ಆತನ ಬೆನ್ನಿಗೆ ಹೋಗಿಬಿಡುತ್ತಾಳೆ!”

## ೩

ಹಿಯವಥಾನಿಗೆ ಇಬ್ಬರು ಜೀವದ ಗೆಳೆಯರು. ಒಬ್ಬ ಚಿಬಿಯಾಬೋಸ್, ಹಾಡುಗಾರ. ಇನ್ನೊಬ್ಬ ಕ್ವಾಸಿಂದ, ಪ್ರಚಂಡ ಭೀಮ ಜಟ್ಟಿ,

ಚಿಬಿಯಾಬೋಸ ಹಾಡಿದರೆ ಜನವೆಲ್ಲಾ ಹುಚ್ಚೆದ್ದು ಕುಣಿಯುತ್ತಿದ್ದರು. ಅವನನ್ನು ಮುತ್ತಿ ಮತ್ತರಾಗಿ ನಲಿದಾಡುತ್ತಿದ್ದರು. ಆದರೆ ಅವನಲ್ಲಿ ಹಿಯವಥಾ ಇಟ್ಟ ಪ್ರೀತಿಯನ್ನು ಕಂಡು ದೇವತೆಗಳೇ ಹೇವಪಟ್ಟರು. ಹಿಯವಥಾನಿಗೆ ಈ ದೇವರ ಕೋಪ ಗೊತ್ತಾಯಿತು. ಆತ ಗೆಳೆಯ ಚಿಬಿಯಾಬೋಸರಿಗೆ ಎಚ್ಚರಿಕೆ ಇತ್ತನು. ಆದರೆ ಚಿಬಿಯಾಬೋಸ ನಕ್ಕುಬಿಟ್ಟ-ತನಗೆ ಯಾರೂ ಏನೂ ಮಾಡಲಾರರೆಂದ.

ಆದರೆ ಒಂದು ಚಳಿಗಾಲ, ನೆಲ ನೀರೆಲ್ಲ ಹೆಪ್ಪುಗಟ್ಟಿದಾಗ ಚಿಬಿಯಾಬೋಸ ಬೇಟೆಗೆ ಹೋದನು. ಅಲ್ಲಿ "ಹೆಗ್ಗಡಲ ನೀರ್" ಎಂಬ ಸರೋವರದ ನೀರು ಬರ್ಫವಾಗಿತ್ತು. ಚಿಗರೆ ಅದರ ಮೇಲಿಂದ ಓಡಿತು. ಚಿಲಿಯಬೋಸ ಅದನ್ನು ಬೆನ್ನಟ್ಟಿ ಓಡಿದನು. ಅದೆ ಹೊಂಚು ಸಾಧಿಸಿ ದೇವತೆಗಳು ಅವನ ಕಾಲ ಕೆಳಗಿನ ಹಿಮದ ಹಾಳೆಯನ್ನು ಒಡೆದರು. ಚಿಬಿಯಬೋಸ ಮುಳುಗಿ ಆ ಕೊಳದ ತಳ ಸೇರಿದನು. ಹಿಯವಥಾನ ಶೋಕಕ್ಕೆ ಎಣೆಯೇ ಉಳಿಯಲಿಲ್ಲ. ಏಳು ವಾರ ಸತ್ತ ಗೆಳೆಯನಿಗಾಗಿ ಅಳುತ್ತ ಅನ್ನ ನೀರು ಬಿಟ್ಟು ತಳಮಳಿಸಿದನು.

ಚಳಿ ಸರಿದು ಹಿಮ ಕರಗಿ ಕೊಳ ನೀರು ತುಂಬಿನಿಂತಾಗ ಚಿಬಿಯಾಬೋಸನ ಕಳೇಬರವನ್ನು ಹುಡುಕಿ ಎತ್ತಿ ತಂದು ಹಿಯವಥಾನೇ ಅದಕ್ಕೆ ಮಣ್ಣುಕೊಟ್ಟನು.

ಕ್ವಾಸಿಂದ ವಿಚಿತ್ರ ಆಸಾಮಿ. ಚಿಕ್ಕಂದಿನಿಂದಲೂ ನಿದ್ದಂಡಿ. ಶತ ಸೋಮಾರಿ. ಯಾವ ಕೆಲಸಕ್ಕೂ ಬಾರನೆಂದು ತಾಯಿಯ ದೂರು. ಆತ ಕೆಲಸಕ್ಕೆ ಕೈ ಹಾಕಿದರೆ ಮುಟ್ಟಿದ್ದೆಲ್ಲ ಚಿನ್ನ! ಅವನ ಮೈಕೈಗಳ ಕಸು ಬಲುಮೆ ಬಿರುಸುಗಳೇ ಅಷ್ಟು ಭಾರಿ! ಮೀನಿನ ಬಲೆಗಳನ್ನು ಹಿಂಡಿ ಒಣಗಿಸಲು ತಾಯಿ ಹೇಳಿದರೆ ಆತ ಅದನ್ನು ಹಿಡಿದು ಹಿಂಡಿದೊಡನೆ ಅವೆಲ್ಲ ಹರಿದು ಚೂರು! ತಂದೆಯೊಂದಿಗೆ ಬೇಟೆಗೆಂದು ಒಮ್ಮೆ ಹೋದಾಗ ಮರಗಳೆಲ್ಲ ಅಡ್ಡಬಿದ್ದು ದಾರಿಯೇ ಕಟ್ಟಾಗಿತ್ತು. ಆಗ ಒಂದೊಂದೇ ಮರವನ್ನು ಹಗುರಾಗಿ ಹೊತ್ತು ಹಾಕಿ ಆತ ತಂದೆಗೆ ಹಾಡಿ ಮಾಡಿಕೊಟ್ಟನು.

ಬೇಸಿಗೆ ಎಲ್ಲ ಬಯಲಲ್ಲಿ ಆಡಿ ಚಳಿಗಾಲವೆಲ್ಲ ಮನೆಯಲ್ಲಿ ಬೆಂಕಿಯ ಹತ್ತಿರ ಮೈ ಕಾಯಿಸಿಕೊಳ್ಳುತ್ತ ಕಳೆಯುವ ಭೂಪ ಕ್ವಾಸಿಂದ. ಆದಾಗ್ಯೂ ಆತ ಹಿಯವಥಾನ ಪಾಣಮಿತ್ರ, ಕಾಪಿನ ಆಳಿನಂತೆ ಅವನ ಬೆನ್ನಿಗೆ ಇರುತ್ತಿದ್ದನು. ಈಗಲೂ ಅಡವಿಯ ಜಡೆಮುನಿಗಳು ಈ ಗೆಳೆತನಕ್ಕೆ ಈರ್ಷೆಪಟ್ಟರು. ಮರದ ಬೀಜ ಬಿದ್ದು ಗಾಯವಾದರೆ ಅವನಿಗೆ ಸಾವು ಎಂದು ಈ ಕಾಡಿನ "ಕೀಳ"ಗಳು ಅರಿತಿದ್ದರು. ಒಮ್ಮೆ ಹೊಳೆಯಲ್ಲಿ ದೋಣಿಯಿಂದ ಕ್ವಾಸಿಂದ ಹೋಗುವಾಗ ಈ ಜಡೆಮುನಿಗಳು ಬಂಡೆಗಳ ಹಿಂದೆ ಅವಿತುನಿಂತು ಫರ್ ಬೀಜಗಳನ್ನು ಅವನ ತಲೆಗೆ ಗುರಿಯಿಟ್ಟು ಹೊಡೆದರು. ಕ್ವಾಸಿಂದ ದೋಣಿಯಿಂದ ಉರುಳಿ ಹೊಳೆಯಲ್ಲಿ ಬಿದ್ದು ಸತ್ತನು. ಆಮೇಲೆ ಬಿರುಗಾಳಿ ಎದ್ದಾಗ ಅಡವಿಯಲ್ಲಿ ಮರಗಳ ಟೊಂಗೆಗಳು ಮುರಿದುಬೀಳುವ ಸದ್ದು ಕೇಳಿಬರುವಾಗೆಲ್ಲ ಜನ ಪಿಸುಗುಡುತ್ತಿದ್ದರು: "ಅದೋ ಕ್ವಾಸಿಂದ. ಬೆಂಕಿಗಾಗಿ ಸೌದೆ ಕಲೆಹಾಕುತ್ತಿದ್ದಾನೆ!"

೪

ಹೀಗೆ ಒಬ್ಬೊಬ್ಬರಾಗಿ ಹಿಯವಥಾ ತನ್ನ ಜೀವದ ಗೆಳೆಯರನ್ನು ಕಳೆದುಕೊಂಡನು. ಆದರೂ ಆತನ ಧೈರ್ಯ ಸಾಹಸಗಳಿಗೆ ಚ್ಯುತಿ ಬರಲಿಲ್ಲ. ಆತ ಅಸಹಾಯಶೂರನು. ಆತ ಹಗುರಾದ ಒಂದು ದೋಣಿಯನ್ನು ಕಟ್ಟಿಕೊಂಡು "ಹೆಗ್ಗಡಲ್ನೀರಿ"ನಲ್ಲ ಹಾಯಿ ಬಿಚ್ಚಿ ಮೀನು ಹಿಡಿಯಲಿಕ್ಕೆ ಅಲೆದಾಡುತ್ತಿದ್ದನು. ಇದು ಬರಿಯ ಒಣಗು ಮೀನು ಅಲ್ಲ. ಮೀನುಗಳ ಅರಸು ನಾಹ್ಮಾ ಎಂಬ ಹೆಮ್ಮೀನು.

ಇತರ ಮೀನು ಮುಳ್ಳು ಮೀನು, ನೇಸರು ಮೀನು, ಕಣ್ಣಿಗೆ ಬಿದ್ದರೂ ನಾಹ್ಮಾ ಕಾಣಸಿಗುತ್ತಿದ್ದಿಲ್ಲ. ಆದರೆ ಒಂದು ದಿನ ಹಿಯವಥಾ ನಾಹ್ಮಾನನ್ನು ನೋಡಿದನು. ಆತ ಆ ಹೆಗ್ಗೊಳದ ತಳಕ್ಕೆ ಬಿಳಿಯ ಮಳಲಲ್ಲಿ ಮಲಗಿದ್ದನು.

ಹಿಯವಥಾ ಗಾಳ ಎಸೆದು ಕೂಗಿದ: “ಓ ನಾಹ್ಮಾ ಅಲ್ಲಿ ಅಡಗುವ ಏಕೆ? ಗಾಳ ಕಚ್ಚಿ ಮೇಲೆದ್ದು ಬಾ. ನೋಡೋಣ. ನಮ್ಮಿಬ್ಬರಲ್ಲಿ ಯಾರು ಹೆಚ್ಚು ಗಟ್ಟಿ!” ಆದರೆ ನಾಹ್ಮಾ ಕದಲಲಿಲ್ಲ. ತೆಪ್ಪಗೆ ಬಿದ್ದಿದ್ದ ಮುಳ್ಳುಮೀನಕ್ಕೆ ಹೇಳಿದ: “ಹಿಯವಥಾನ ಗಾಳ ಕಚ್ಚಿ ಹರಿದು ಹಾಕು!” ಆದರೆ ಗಾಳಕ್ಕೆ ಸಿಕ್ಕು ಮುಳ್ಳು ಮೀನೇ ಮೇಲೆ ಬಂದಿತು. ಹಿಯವಾಥನಿಗೆ ನಾಹ್ಮಾನೇ ಬೇಕು. ಆತ ಬಡಪಾಯಿಯಾದ. ಮುಳ್ಳು ಮೀನನ್ನು ತಿರುಗಿ ನೀರಿಗೇ ಒಗೆದನು! “ನೀನು ನನ್ನ ಮೀನಲ್ಲ! ನೀನು ಅರಸು ಮೀನಲ್ಲ!”

ಆಮೇಲೆ ನಾಹ್ಮಾ ನೇಸರು ಮೀನಿಗೆ ಅಪ್ಪಣೆ ಕೊಟ್ಟನು. ಅದರ ಗತಿಯೂ ಮುಳ್ಳು ಮೀನದಂತೆಯೇ ಆಯಿತು. ನೀರಿನಿಂದ ಮೇಲೆ ಬಂದು ಮತ್ತೆ ಅದು ನೀರುಪಾಲಾಯಿತು.

ಈಗ ನಾಹ್ಮಾ ಮೀನಿಗೆ ಸಿಟ್ಟು ನೆತ್ತಿಗೇರಿತು. ತಾನೇ ತಳದಿಂದ ಮೇಲೆದ್ದು ಬಂದು ಹಿಯವಥಾನ ಮೇಲೆ ನುಗ್ಗಿತು. ಅವನನ್ನೂ ಅವನ ದೋಣಿಯನ್ನೂ ಕೂಡಿಯೇ ನುಂಗಿತು!

ನಾಹ್ಮಾದ ಹೊಟ್ಟೆ ಕಗ್ಗವಿಯಲ್ಲಿ ಹಿಯವಥಾ ಸಿಲುಕಿ ಹೊರ ಬರಲು ಪೇಚಾಡಿದನು. ತನ್ನ ಕತ್ತಿಯಿಂದ ಅದನ್ನು ಒಳಗೆ ತಿವಿತಿವಿದು ಕೊಂದನು. ಆ ಹೆಮ್ಮೀನು ಹೊರಳಿ ಬಿದ್ದು ಸತ್ತಿತು. ದೊಡ್ಡ ತೆರೆ ಅದನ್ನು ದಂಡೆಗೆ ತಂದು ಒಗೆಯಿತು. ಆದರೆ ಹಿಯವಥಾ ಹೊರಗೆ ಬರುವದೆಂತು? ಅವನಿಗೆ ಹಕ್ಕಿಗಳ ಚಿಲಿಪಿಲಿ ಕೇಳಿಬಂದಿತು. ಮೀನಿನ ಹೆಣದ ಸುತ್ತಲೂ ಅವು ಕೂಗಾಡುತ್ತಿದ್ದವು. ಆತ ಹಕ್ಕಿಗಳಿಗೆ ಕೇಳಿಕೊಂಡನು- ನಾಹ್ಮಾನ ಪಕ್ಕದಲ್ಲಿ ತೂತು ಮಾಡಲಿಕ್ಕೆ. “ಓ ನಮ್ಮ ಅಣ್ಣ ಹಿಯವಥಾ ಒಳಗೆ ಸಿಕ್ಕುಬದ್ದಿದ್ದಾನೆ!” ಎಂದು ಆ ಕಡಲಹಕ್ಕಿಗಳು ಈ ಹೆಮ್ಮೀನಿನ ಪಕ್ಕದಲ್ಲ ಉದ್ದ ಸೀಳಿ ದ್ವಾರ ಮಾಡಿಕೊಟ್ಟವು. ಹಿಯವಥಾ ಕ್ಷೇಮದಿಂದ ಹೊರಬಿದ್ದು ಬಂದು ಅಜ್ಜಿಯನ್ನು ಕಂಡನು.

೫

ಮದುವೆ ಆಗಿ ಬಂದನಂತರ ಬಹಳ ವರ್ಷ ಹಿಯವಥಾ ಮಿನೆಹ್ಹಾಳೊಂದಿಗೆ ಸುಖವಾಗಿ ಬಾಳಿದನು. ಆದರೆ ಕೊನೆಗೂ ಆತ ದುರಂತ ನಾಯಕ.

ಒಂದು ಚಳಿಗಾಲ ಅವನ ನಾಡಿಗೇ ಬರಗಾಲ ಬಂದಿತು. ನೋಡಿದಲ್ಲೆಲ್ಲ ನೆಲ ನೀರು ಹೆಪ್ಪು ಹಿಮ. ಜನವೆಲ್ಲ ಆಹಾರವಿಲ್ಲದೆ ಕಾಯಿಲೆ ಬಿದ್ದರು. ಸಾಯಲು ಬಿದ್ದರು. ಕೂಸು ಕುನ್ನಿ ಜ್ವರದಿಂದ ನರಳಿ ಕೊನೆಯ ಉಸಿರು ಎಳೆದವು.

ಒಂದು ದಿನ ಬೇಟೆಯಾಡಿ ಹಿಯವಥಾ ಮನೆಗೆ ಬಂದಾಗ ನೋಡುತ್ತಾನೆ- ಅವನ ಮುದ್ದುಮೆಚ್ಚಿನ ಮಿನೆಹ್ಹಾ ಜ್ವರದಿಂದ ನರಳುತ್ತ ಹಸೆಯಲ್ಲಿ ಬಿದ್ದಿದ್ದಾಳೆ. ಆತ ಮತ್ತೆ ಅಡವಿಗೆ ಓಡಿದನು. ಏನಾದರೂ ಆಹಾರ ಹುಡುಕಲು "ಓ ದೇವರೇ, ನಿನ್ನ ಮಕ್ಕಳಿಗೆ - ನನ್ನ ಮುದ್ದು ಮಿನೆಹ್ಹಾಳಿಗೆ ಏನಾದರೂ ಆಹಾರ ನೀಡು, ನಾವು ಸಾಯುತ್ತಿದ್ದೇವೆ" ಎಂಡು ಕರುಳು ಕಿತ್ತುಕೊಳ್ಳುವಂತೆ ಕೂಗಹತ್ತಿದನು.

ಆದರೆ ಅವನ ಕೂಗಿಗೆ ಯಾರೂ ಓಗೊಡಲಿಲ್ಲ, ಅವನು ತಿರುಗಿ ಮನೆ ಸೇರಿದಾಗ ಅವನ ಕಣ್ಣಿನ ಬೆಳಕು ಬಾಳಿನ ಭರವಸೆ ಮಿನೆಹ್ಹಾ ಮಡಿದಿದ್ದಳು.

ಆಗಲೂ ಆತ ಏಳು ದಿನ ಹಗಲಿರುಳೂ ಹೆಂಡತಿಯ ಹಣದ ಹತ್ತಿರ ಕುಳಿತು ಅತ್ತನು. ಅವಳೊಂದಿಗೆ ಹಬ್ಬದಂತೆ ಕಳೆದ ಬದುಕು ಅವಳನ್ನು ಮೊದಲು ಮನೆಗೆ ಕರೆತಂದ ಆ ಬೇಸಗೆಯ ಶುಭದಿವಸ-ಎಲ್ಲವನ್ನೂ ಹಂಬಲಿಸಿ ಹಳಹಳಿಸಿದನು. ಏಳನೆಯ ದಿನ ಅವಳನ್ನೂ ಮಣ್ಣು ಮರೆ ಮಾಡಿದನು. 'ನಿನ್ನೊಂದಿಗೆ ನನ್ನ ಹೃದಯವನ್ನೂ ಹೂಳಿದ್ದೇನೆ, ನನ್ನ ವಿಚಾರ ನಿನ್ನ ಜತೆಗೇ ಹೋಗಿದೆ!' ಎಂದನು.

ಈಗ ಆತ ಸ್ವಸ್ಥಚಿತ್ತ, ತನ್ನ ಅವತಾರ ಕಾರ್ಯ ಸಮಾಪ್ತವಾಯಿತೆಂದು ಆತ ಅರಿತನು. ಹಿಯವಥಾ ಮಿನೆಹ್ಹಾಳನ್ನು -ನಗುವ ನೀರಿನ ಕುಲುಕುಲು ದನಿಯನ್ನು- ಹಿಂಬಾಲಿಸಿದನು. ಅಜ್ಜಿಯನ್ನು ಕರೆದು ಹೇಳಿದನು: “ಓ, ನೊಕೊಮಿಸ್, ನಾನು ಹೊರಟೆ ದೂರದ ದೀರ್ಘ ಯಾತ್ರೆಗೆ ಪಡುಗಾಳಿಯ ರಾಜ್ಯಕ್ಕೆ-ನನ್ನ ತಂದೆ ಮುಜೆಕೀವಿಸ್‌ನನ್ನು ಸೇರಲಿಕ್ಕೆ.”

ಅಜ್ಜಿಯನ್ನೂ ಸ್ವಜನರನ್ನೂ ಬೀಳ್ಕೊಂಡನು. ಹೆಗ್ಗಡಲ ನೀರ ಕೊಳದ ಅಂಚಿಗೆ ಹೋಗಿ ದೋಣಿಯನ್ನು ನೀರಿಗೆ ತಳ್ಳಿ ತಿರುಗಿ ನಿಂತು ಅಜ್ಜಿ ನೊಕೊಮಿಸ್‌ಳಿಗೆ ಕೈ ಯೆತ್ತಿ ಆಡಿಸಿ ಹೋಗಿ ಬರುವನೆಂದನು. ಅವನ ಜಾತಿ-ಜನವೆಲ್ಲ ತಡಿಯಲ್ಲಿ ನಿಂತು ಅವನ ನಿರ್ಯಾತವನ್ನು ನೋಡುತ್ತ ಕಣ್ಣೀರಿಟ್ಟರು. “ಹೋಗಿ ಬಾ, ದೇವರು ಒಳಿತು ಮಾಡಲಿ!” ಅವರು ಬಿಕ್ಕಿದರು, “ಹೋಗಿ ಬಾ, ನಮಸ್ಕಾರ ಹಿಯವಥಾ!”

ಮತ್ತು ಹಿಯವಥಾ ಅಸ್ತಮಿಸುವ ಸೂರ್ಯನ ಕಡೆಗೆ ತೆರಳಿ ಆ ಸಂಜೆಯ ಹೊಂಬೆಳಕಿನಲ್ಲಿ ಲೀನವಾದನು.

# ೧೩. ಅನುಪ ಮತ್ತು ಬಾತಾ

*ಇದೊಂದು ಇಜಿಪ್ತದ ಅತಿ ಪ್ರಾಚೀನ ಆಖ್ಯಾಯಿಕೆ, ಅನಂತರ ಪ್ರಪಂಚದ ಹೊರದೇಶಗಳ ಅನೇಕ ಪುರಾಣಗಳಲ್ಲಿ ಅದ್ಭುತರಮ್ಯ ಗಾಥೆಗಳಲ್ಲಿ ಈ ಆಖ್ಯಾಯಿಕೆಯ ಅಂಶಗಳು ಬಿಡಿಯಾಗಿ ಅರಳಿ ಹೆಣೆದುಕೊಂಡಿವೆ. ಬಗೆಬಗೆಯಾಗಿ ರೂಪಾಂತರಗೊಂಡಿವೆ. ಏಕೆಂದರೆ ಮಾನವ ಕುಲದ ಮೂಲದ ಸಾಮಯಿಕ ಮನಸ್ಸಿನ ಅಂತರಾಳದಲ್ಲಿಯೇ ಅವಿತು ಅದುಮಿನಿಂತ ಕೆಲವೊಂದು ಹುಚ್ಚು ಕೆಚ್ಚಿನ ಬಯಕೆ ಬೆದರಿಕೆಗಳ ಆವಿಷ್ಕಾರವು ಈ ಹಳೆಯ ಕಥೆಯಲ್ಲಿ ಬೀಜರೂಪದಲ್ಲಿ ಕಂಡುಬಂದಿದೆ.*

*ಮನುಕುಲದ ಸ್ವಪ್ನಗಳೇ ಸಾಕಾರವಾಗಿ ನಮ್ಮ ಪುರಾಣ-ಪುಣ್ಯ ಕಥೆಗಳಾಗಿ ದೇವದೇವತಾ ವಿಲಾಸವಾಗಿ ಕಾಣಿಸಿಕೊಳ್ಳುತ್ತವೆ ಎಂದು ಮನೋವಿಜ್ಞಾನಿಗಳ ಸಿದ್ಧಾಂತ. ಇಜಿಪ್ತದ ಈ ಪುರಾತನ ಆಖ್ಯಾಯಿಕೆಯು ಅವರ ಕೈಯಲ್ಲಿ ಮತ್ತೆ ಮತ್ತೆ ಅನ್ವಯಾರ್ಥಕ್ಕೆ ಗುರಿಯಾಗಿ ಪ್ರಸಿದ್ಧಿಯನ್ನು ಪಡೆದಿದೆ.*

## ೧

ಅನುಪ ಮತ್ತು ಬಾತಾ ಇಬ್ಬರು ಅಣ್ಣತಮ್ಮಂದಿರು. ಅಣ್ಣ ಅನುಪನಿಗೆ ಮದುವೆಯಾಗಿತ್ತು. ತಮ್ಮ ಬಾತಾ ಅವಿವಾಹಿತನಾಗಿಯೇ ಉಳಿದನು. ಅಣ್ಣನ ಮನೆಯಲ್ಲಿಯೇ ಮಮತೆಯ ಮಗನಂತೆ ಹಾಯಾಗಿ ಬೆಳದನು.

ಆದರೆ ಈ ಮಮತೆ, ಈ ಮಗನೆಂಬ ಮನೋಭಾವ ಬಹು ಕಾಲ ಉಳಿಯಲಿಲ್ಲ. ಬಾತಾ ದೃಢಕಾಯ ತರುಣನಾಗಿ ಬೆಳೆದು ನಿಂತಾಗ ಅನುಪನ

ಹೆಂಡತಿಯು ಅವನನ್ನು ಮೋಹಿಸಿದಳು. ಕಾಮಿಸಿದಳು, ಸರಳ ಸ್ವಭಾವದ ಬಾತಾನನ್ನು ಬೇಟೆಯಾಡಲು ಬಯಸಿದಳು.

ಒಂದು ದಿನ ಅನುಪನ ಅನುಪಸ್ಥಿತಿಯಲ್ಲಿ ಆಕೆ ಬಾತಾನ ಬಳಿಗೆ ಹೋಗಿ ಅವನನ್ನು ಮೋಹಪಾಶದಲ್ಲ ತೊಡಕಿಸಲಿಕ್ಕೆ ಪ್ರಯತ್ನಿಸಿದಳು. ಆದರೆ ಬಾತಾ ಕಾಯದಿಂದ ಮಾತ್ರವಲ್ಲ, ಮನಸ್ಸಿನಿಂದಲೂ ದೃಢವಾಗಿಯೇ ನಿಂತನು. ಆತ ಅತ್ತಿಗೆಯ ಮೋಹಕ್ಕೆ ಒಳಗಾಗಲಿಲ್ಲ, ತಿರುಗಿ ಸಂತಾಪಗೊಂಡು ಅವಳಿಗೇ ಛೀಮಾರಿ ಹಾಕಿದನು. ಪರಿಪರಿಯಾಗಿ ಬುದ್ಧಿ ಹೇಳಿದನು.

ಅಣ್ಣ ಅನುಪ ಮನೆಗೆ ಮರಳಿದನು. ತಮ್ಮನು ಅತ್ತಿಗೆಯ ಅತ್ಯಾಚಾರದ ಸಂಗತಿಯನ್ನು ಅವನ ಕಿವಿಗೆ ಹಾಕಲಿಲ್ಲ, ಸುಮ್ಮನೆ ಉಳಿದನು. ಆದರೆ ಅತ್ತಿಗೆ ಬಾಲ ತುಳಿದ ಹಾವು. ಕಾಜು ನುಣ್ಣಗೆ ನಿಜ, ಅದರೆ ಒಡೆದರೆ ಚೂರಿಯಂತೆ ಕೈಯನ್ನು ಕೊರೆಯುತ್ತದೆ. ಮೈದುನನು ತನ್ನಿಷ್ಟಕ್ಕೆ ಒಪ್ಪದಿದ್ದರಿಂದ ಮನೋಭಂಗದೊಂದಿಗೆ ಮಾನಭಂಗವೂ ಕೂಡಿ ಆಕೆ ಮುನಿದ ಮಾರಿಯಾಗಿ ಸೇಡಿಗಾಗಿ ಸಿಡಿಮಿಡಿ ಉರಿದೆದ್ದಳು.

ಗಂಡನು ಬಂದೊಡನೆ ಅವಳು ಬಾತಾನ ವಿರುದ್ಧ ಬಾಯ್ತುಂಬ ದೂರಿಕೊಂಡಳು. ತನ್ನ ಪಾಪಕೃತ್ಯವನ್ನು ಅವನ ತಲೆಗೆ ಹೇರಿದಳು. ಅಣ್ಣನು ಇಲ್ಲದ ಹೊತ್ತು ಸಾಧಿಸಿ ಬಾತಾ ತನ್ನನ್ನು ಬಲಾತ್ಕಾರಕ್ಕೆ ಬಲಿ ಮಾಡಿದನೆಂದು ಅವನ ಕಿವಿಯಲ್ಲಿ ನಂಜು ತುಂಬಿದಳು.

ಅನುಪ ಹೆಂಡತಿಯ ಮಾತನ್ನು ಕೂಡಲೇ ನಂಬಿದನು. ಸಿಟ್ಟಿನಿಂದ ಭುಗಿಲೆದ್ದನು. ಕತ್ತಿಯನ್ನು ಮಸೆದುಕೊಂಡು ಬಾತಾನು ಸಂಜೆಗೆ ಮನೆಗೆ ಬರುವುದನ್ನೇ ಕಾಯುತ್ತ ಕುಳಿತನು.

ಆದರೆ ಆ ಸಂಜೆ ಬಾತಾ ಮನೆಗೆ ಬರಲೇ ಇಲ್ಲ, ಮನೆಯ ಹತ್ತಿರ ಬರುತ್ತಲೆ ಅವನಿಗೆ ದೊಡ್ಡಿಯಲ್ಲಿ ಕಟ್ಟಿದ ದನಗಳು ಎಚ್ಚರಿಕೆ ಕೊಟ್ಟವು! (ಬಾತಾನಿಗೆ ದನಗಳ

ದನಿಯೂ ಅರ್ಥವಾಗುತ್ತಿರಬೇಕು!) ಮನೆ ಹೊಕ್ಕರೆ ಸಾವು ಕಾದಿದೆಯೆಂದು ಅವನಿಗೆ ಗೊತ್ತಾಯಿತು. ಆತ ಅಲ್ಲಿಂದಲೇ ಕಾಲು ಕಿತ್ತನು. ಊರನ್ನೇ ಬಿಟ್ಟು ಪರಾರಿಯಾದನು.

ಆದರೆ ಹೋಗುವನೆಲ್ಲಿಗೆ? ಕಾದು ಕಾದು ಕೆಂಡದಂತಾದ ಅನುಪನು ಬಿಚ್ಚುಗತ್ತಿಯನ್ನೆತ್ತಿಕೊಂಡು ತಮ್ಮನನ್ನು ಬೆನ್ನಟ್ಟಿದನು. ಅಣ್ಣನು ಯಮನಂತೆ ಬೆನ್ನಿಗೆ ಬರುತ್ತಿರುವುದನ್ನು ಕಂಡು ಬಡಪಾಯಿ ಬಾತಾ ಕಂಗೆಟ್ಟನು. "ರಾ" ದೇವರಿಗೆ ಮೊರೆಯಿಟ್ಟನು. ಆ ದೇವರು ಅನಾಥನಾದ ಆ ಯುವಕನ ಮೇಲೆ ಕರುಣೆಯನ್ನು ತಾಳಿ ಅಣ್ಣ ತಮ್ಮಂದಿರ ನಡುವೆ ನೆಗುಸು(ಮಹಾ-ಪೂರ) ತುಂಬಿದ ದೊಡ್ಡದೊಂದು ಹೊಳೆಯನ್ನೇ ಕೊಚ್ಚಿ ಹರಿಯಿಸಿಬಿಟ್ಟನು!

ಆಗ ಉಪಾಯವಿಲ್ಲದೆ ಆ ಹೊಳೆಯ ಆಜೆ ಈಚೆ ಬಾತಾ ಮತ್ತು ಅನುಪರು ಆ ರಾತ್ರಿಯನ್ನು ಕಳೆದರು.

೨

ಮರುದಿನ ಬೆಳಗಾಯಿತು. ಸೂರ್ಯದೇವನ ಸಾಕ್ಷಿಯಾಗಿ ತಾನು ನಿರಪರಾಧಿಯೆಂದು ಬಾತಾ ಅಣ್ಣನಿಗೆ ಆಣೆ ಹೊತ್ತು ಕೂಗಿ ಹೇಳಿದನು. ಅಲ್ಲದೆ ಅತ್ತಿಗೆಯು ಎಸಗಿದ ಅಸಹ್ಯ ಮೋಹದ-ದ್ರೋಹದ ವೃತ್ತಾಂತವನ್ನು ಅರುಹಿದನು.

ಅವನ ಆತ್ಮಸಮರ್ಥನೆ ಇಷ್ಟಕ್ಕೆ ತಡೆಯಲಿಲ್ಲ. ತಾನು ಸರ್ವಥಾ ನಿಷ್ಪಾಪಿಯಿದ್ದೇನೆಂದು ಅಣ್ಣನಿಗೆ ಮನಗಾಣಿಸಲಿಕ್ಕೇಬೇಕು. ಅದಕ್ಕಾಗಿ ಬಾತಾನು ಅನುಪನ ಕೈಯಿಂದ ಕತ್ತಿಯನ್ನೆಸೆಳೆದುಕೊಂಡು, ತನ್ನ ಪಾವಿತ್ರ್ಯಕ್ಕೆ ಪ್ರಮಾಣವೆಂದು ತನ್ನ ಜನನೇಂದ್ರಿಯವನ್ನೇ ಕತ್ತರಿಸಿ ಆ ಹೊಳೆಯ ನೀರಿಗೆ ಒಗೆದುಬಿಟ್ಟನು!

ಬಾತಾ ಒಗೆದ ಅವನ ಆ ಇಂದ್ರಿಯವನ್ನು ಒಂದು ಮೀನು ನುಂಗಿತು. ತಮ್ಮನ ಈ ಘೋರ ಕೃತ್ಯವನ್ನು ಕಂಡು ಅನುಪನು ದಿಗ್ಭ್ರಾಂತನಾದನು, ಜತೆಗೆ ಅವನು ಹೇಳಿದ ಕರುಣ ರುದ್ರಕಥೆಯನ್ನು ಕೇಳಿ ಪಶ್ಚಾತ್ತಾಪದಿಂದ, ಪರಿತಾಪದಿಂದ ಮಮ್ಮಲ ಮರುಗಿದನು. ದೊಡ್ಡ ದನಿ ತೆಗೆದು ಅತ್ತನು. ಇನ್ನು ಈ ಮುದ್ದು ತಮ್ಮನ ಅವಸ್ಥೆ ಏನು? ಮುಂದೆ ಅವನ ಗತಿ ಏನು?

ಆದರೆ ಬಾತಾನೆ ಅಣ್ಣನಿಗೆ ಧೈರ್ಯ ನೀಡಿದನು. ಸಂತೈಸಿದನು. “ನನ್ನ ಈ ಹೃದಯವನ್ನು ಈ ಸೇಬಿನ ಮರದ ಹೂವಿನಲ್ಲಿ ಇಡುವೆನು. ನಿನಗೆ ಯಾರಾದರೂ ಕುಡಿಯಲು ಒಂದು ಗ್ಲಾಸು ಬೀರ್ ಮದ್ಯ ಕೊಟ್ಟಾಗ ಆ ಮದ್ಯಕ್ಕೆ ನೊರೆ ಉಕ್ಕಿಬಂದರೆ ನನ್ನ ಈ ಹೃದಯವನ್ನು ಹುಡುಕಿಕೊಂಡು ನನ್ನಲ್ಲಿಗೆ ಬಾ!” ಎಂದು ಅವನು ಅನುಪನಿಗೆ ಆದೇಶವಿತ್ತನು.

ಅನುಪಮ ಸಮಾಧಾನಗೊಂಡು ಮನೆಗೆ ಬಂದನು. ಹೆಂಡತಿಯ ಮೇಲೆ ಕೆಂಡ ಕಾರುತ್ತ ಬಂದವನೆ ಅವಳನ್ನು ಕೊಂದನು. ಅವಳ ಹೆಣವನ್ನು ಕಡಿದು ನಾಯಿಗಳಿಗೆ ತಿನ್ನಲು ಹಾಕಿದನು. ಆಮೇಲೆ ನೆಲಕ್ಕೆ ಕುಸಿದು ತರೆಗೆ ಮಣ್ಣು ತೂರಿಕೊಳ್ಳುತ್ತ ತಮ್ಮ ಬಾತಾನನ್ನು ನೆನೆದು ನೆನೆದು ನೊಂದು ನೊಂದು ಅತ್ತನು.

ಇತ್ತ ಬಾತಾ ಏಕಾಂತ ಜೀವಿಯಾಗಿ ಸೇಬಿನ ಮರಗಳ ಕೊಳ್ಳದಲ್ಲಿಯೆ ಉಳಿದನು. ಅವನ ಪಾವಿತ್ರ್ಯವನ್ನೂ ಉಗ್ರ ಬ್ರಹ್ಮಚರ್ಯವನ್ನೂ ಮೆಚ್ಚಿ ದೇವತೆಗಳೆಲ್ಲ ಅವನನ್ನು ಕೊಂಡಾಡಿದರು. ಅವನಿಗೆ ಒಂದು ವರವನ್ನು ಕೊಡಲು ಮುಂದಾದರು. ಆಗ ಬಾತಾ ಅಂದನು, “ನನಗೆ ಒಂದು ಹೆಣ್ಣು ಬೇಕು!” ದೇವತೆಗಳು ಅಂದರು, “ತಥಾಸ್ತು!” ಓರ್ವ ಸುಂದರಿಯಾದ ಮಾನಸಕನ್ಯೆಯನ್ನು ಸೃಷ್ಟಿಕರ್ತನಾದ ಖನಮೂ ದೇವರು ನಿರ್ಮಿಸಿ ಬಾತಾನಿಗೆ ಒಪ್ಪಿಸಿದರು.

ಆದರೆ ಆ ಹೆಣ್ಣು ಸಾತ್ವಿಕಳಾಗಿದ್ದಿಲ್ಲ. ಅವಳಲ್ಲಿ ಜಿದ್ದು ಚಪಲ, ವಿಪರೀತ ಕುತೂಹಲ ಎಲ್ಲವೂ ಮನೆಮಾಡಿಕೊಂಡಿದ್ದವು-ಬೈಬಲ್ಲಿನಲ್ಲಿ ಬರುವ “ಈವ್ಹ”ಳಂತೆ.

ಗಂಡ ಬಾತಾ ಇವಳಿಗೆ ಕಟ್ಟಪ್ಪಣೆ ವಿಧಿಸಿದ್ದನು-ಕಡಲ ಹತ್ತಿರ ಎಂದೂ ಹಾಯಬಾರದೆಂದು, ಆದರೆ ಅವಳಿಗೆ ಅದಕ್ಕಾಗಿಯೇ ಕಡಲ ಕಡೆಗೆ ಹೋಗುವ ಹಂಬಲ, ಚಪಲ, ಅನಿವಾರ್ಯವಾಯಿತು. ಆಕೆ ಒಂದು ದಿನ ಕಡಲತೀರಕ್ಕೆ ಬಂದಳು. ನೀರಿಗೂ ಇಳಿದಳು. ಆಗ ಅವಳ ಹೆಳಲಿನ ಕುರುಳೊಂದನ್ನು ತೆರೆಗಳು ಸೆಳವಿಗೆ ಸೆಳೆದೊಯ್ದವು.

ಆ ಕೂದಲ ಜುಲ್ಪು ಹಾಗೆಯೇ ತೇಲುತ್ತಾ ಹೋಗಿ ಇಜಿಪ್ತದ ದೊರೆಯ ಬಟ್ಟೆಗಳನ್ನು ತೊಳೆಯುವಲ್ಲಿಗೆ ತಲುಪಿತು. ಅಲ್ಲಿಟ್ಟ ಮಡಿ ಬಟ್ಟೆಗಳನ್ನು ಸೇರಿ ದೊರೆಯ ಕಣ್ಣಿಗೂ ಬಿತ್ತು.

ದೊರೆಯೋ ಅ ಉಂಗುರಗೂದಲಿಗೇ ಮರುಳಾದನು. ಆ ಕೂದಲು ಯಾರದೆಂದು ಶೋಧ ಮಾಡಲು ಚಾರರನ್ನು ಅಟ್ಟಿದನು. ಅವರು ಬಾತಾನ ಹೆಂಡತಿಯ ಪತ್ತೆ ಮಾಡಿ ಅವಳನ್ನು ಹಿಡಿದು ದೊರೆಯ ಮುಂದೆ ತಂದರು. ದೊರೆಯು ಆ ಸುರಸುಂದರಿಯನ್ನು ಮೆಚ್ಚಿ ತಾನೇ ಮದುವೆಯಾದನು!

ಆದರೆ ಆಕೆಗೆ ಬಾತಾನ ಹೃದಯದ ನಾಶವಾಗಬೇಕು. ಅದಕ್ಕಾಗಿ ದೊರೆಗೆ ಹೇಳಿ ಆಕೆಯು ಆ ಹೃದಯವಿದ್ದ ಸೇಬಿನ ಮರವನ್ನೆ ಕಡಿಸಿ ಕೆಡಹಿಸಿದಳು. ಇನ್ನು ಬಾತಾನ ಸೇಡಿನಿಂದ ತಾನು ಪಾರಾದೆನೆಂದು ಭಾವಿಸಿದಳು.

ಮರ ಅಡ್ಡ ಬಿದ್ದೊಡನೆ ಬಾತಾನು ಸತ್ತುಬಿದ್ದನು. ಅತ್ತ ಅನುಪನ ಕೈಯಲ್ಲಿಯ ಪಾನಪಾತ್ರೆಯೊಳಗೆ ಬೀರ್ ನೊರೆನೊರೆಯಾಗಿ ಉಕ್ಕಿ ತುಳುಕಿತು. ಕೂಡಲೇ ತಮ್ಮನಿಗೇನೋ ಕೇಡಾಗಿದೆಯೆಂದು ತಿಳಿದು ಅನುಪ ಸೇನ ಮರಗಳ ಕೊಳಕ್ಕೆ ಧಾವಿಸಿದನು. ಅಲ್ಲಿ ಬಾತಾ ಸತ್ತುಬಿದ್ದಿದ್ದನು. ಅಲ್ಲಿಂದ ಬಲು ದೀರ್ಘದ ಪ್ರವಾಸ-

ಪ್ರಯಾಸಗಳ ಫಲವಾಗಿ ಬಾತಾನ ಹೃದಯವನ್ನು ಅನುಪನು ಕಂಡುಹಿಡಿದು ತಂದನು. ತಮ್ಮನ ಬಾಯಿಗೆ ಬೀರನ್ನು ಸುರುವಿದನು. ಬಾತಾ ಚೇತರಿಸಿಕೊಂಡು ಎದ್ದನು. ಅಣ್ಣತಮಂದಿರು ಬಹುಕಾಲದ ನಂತರ ಒಬ್ಬರನ್ನೊಬ್ಬರು ವಾತ್ಸಲ್ಯದಿಂದ ಬಿಗಿದಪ್ಪಿಕೊಂಡರು.

೩

ಆಮೇಲೆ ಬಾತಾ ತನ್ನ ಹೆಂಡತಿಯನ್ನು ಕಾಣಲು ಬಯಸಿದನು. ತಾನು ಏಪಿಸ್ ಹೋರಿಯ ರೂಪವನ್ನು ತಾಳಿದನು. ಆ ಹೋರಿಯೊಂದಿಗೆ ಅನುಪನು ದೊರೆಯ ದರಬಾರಿಗೆ ಬಂದನು. ಅಲ್ಲಿ ಬಾತಾ ರಾಣಿಯನ್ನು ತನ್ನ ಹಿಂದಿನ ಹೆಂಡತಿಯನ್ನು ನೋಡಿದನು. ನೋಡಿದೊಡನೆ ತಾಳ್ಮೆಗೆಟ್ಟು ತಾನು ಯಾರೆಂಬ ಗುರುತನ್ನು ಅವಳಿಗೂ ತೋರಿಸಿಕೊಂಡನು!

ಆಗ ರಾಣಿಯೂ ಗಾಬರಿಗೆಟ್ಟಳು. ದೊರೆಯನ್ನು ಕಂಡು ಹಟವನ್ನೆ ತೊಟ್ಟಳು. ಆ ಹೋರಿಯನ್ನು ಕೊಲ್ಲಬೇಕೆಂದು! ದೊರೆಗೆ ಈ ಹೊಸ ಹೆಂಡತಿ ಅಂಗೈಯ ಅರಗಿಣಿ ಅವಳ ಮಾತು ಮೀರುವುದೆಂತು? ಅವನು ಕೂಡಲೆ ಹೋರಿಯನ್ನು ಕೊಲ್ಲಿಸಿದನು. ಕೊಂದ ಹೋರಿಯ ನೆತ್ತರದ ಎರಡು ಹನಿಗಳು ಅರಮನೆಯ ಹೆಬ್ಬಾಗಿಲಿನಲ್ಲಿ ಬಿದ್ದವು.

ಆ ಹನಿಗಳು ಬಿದ್ದಲ್ಲಿ ನೆಲದಿಂದ ಆ ರಾತ್ರಿ ಕಳೆಯುವುದರೊಳಗೆ ಎರಡು ಸಿಕ್ಯಾಮೂರ ವೃಕ್ಷಗಳು ದೈತ್ಯಾಕಾರವಾಗಿ ಎದ್ದು ನಿಂತವು!

ಒಮ್ಮೆ ರಾಣಿ ಹೆಬ್ಬಾಗಿಲಿನಿಂದ ಹಾದು ಹೋಗುವಾಗ ಬಾತಾ ತಾನು ಆ ಮರದಲ್ಲಿ ಇರುವೆನೆಂದು ಕಾಣಿಸಿಕೊಂಡನು. ಆತನ ಗುರುತು ಸಿಕ್ಕಿದ್ದೇ ತಡ ಭಯಚಕಿತಳಾದ ರಾಣಿ ಮತ್ತೆ ದೊರೆಯ ಬೆನ್ನಿಗೆ ಬಿದ್ದಳು-ಆ ಹೆಮ್ಮರಗಳನ್ನು ಕೂಡಲೆ ಕಡಿಸಿಹಾಕಬೇಕೆಂದು.

ಆಯಿತು. ಹೆಣ್ಣಿನ ಹಟ, ಅದೂ ರಾಣಿಯ ಹಟ, ದೊರೆಯ ಅಪ್ಪಣೆ ಆಯಿತು. ಹೆಮ್ಮರಗಳನ್ನು ಕಡಿಯುವ ಕೆಲಸ ಸುರುವಾಯಿತು. ಕಡಿಯುವಾಗ ಅದರ ಚಿಕ್ಕ ಚೂರುಗಳು ಅತ್ತಿತ್ತ ಹಾರಾಡಹತ್ತಿದವು. ದೂರದಲ್ಲಿ ರಾಣಿಯು ನಿಂತು ನೋಡುತ್ತಿದ್ದಳು- ಒಳ್ಳೆಯ ಹಿಗ್ಗಿನಲ್ಲಿ, ಫಕ್ಕನೆ ಒಂದು ಚೆಕ್ಕೆಯ ಚೂರು ಅವಳ ಬಾಯಿಯನ್ನೇ ಹೊಕ್ಕಿತು. ಉಗುಳುವ ಗಡಿಬಿಡಿಯಲ್ಲಿ ಅದನ್ನು ಆಕೆ ನುಂಗಿಬಿಟ್ಟಳು.

ಆ ಚೆಕ್ಕೆ ನುಂಗಿದ ನಿಮಿತ್ತದಿಂದ ರಾಣಿಗೆ ಗರ್ಭ ನಿಂತಿತು. ಬಾತಾನೇ ಅವಳ ಹೊಟ್ಟೆಯಲ್ಲಿ ಮಗುವಾಗಿ ಹುಟ್ಟಿಬಂದನು! ಏನಿದು ದೈವದ ವಿಕಟ ವಿಡಂಬನೆ!

ಆದರೆ ದೊರೆಗೆ ಹೊಟ್ಟೆಯಲ್ಲಿ ಹಿಡಿಸಲಾರದಷ್ಟು ಹರ್ಷ- ರಾಜ್ಯಕ್ಕೆ ಉತ್ತರಾಧಿಕಾರಿ ಸಿಕ್ಕನೆಂದು! ಇಷ್ಟರಲ್ಲಿ ದೊರೆಯ ವಯಸ್ಸು ತುಂಬ ಇಳಿದಿತ್ತು. ಆ ಹರ್ಷದಲ್ಲಿಯೇ ಆತನು ದೇಹವನ್ನಿಟ್ಟನು.

ಹೆಂಡತಿಯ ಹೊಟ್ಟೆಯಲ್ಲಿ ಮಗನಾಗಿ ಹುಟ್ಟಿ ಬಂದ ಬಾತಾ ಬೆಳೆದು ಪ್ರಾಯಕ್ಕೆ ಬಂದನು. ತಂದೆಯ ಗದ್ದುಗೆಯನ್ನು ಏರಿದನು.

ಪಟ್ಟಕ್ಕೆ ಬಂದೊಡನೆ ಬಾತಾ ಮಾಡಿದ ಮೊದಲನೆಯ ಕೆಲಸ ತಾಯಿಯ ಶಿರಚ್ಛೇದಕ್ಕೆ ಆಜ್ಞೆ ಕೊಟ್ಟದ್ದು!

ತಾಯಿಯಾದರೇನಂತೆ? ಆತನಿಗೆ ದ್ರೋಹ ಬಗೆದು ಬಂದು ದೊರೆಯನ್ನು ಕೂಡಿ ಆತನನ್ನು ಮತ್ತೆ ಮತ್ತೆ ಕೊಲ್ಲಿಸಿದ ಆ ದುಷ್ಟೆ ಅವನ ಹೆಂಡತಿಯಲ್ಲವೆ? ಅವಳನ್ನು ಬೆನ್ನಟ್ಟಿಕೊಂಡು ಬಂದು ತೀರಿಸಿಕೊಳ್ಳಲಿಕ್ಕೆ ಆಗದ ಸೇಡನ್ನು–ಅವಳ ಪಾಪದ ಪ್ರಾಯಶ್ಚಿತ್ತವನ್ನು - ಅವಳದೇ ಹೊಟ್ಟೆಯೊಳಗೆ ಬಂದು ಬಾತಾನು ಈ ರೀತಿ ಪೂರ್ತಿ ಮಾಡಿಕೊಳ್ಳಬೇಕಾಯಿತು.

ತಾಯಿಯ ತಲೆ ಹೊಡೆಸಿದ ಮೇಲೆ ಬಾತಾ ಮೂವತ್ತು ವರ್ಷ ರಾಜ್ಯವನ್ನು ಆಳಿದನು-ಬಾಳಿದನು. ಸಾಯುವಾಗ ತನ್ನ ಅಣ್ಣ ಅನುಪನಿಗೆ ಆತನಿನ್ನೂ ಉಳಿದಿದ್ದ! - ಪಟ್ಟವನ್ನು ಕಟ್ಟಿಸಿದನು!

## ೧೪. ಅಂದಗೇಡಿ ಬಾತುಕೋಳಿ

*ಜಗತ್ತಿನ ಶ್ರೇಷ್ಠ ಮಕ್ಕಳ ಕಥೆಗಾರ ಹ್ಯಾನ್ಸ್ ಅಂಡರ್‌ಸನ್ನನ ಶ್ರೇಷ್ಠ ಕಥೆಗಳಲ್ಲಿ "ಅಂದಗೇಡಿ ಬಾತುಮರಿ" (ಅಗ್ಲೀ ಡಕ್ಲಿಂಗ್) ಒಂದು ಸ್ವತಃ ಬಹಳ ಕುರೂಪಿಯಾದ ಅಂಡರ್‌ಸನ್ ತನ್ನನ್ನೇ ಕುರಿತು ಈ ಕಥೆ ಬರೆದಿದ್ದಾನೆನ್ನುತ್ತಾರೆ. ಮುಂದೆ ರಾಜ ಮಹಾರಾಜರಿಂದ ಮನ್ನಣೆ ಹೊಂದಿದ ಈ ಕಥೆಗಾರ ಬಾಲ್ಯದಲ್ಲಿ, ತಾರುಣ್ಯದಲ್ಲಿ ಕುರೂಪಿಯೆಂದು, ಬಡವನೆಂದು, ಕೆಲಸಕ್ಕೆ ಬಾರದವನೆಂದು ಎಲ್ಲೆಡೆಗಳಲ್ಲಿ ತಿರಸ್ಕೃತನಾಗಿದ್ದುದೇ ಈ ಕಥೆಯಲ್ಲಿ ಪ್ರಾಮಾಣಿಕ ರೂಪವಾಗಿ ಹೊರಹೊಮ್ಮಿದೆ.*

೧

ಬೇಸಿಗೆಯ ಕಾಲ, ಕೊಳದಲ್ಲಿ ಬಿಸಿಲು ಥಳಥಳಿಸುತ್ತಿತ್ತು. ಬೆಳ್ಳಿಯ ಅಲೆಗಳ ಅಲೆದಾಟದಲ್ಲಿ ಆ ಚಂದ ಕೊಳವು ಇನ್ನಿಷ್ಟು ಚೆಲುವಾಗಿ ಕಂಗೊಳಿಸುತ್ತಿತು. ಕೊಳದ ತಡಿಯಲ್ಲಿ ಉದ್ದುದ್ದ ಗಿಡಗಳು ಪೊದೆಗಟ್ಟಿ ಬೆಳೆದಿದ್ದವು. ಆ ಪೊದೆಯಲ್ಲಿ ಒಂದು ಬಾತು ಹೇಂಟೆ ತತ್ತಿ ಬಿಡಲಿಕ್ಕೆ ಗೂಡುಕಟ್ಟಿತ್ತು. ಬಿಸಿಲಿನ ದಿನಗಳು ಜಾರುತ್ತಿದ್ದಂತೆ, ಆಕೆ ಗೂಡಿನಲ್ಲಿ ತತ್ತಿಗಳನ್ನು ಬಿಟ್ಟಳು-ಐದು ಲಕಲಕ ಹೊಳೆಯುವ ತತ್ತಿಗಳು.

ಆದರೆ ತುಸು ಅತ್ತಿತ್ತ ಸುಳಿದಾಡಿ ಬಂದಾಗ ನೋಡುತ್ತಾಳೆ, ಆ ಅಂದವಾದ ತತ್ತಿಗಳ ನಡುವೆ ಅಷ್ಟು ಅಂದವಲ್ಲದ ಒಂದು ಆರನೆಯ ತತ್ತಿಯನ್ನು ಆ ಹೇಂಟೆ ಕಂಡಳು. ಉಳಿದವು ಬಿಳಿಯಾದರೆ ಇದು ಬೂದಿ ಬಣ್ಣದ ಮುಸುಕು ಮೈಯ ಮೊಟ್ಟೆ, ಇದೆಲ್ಲಿಂದ ಬಂದಿತು?

ಹೆಣ್ಣು ಬಾತುಕೋಳಿ ಮಂದಬುದ್ಧಿಯ ಪ್ರಾಣಿ, ಆ ಹೊಸ ತತ್ತಿಯ ಊಹಾಪೋಹದಿಂದ ಆಕೆ ಬಹಳ ತಲೆಗೆಡಿಸಿಕೊಳ್ಳಲಿಲ್ಲ; ತನ್ನ ಉಳಿದ ಐವರೊಂದಿಗೆ ಈ ಆರನೆಯ ತತ್ತಿಯ ಮೇಲೆಯೂ ಕೂತು ಕಾವು ಕೊಡಹತ್ತಿದಳು, ಒಂದೊಂದೇ ದಿನ ಉರುಳಿತು. ಇಂದಲ್ಲ ನಾಳೆ ೮ ತತ್ತಿಗಳು ಒಡೆದು ಅಂದ ಚೆಂದದ ಮರಿಗಳು ಹೊರಬರುವವೆಂದು ಆ ತಾಯಿಹಕ್ಕಿಯು ಲೆಕ್ಕ ಹಾಕಿದಳು, ದಿನದ ಹಿಂದೆ ದಿನ ಹೋಯಿತು. ಕೊನೆಗೆ ಒಮ್ಮೆ ಒಂದು ತತ್ತಿ ಒಡೆದು ಅರಿಷಿಣ ತುಪ್ಪಳದ ಉಣ್ಣೆಯ ಚೆಂಡಿನಂಥ ಒಂದು ಮುದ್ದಾದ ಪುಟ್ಟಮರಿ ಹೊರಬಿದ್ದು ಪಿಳಿಪಿಳಿ ಕಣ್ಣು ಹೆಮ್ಮೆಯಿಂದ ಕೂಗಿ ಕುಣಿದಾಡಿದಳು. ಆ ಮರಿಯ ಸುತ್ತ! ಹಾಗೆಯೇ ಒಂದೊಂದಾಗಿ ಐದೂ ಬಿಳಿಯ ತತ್ತಿಗಳು ಒಡೆದು ಮರಿ ಹಕ್ಕಿಗಳು ಹೊರಬಂದವು.

ಆದರೆ ಆ ಬೂದು ಬಣ್ಣದ ತತ್ತಿ? ಅದು ಹಾಗೆಯೇ ಕಲ್ಲಗುಂಡಿನಂತೆ ಉಳಿದುಬಿಟ್ಟಿತು. ದೊಡ್ಡ ಹೇಂಟೆಯೂ ಎಂದಿನಂತೆ ಅದರ ಮೇಲೆ ಕೂಡ್ರುತ್ತಲೆ ಇತ್ತು. “ಇದೆಂಥ ತತ್ತಿ? ಇಂಥ ತತ್ತಿ ನಾನು ನೋಡಿಯೇ ಇಲ್ಲ! ಇದು ಒಡೆಯುವದಾದರೂ ಎಂದು?” ಹೀಗೆಲ್ಲ ಆಕೆ ದಿನಾಲು ಚಿಂತಿಸುತ್ತಿದ್ದಳು. ಒಂದು ದಿನ ಕಾವು ಕೊಡಲು ಕೂತಾಗ ಅವಳಿಗೆ ತನ್ನ ಬುಡದಲ್ಲಿ ಏನೋ ಸರಿದಾಡಿದಂತೆ ಅನಿಸಿತು. ಗೂಡಿನಿಂದ ಹಾರಿ ನೋಡುತ್ತಾಳೆ -- ಆ ಗುಂಡು ತತ್ತಿಯಿಂದಲೂ ಒಂದು ಮರಿ ಹೊರಬಿದ್ದಿದೆ.

ಆದರೆ ಅದೆಂಥ ಮರಿ! ತೀರ ವಿಚಿತ್ರ ಅದರ ಮೈಬಣ್ಣ ಕಂದು-ಅದರ ಕುತ್ತಿಗೆ ಕೊಕ್ಕರೆಯಂತೆ ಉದ್ದ, ಅದರ ಮೈಮೇಲೆ ಗರಿಗಳೇ ಇಲ್ಲ! “ಅಯ್ಯೋ! ಇದೆಂಥ ಮರಿ! ಇಂಥ ಅಂದಗೆಟ್ಟ ಮರಿ ನಾನು ಕಂಡಿದ್ದೆ ಇಲ್ಲ. ಅಲ್ಲದೆ ಈಗಲೆ ಇದು ಇಷ್ಟು ದೊಡ್ಡದು. ಈಗಲೆ ಈತ ಧಾಂಡಿಗ ದೈತ್ಯನಾಗಬಿಟ್ಟಿದ್ದಾನೆ!” ಎಂದು ಹೇಂಟೆಯು ಮರುಗಿದಳು.

ಆ ಪೊದೆಗೇರಿಯ ಇತರ ಬಾತುಕೋಳಿ ಕುಟುಂಬಗಳಿಗೆಲ್ಲ ಈ ಅಂದಗೇಡಿ ಮರಿಯ ಸುದ್ದಿ ಮುಟ್ಟಿತು. ಆದಾಗ್ಯೂ ಈ ತಾಯಿಕೋಳಿ ತಡೆಯಲಾರದೆ ತಾಳ್ಮೆಗೆಟ್ಟು ತಾನೇ ಓಡಿಹೋಗಿ ಕೇರಿಯ ಹೆಂಟೆಗಳಿಗೆಲ್ಲ ಈ ವಿಚಿತ್ರ ಶಿಶುವಿನ ವಾರ್ತೆ ಹೇಳಿ ಬಂದಳು, ಅವರನ್ನು ಕರೆದುತಂದು ಆ ಧಾಂಡಿಗ ಗಂಡು ಮರಿಯನ್ನು ಆಕೆ ಕಾಣಿಸಿದಳು. ಅವರೆಲ್ಲ ಆ ಅಂದಗೆಟ್ಟ ಮರಿಯನ್ನು ನೋಡಿ ಮೂಗು ಮುರಿದರು. ಉಳಿದ ಐವರನ್ನು ಹೊಗಳಿದರು. ಮುದ್ದು ಮಾಡಿದರು. ಆಗ ಆ ತಾಯಿಗೆ ಒಮ್ಮೆಲೆ ಮರುಕ ಹುಟ್ಟಿತು-ಅಂದಗೇಡಿ ಮರಿಯ ಮೇಲೆ. ಎಷ್ಟೇ ಅಂದರೂ ಅದೂ ಅವಳದೇ ಮರಿತಾನೆ? ಅಂದಗೇಡಿ ಆದರೇನಂತೆ? ಎಲ್ಲರೂ ಅವನನ್ನು ಹೀಯಾಳಿಸಿದರೆ ಅವನ ಬಗೆಗೆ ಕನಿಕರ ತೋರಿಸುವವರು ಯಾರು? ತಾಯಿ ಬಾತುಕೋಳಿ ಸಿಟ್ಟಿಗೆದ್ದು ಅಂದಳು. 'ನನ್ನ ಈ ಪೋರನ ವಿರುದ್ಧ ಒಂದಕ್ಷರ ಎತ್ತಿದರೆ ಜೋಕೆ! ಇವನು ಚೆಂದವಿರಲಿಕ್ಕಿಲ್ಲ. ಆದರೆ ನೋಡಿ, ಈಗಾಗಲೇ ಎಷ್ಟು ದೊಡ್ಡವನಾಗಿ ಬೆಳೆದಿದ್ದಾನೆ. ನನ್ನಷ್ಟೇ ಮೈ ತುಂಬಿ ನಿಂತಿದ್ದಾನೆ. ನನಗೆ ನಿಜವಾಗಿಯೂ ಬಹಳ ಹೆಮ್ಮೆ ಅನಿಸುತ್ತದೆ.'

ಅಂದಗೇಡಿ ಮರಿ ಇದನ್ನೆಲ್ಲ ಕಿವಿಗೊಟ್ಟು ಕೇಳಿತು, ಅದಕ್ಕೆ ಬಹಳ ಖೇದವೆನಿಸಿತು. ಆದರೂ ತನ್ನ ತಾಯಿ ತನ್ನ ಬಗೆಗೆ ಹೀಗೆ ಅಭಿಮಾನಪಟ್ಟು ಆಡಿದಾಗ ಅವನಿಗೆ ತುಸು ಸಮಾಧಾನವೂ ಅನಿಸಿತು. ಆದರೆ ಈ ಸಮಾಧಾನ ಬಹಳ ಹೊತ್ತು ಉಳಿಯಲಿಲ್ಲ. ಏಕೆಂದರೆ ಅವನ ಅಣ್ಣಂದಿರೆಲ್ಲ ಅವರ ಸಂಗಾತಿ ಮರಿಗಳೆಲ್ಲ ಅವನನ್ನು ನೋಡಿ ಖೊಳ್ಳನೆ ನಕ್ಕುಬಿಟ್ಟರು. ಅವರಾರೂ ಅವನನ್ನು ತಮ್ಮ ಒಡಹುಟ್ಟಿದವಸೆಂದಾಗಲಿ ಒಡನಾಡಿಯಿಂದಾಗಲಿ ಕಾಣುತ್ತಲೇ ಇದ್ದಿಲ್ಲ. "ನೀನು ನಮ್ಮಿಂದ ತೀರ ಬೇರೆ! ಹೀಗೇಕೆ ನೀನು ಬೇರೆ?" ಎಂದೆಲ್ಲ ಅವರು ಅನ್ನುತ್ತಿದ್ದರು; ಅವನ ಜೀವ ತಿನ್ನುತ್ತಿದ್ದರು.

"ಹೀಗೆ ನಗಬೇಡಿರಿ. ನಾನು ನಿಮ್ಮಿಂದ ಬೇರೆ ಇರಬಹುದು. ಅದು ನನ್ನ ತಪ್ಪೇ? ಹೀಗೆ ಬೇರೆ ಆಗುವದು ನನಗೆ ಬೇಕಾಗಿದ್ದಿಲ್ಲ. ಹಾಗೆ ನೋಡಿದರೆ ಅಷ್ಟೇನು

ಬೇರೆಯಾಗಿದ್ದೇನೆ? ನಿಮ್ಮಂತೆಯೇ ನನಗೆ ಎರಡು ಕಣ್ಣು ಎರಡು ರೆಕ್ಕೆ, ಎರಡು ಕಾಲು, ಒಂದು ಕೊಕ್ಕು, ಒಂದು ಪುಚ್ಛ ಇವೆ!"

"ಏನೇ ಇದ್ದರೂ ನಮಗೂ ನಿನಗೂ ಭೇದವಿದ್ದೇ ಇದೆ. ನಮ್ಮಿಂದ ನೀನು ಬೇರೆ."

"ಯಾಕೆ, ಹೇಗೆ ಬೇರೆ?" ಆತ ಗಡುಸಾಗಿಯೇ ಕೇಳುತ್ತಿದ್ದ.

"ಇನ್ನು ಯಾಕೆ? ನಮ್ಮಿಬ್ಬರಲ್ಲಿ ಭೇದವಿಷ್ಟೇ-ನೀನು ಅಂದಗೇಡಿ, ಕುರೂಪಿ ನಾನು ಅಂದಚೆಂದ ರೂಪುಳ್ಳವರು" ಎಂದು ಆ ಕಿಡಿಗೇಡಿ ಮರಿಗಳೆಲ್ಲ ಖೊಳ್ಳನೆ ನಗುತ್ತಿದ್ದವು. ಆಗ ಈ ಅಂದಗೇಡಿ ಕಂದು ಮರಿ ಇನ್ನೂ ಖಿನ್ನವಾಗುತ್ತಿತ್ತು.

೩

ಕೊನೆಗೂ ಆ ಬದುಕು ಅವನಿಗೆ ಅಸಹ್ಯವಾಯಿತು. ತಾತ್ಸಾರ ತಿರಸ್ಕಾರ, ನಿಂದೆ, ವ್ಯಂಗ್ಯ, ಟೀಕೆಟಿಪ್ಪಣಿಗಳ ಛೂಬಾಣಗಳಿಗೆ ಆ ಅಂದಗೇಡಿ ಮರಿ ಗಾಸಿಗೊಂಡಿತು. ಅಂದಗೇಡಿ ಆದರೇನಾಯಿತು? ಅಂತಃಕರಣವಿಲ್ಲವೇ? ಕೊನೆಕೊನೆಗೆ ಆ ತಾಯಿಯೂ ಅವನ ಮೇಲೆ ಮುರಿದುಬೀಳುವಂತೆ ತೋರಿತು. ಅವಳೂ ಆ ಬಡ ಮರಿಯನ್ನು ಕೊಕ್ಕಿನಿಂದ, ಕೊಕ್ಕಿಗಿಂತ ಮೊಣಚಾದ ಮಾತಿನಿಂದ ಚುಚ್ಚುತ್ತಿದ್ದಳು. ಇದೆಲ್ಲವನ್ನೂ ಮೂಕವೇದನೆಯಲ್ಲಿ ನೊಂದು ನರಳಿ ಬೆಂದು ಬಳಲಿ ಆ ಮರಿ ಮರುಮಾತಾಡದೆ ಸಹಿಸುತ್ತಿತ್ತು.

ಆದರೆ ಆ ಸಹನೆಯೂ ಹದ್ದು ಮೀರಿತು. ಒಂದು ರಾತ್ರಿ ಆ ಮರಿಯು ಆ ಗೂಡನ್ನು ತನ್ನ ಬಳಗವನ್ನು ಬಿಟ್ಟು ಸುಮ್ಮನೆ ಹಾದಿ ಸಿಕ್ಕತ್ತ ಹೊರಟುಬಿಟ್ಟಿತು. ಆ ಕೊಳವನ್ನು ಹಿಂದೆ ಬಿಟ್ಟು ದೂರದ ಇನ್ನೊಂದು ಚಿಕ್ಕ ಕೊಳವನ್ನು ತಲುಪಿತು. ಇರುಳೆಲ್ಲ

ಮರಗಳ ಬುಡಕ್ಕೆ ಅವಿತು ನಿಂತು ನಸುಕಿಗೆ ಆ ಮಡುವಿನ ಅಂಚಿಗೆ ಹೋಗಿ ನಿಂತು ನೋಡಿತು.

ಸುತ್ತಲೆಲ್ಲ ಗಜಿಬಿಜಿ ಗದ್ದಲವೇ ಗದ್ದಲ. ಕಾಡು ಬಾತುಕೋಳಿಗಳ ತಂಡದ ನಟ್ಟನಡುವೆ ಆ ಮರಿಯು ನಿಂತಿತು. ಆ ಕೋಳಿಗಳು ಆ ಆಗಂತುಕನನ್ನು ಕಂಡು ಕೆರಳಿ ಕಿರುಚಾಡುತ್ತಿದ್ದವು.

"ಎಲಾ, ನೀನು ಯಾರು?" "ಹೀಗೆ ನೆಟ್ಟಗೆ ನಮ್ಮ ನಡುವೆ ನೀನು ಬಂದದ್ದೇಕೆ?" "ಅದೂ ನಡುರಾತ್ರಿಗೆ ಕಳ್ಳನಂತೆ" - "ಮರಿಯ ತಲೆಯ ಮೇಲೆ ಪ್ರಶ್ನೆಗಳ ಕೊಕ್ಕುಗಳು ಹಬ್ಬತೊಡಗಿದವು.

"ನಾನು ಬಂದಾಗ ನೀವೆಲ್ಲ ಮಲಗಿದ್ದಿರಬೇಕು. ನಾನೇನು ಮಾಡಲಿ? ನಾನು ನಿಮ್ಮನ್ನು ನೋಡಲಿಲ್ಲ, ನಾನು ಮಲಗಿದ್ದೆ!" ಮರಿಯು ಮರುಗುವ ದನಿಯಲ್ಲಿ ಅಂದಿತು.

ಕಾಡು ಬಾತುಕೋಳಿಗಳಿಗೆಲ್ಲ ಒಮ್ಮೆ ಮರಿಯನ್ನು ದುರುದುರು ದಿಟ್ಟಿಸಿದವು. ಅದರ ಅಂದಗೇಡು ಅವಕ್ಕೆ ಹಾಗೆ ತೋರಲಿಲ್ಲ. ಅವು ಮರುಕ ತಾಳಿದವು. "ಸರಿ, ನೀನು ನಮ್ಮೊಟ್ಟಿಗೆ ಉಳಿಯಬಹುದು" ಎಂದವು.

ಆದರೆ ಅಲ್ಲಿಯೂ ಆ ಮರಿ ಸುಖಿಯಾಗಲಿಲ್ಲ. ಆ ಕಾಡು ಕೋಳಿಗಳ ಬಿರುಸು ಬಲುಮೆ ಆ ಮರಿಯ ಮೈಯಲ್ಲಿ ಇರಲಿಲ್ಲ. ಅವುಗಳಂತೆ ಅದರ ರೆಕ್ಕೆಗಳು ಬಲಿಷ್ಠವಿದ್ದಿಲ್ಲ. "ನಾ ಹಾರುವೆತ್ತರಕ್ಕೆ ನೀ ಹಾರಬಲ್ಲೆಯಾ?" ಒಂದು ಟೊಣಪ ಮರಿ ಈ ಬಡ ಊರ ಬಾತುಕೋಳಿ ಮರಿಯನ್ನು ಕೆಣಕಿ ಕೇಳಿತು! ಎಲ್ಲವೂ ಅದನ್ನು ಸುತ್ತುಗಟ್ಟಿ ಖೊಳ್ಳನೆ ನಕ್ಕುಬಿಟ್ಟವು.

"ಓ ನನಗೂ ಇಂಥ ಗಟ್ಟಿಮುಟ್ಟು ರೆಕ್ಕೆಗಳಿದ್ದಿದ್ದರೆ! ನಾನು ಅದರೊಂದಿಗೆ ರೆಕ್ಕೆಗೆ ರಕ್ಕೆ ಹಚ್ಚಿ ಬೀಸಾಗಿ ಹಾರುತ್ತಿದ್ದ!"

ಮರಿಯು ಮರುಗಹತ್ತಿತು, ಸೊರಗಹತ್ತಿತು. ಆ ಕಾಡು ಕೋಳಿಮರಿಗಳೆಲ್ಲ ಕೊಳದ ಮಧ್ಯಕ್ಕೆ ಹಾರಿಹೋದವು, ಗಹಗಹಿಸಿ ನಗುತ್ತ, ಈ ಅಂದಗೇಡು ಮರಿ ಅಂಚಿನಲ್ಲಿಯೇ ಅಳುತ್ತ ನಿಂತಿತು. ಇಲ್ಲಿಯೂ ಅದೇ ಕತೆ. ಇತರರಿಂದ ಏನೋ ಏಕೋ ಬೇರೆ ಆಗಿರುವುದೇ ಈ ಮರಿಯ ಅಪರಾಧವಾಗಿತ್ತು.

೪

ಒಂದು ದಿನ ಒಂದು ಭಯಂಕರ ಘಟನೆ ನಡೆಯಿತು. ಆಕಾಶದಲ್ಲಿ ಹಾರಾಡುತ್ತಿದ್ದ ಎರಡು ಕಾಡು ಬಾತುಕೋಳಿಗಳು ಇದ್ದಕ್ಕಿದ್ದಂತೆ ಕೊಳದ ಮಧ್ಯದಲ್ಲಿ ಬಿದ್ದವು. ಬೀಳುವಾಗ ಸುತ್ತಲೆಲ್ಲ ದೊಡ್ಡ ದೊಡ್ಡ ಸದ್ದುಗಳು ಎದ್ದವು. ಅವು ಬಿದ್ದಲ್ಲಿ ಕೊಳದ ನೀರು ಕೆಂಪಾಯಿತು. ನಮ್ಮ ಅಂದಗೇಡಿ ಮರಿ ಕಂಗೆಟ್ಟಿತು. ಇದೇನು ಉತ್ಪಾತ? ಯಾರೋ ಕೋವಿ ಎತ್ತಿ ಕಾಡುಕೋಳಿಗಳ ಶಿಕಾರಿಗೆ ಬಂದಿದ್ದರು. ದೊಡ್ಡ ಸದ್ದಿಗೆ ಉಳಿದ ಬಾತುಗಳೆಲ್ಲ ಆಕಾಶಕ್ಕೆ ಹಾರಿದವು. ಹೆದರಿದಾಗ ಬಾತುಗಳು ಹೀಗೆ ಹಾರಾಡುತ್ತವೆ. ಹಾರಿದ್ದೇ ತಡ, ಕೋವಿಯ ಗುಂಡುಗಳಿಗೆ ಅನಾಯಾಸವಾಗಿ ಗುರಿ ಆದವು!

ಅಂದಗೇಡಿ ಬಾತು ಮರಿಯ ಅದೃಷ್ಟ ದೊಡ್ಡದು. ಅದಕ್ಕೆ ಇನ್ನೂ ಆ ಎತ್ತರಕ್ಕೆ ಹಾರಲು ಬರುತ್ತಿರಲಿಲ್ಲ. ಅದು ಕೊಳದ ತಡಿಯ ಹುಲ್ಲಿನಲ್ಲಿ ತಲೆಮರೆಸಿಕೊಂಡು ಬಿದ್ದುಳಿಯಿತು. ಕತ್ತಲೆ ಕವಿಯಿತು. ಸಾವಿರ ಸಾವಿರ ಚಿಕ್ಕೆಗಳು ಆಕಾಶದಲ್ಲಿ ಕಣ್ಣು ಮಿಟುಕಿಸಹತ್ತಿದವು. ಅಂದಗೇಡಿ ಮರಿ ಆ ಕೊಳದ ತೀರದಿಂದ ಕಾಲು ಕಿತ್ತಿತು. ಅದು ಸಾವಿನ ಹೊದರು. ಅಲ್ಲಿ ಯಾರು ಇನ್ನು ಉಳಿಯುವರು? ಮುಂಜಾವಿನೊಳಗೆ ಅದು ಹಲವಾರು ಹೊಲ ಹಕ್ಕಲುಗಳನ್ನು ದಾಟಿ ಒಂದು ಒಕ್ಕಲು ಕೊಪ್ಪವನ್ನು ಸೇರಿತು.

ಅಲ್ಲಿ ಒಂದು ಹೊಲಮನೆಯಲ್ಲಿ ಈ ಮರಿ ಕಾಲಿಕ್ಕಿತು. ಮನೆಯ ಯಜಮಾನ ತೀರಿಹೋಗಿದ್ದ, ಇದ್ದವಳು ಅವನ ಹೆಂಡತಿ, ಅವಳೇ ಹೊಲದ ಸಾಗು

ನೋಡಿಕೊಳ್ಳುತ್ತಿದ್ದಳು. ಅದರೆ ಮನೆಗೆ ನಿಜವಾದ ಯಜಮಾನರು ಅವರು ಸಾಕಿದ ಒಂದು ಹೇಂಟೆ ಮತ್ತು ಒಂದು ಬೆಕ್ಕು ಅವರಿಬ್ಬರೂ ಆ ಒಕ್ಕಲಗಿತ್ತಿಯ ಮೇಲೆಯೇ ಒಡೆತನ ನಡೆಯಿಸುತ್ತಿದ್ದರು.

ಬಾತುಮರಿ ಒಳಗೆ ಹೋಗಿ ಒಂದು ಮೂಲೆಯಲ್ಲಿ ಕುಳಿತುಕೊಂಡಿತು. ಒಕ್ಕಲತಿ ಬಂದು ಕೋಣಯನ್ನು ಉಡುಗಿ ಹೋದಳು, ಅವಳಿಗೆ ಮರಿ ಕಾಣಿಸಲಿಲ್ಲ, ಅವಳು ಕೋಣೆಯ ಮೂಲೆಗಳನ್ನು ಉಡುಗಿದರಲ್ಲವೇ? ನಡುವಿನ ಕಸವನ್ನೆಲ್ಲ ಆ ಕತ್ತಲೆಯ ಮೂಲೆಗಳಿಗೆ ಸರಿಸಿ ಹೋಗುವುದು ರೂಢಿ. ಆಮೇಲೆ ಬೆಕ್ಕು ಒಳಗೆ ಬಂದಿತು. ಬೆಕ್ಕು ಮೂಲೆಗೆ ಹೋಗಲಿಲ್ಲ-ಹೋಗುವುದಿಲ್ಲ. ಅದು ನೇರವಾಗಿ ಒಲೆಯ ಬುಡಕ್ಕೆ ಭದ್ರಾಸನ ಹಾಕುತ್ತದೆ. ಆಮೇಲೆ ಹೇಂಟೆಯು ಒಳಗೆ ಬಂದಿತು. ಹೇಂಟೆಗಳು ಮೂಲೆಗಳಲ್ಲಿ ಕಸವನ್ನು ಕೆದರುತ್ತವೆ. ಅವಳಿಗೆ ಈ ಅಂದಗೇಡಿ ಮರಿ ಕಣ್ಣಿಗೆ ಬಿದ್ದಿತು. “ನೀನಾರು? ನಿನಗೇನು ಬೇಕು! ಓಹೋ? ನೀನು ಇಲ್ಲಿ ಕದಿಯಲು ಬಂದಿರಬೇಕು!” ಹೇಂಟೆಯ ಪ್ರಶ್ನಾವಳಿಯು ಶುರುವಾಯಿತು.

“ನಾನು ಇಲ್ಲಿ ಉಳಿಯಲು ಬಂದಿದ್ದೇನೆ. ನಾನು ಕಳ್ಳನಲ್ಲ” ಮರಿಯು ಮೃದುವಾಗಿ ಅಂದಿತು.

“ನೀನು ಯಾವ ಕೆಲಸ ಮಾಡಬಲ್ಲೆ?” ಬೆಕ್ಕು ಮುಂದೆ ಬಂದಿತು, ಮುಂದಿನ ತನಿಖೆಗೆ, “ನೀನು ಇಲಿ ಹಿಡಿಯಬಲ್ಲೆಯಾ?”- “ಇಲ್ಲ” “ತತ್ತಿ -ಮೊಟ್ಟೆ ಹಾಕಬಲ್ಲೆಯಾ?”- “ಇಲ್ಲ” “ಹಾಗಾದರೆ?” ಹೇಂಟೆ, ಬೆಕ್ಕುಗಳಿಬ್ಬರೂ ಒಂದು ಬದಿಗೆ ಹೋಗಿ ಆ ಆಗಂತುಕನನ್ನು ಕುರಿತು ಚರ್ಚಿಸಿದರು. ಒಂದು ನಿರ್ಣಯಕ್ಕೆ ಬಂದರು. “ಸರಿ, ನೀನು ಇಲ್ಲಿ ಉಳಿಯಬಹುದು, ಬಡಪಾಯಿಯಂತೆ ಕಾಣುವಿ! ಆದರೆ ನಮ್ಮ ಒಡತಿ ಒಪ್ಪಬೇಕು!”

“ಅವರು ಒಪ್ಪದಿದ್ದರೆ?” -ಮರಿ ಶಂಕೆ ಎತ್ತಿತು.

“ಒಪ್ಪದಿದ್ದರೆ, ಒಪ್ಪಲೇಬೇಕು. ಅವಳು ಒಪ್ಪಲಿ ಬಿಡಲಿ, ನಾವು ಒಪ್ಪಿದರೆ ಮುಗಿಯಿತು!” ಬೆಕ್ಕು ಹೇಂಟೆ ಇಬ್ಬರೂ ಗಡುಸಾಗಿಯೇ ಅಂದರು.

೫

ಹೀಗೆ ಆ ಅಂದಗೇಡಿ ಬಾತುಮರಿ ಚಳಿಗಾಲದಲ್ಲಿ ಆ ಹೊಲಮನೆಯಲ್ಲಿಯೇ ಉಳಿಯಿತು. ಕೊನೆಗೊಮ್ಮೆ ಅವನಿಗೆ ನೆಮ್ಮದಿ ದೊರೆಯಿತು.

ಚಳಿಗಾಲದಲ್ಲಿ ಮರಿಗೆ ಬಹಳ ಕಷ್ಟವಾಯಿತು. ಮೈ ಬಡವಾಯಿತು. ಕಾಲು ಕೊಕ್ಕೆ ಆದವು. ಚಳಿಗೆ ಮರಿ ಮರವಟ್ಟಂತೆ ಆಯಿತು. ಆ ಚಳಿಗೆ ಆ ಅಶಕ್ತತೆಗೆ ತಾನು ಸತ್ತೇಹೋಗುವೆನೆಂದು- ಮರಿ ಭಾವಿಸಿತು.

ಆದರೆ ಚಳಿ ಸರಿದಂತೆ ಮರಿಗೆ ಪುನರ್ಜನ್ಮವಾದಂತೆ ಅನಿಸಿತು. ಮೈಯಲ್ಲಿ ಬಲವು ಹೆಚ್ಚುತ್ತಿರುವುದು ಭಾಸವಾಯಿತು. ಮೈಯ, ಕಾಲುಗಳ ರೆಕ್ಕೆಗಳ ಗಾತ್ರವು ಹೆಚ್ಚಹತ್ತಿತು. ಬಿಸಿಲು ಬಲಿದಂತೆ, ಬೇಸಿಗೆ ಬೆಳೆದಂತೆ ಮರಿಯ ಮೈಕಟ್ಟು ಹುರಿಕಟ್ಟಾಯಿತು. ಅಚ್ಚುಕಟ್ಟಾಯಿತು. ಹಿಂದೆಂದೂ ಇಷ್ಟು ಶಕ್ತಿ, ಇಷ್ಟು ಹುರುಪು ಅದಕ್ಕೆ ಅನಿಸಿದ್ದಿಲ್ಲ. ನರನಾಡಿಗಳಲ್ಲಿ ಮಿಂಚು ಹರಿದಾಡಿದಂತೆ ಮರಿಗೆ ಉತ್ಸಾಹ!

ವಸಂತಕಾಲವು ಕಾಲಿಟ್ಟಿತು. ಈಗ ಮರಿ ದೊಡ್ಡದಾಗಿದೆ. ಅದಕ್ಕೆ ತಿರುಗಿ ಕೊಳದಲ್ಲಿ ತೇಲುವ ಆಸೆ ಒತ್ತರಿಸಿತು. ಮೈಯ ಕೆಳಗೆ ತಂಪು ನೀರು ತುಳುಕಾಡಬೇಕೆಂಬ ಆಸೆ.

“ಎಲ್ಲಾ, ನಿನಗೇನಾಗಿದೆ? ಸುಮ್ಮನೆ ನಿನ್ನ ಮೂಲೆಯಲ್ಲಿ ಬಿದ್ದಿರುವದಿಲ್ಲವೇಕೆ?” ಬೆಕ್ಕು ಗುರುಗುಟ್ಟಿತು.

“ನಾನು ಕೊಳಕ್ಕೆ ಹೊರಟೆ, ನನಗೆ ನೀರಾಟವಾಡಬೇಕೆಂದು ಆಸೆ ಆಗಿದೆ” ಮರಿ ಅಂದಿತು.

“ನೀರಾಟ? ಏನು ಹೊಲಸು!” ಬೆಕ್ಕು ಅಂದಿತು.

ಅಂದಗೇಡಿ ಬಾತುಮರಿ ಮನೆ ಹೊರಗೆ ಬಂದು ಹೊಲದಲ್ಲಿ ನಿಂತಿತು. ಆಕಾಶದತ್ತ ಕತ್ತೆತ್ತಿ ನೋಡಿತು. ಅಲ್ಲಿ ನೀಲ ಆಕಾಶದಲ್ಲಿ ಸಾಲಾಗಿ ಹಕ್ಕಿಗಳು ಹಾರಿ ಸಾಗಿದ್ದವು. ಓ, ಎಂಥ ಚೆಂದ ಹಕ್ಕಿಗಳು, ಅಂಥ ಚೆಲುವು ಹಕ್ಕಿಗಳನ್ನು ಆ ಮರಿಯು ಹಿಂದೆಂದೂ ಕಂಡಿದ್ದಿಲ್ಲ. ಬಿಳಿ ಹೂಗಳ ಮಾಲೆ ಗಾಳಿಗೆ ತೇಲಿ ಹೋಗುತ್ತಿದ್ದಂತೆ ತೋರಿತು. ಅವು ಹಂಸಗಳು.

ಮರಿ ಮೈಮರೆಯಿತು. ತಾನು ಏನು ಮಾಡುತ್ತಿದ್ದೇನೆಂದು ತಿಳಿಯುವ ಮೊದಲೆ ಗರಿಗೆದರಿ ರೆಕ್ಕೆ ಚಾಚಿ ಅದು ಮೇಲಕ್ಕೆ ಹಾರಿತು. ಮೇಲೆ, ಮೇಲೆ ಇನ್ನೂ ಮೇಲೆ ಕೆಳಗೆ ಹೊಲ, ಹಕ್ಕಲು, ಮನೆ, ಹಾದಿ. ಬೆಟ್ಟ, ಗುಡ್ಡಗಳೆಲ್ಲವೂ ಪಟದಂತೆ ರಂಗು ರಂಗಾಗಿ ಚಾಚಿದ್ದವು.

ತನ್ನ ಅಗಲವಾದ ರೆಕ್ಕೆ ಬೀಸುತ್ತ ಗುಡ್ಡಗಳನ್ನು ದಾಟಿ ಆ ಅಂದಗೇಡಿ ಬಾತುಮರಿ ದೊಡ್ಡದೊಂದು ಸರೋವರಕ್ಕೆ ಬಂದಿಳಿಯಿತು. ಅದರ ಸುತ್ತಲೂ ಅದು ಕೂಡಿ ಹಾರಿದ ಹಂಸಗಳ ತಂಡವಿತ್ತು. ಅವೆಲ್ಲ ನೀರಿಗೆ ಇಳಿದು ತಮ್ಮ ಮಾಟವಾದ ಕತ್ತುಗಳನ್ನು ಚಾಚಿ ಮೈ ಉಬ್ಬಿಸಿ ಸಡಗರದಿಂದ ತೇಲಾಡುತ್ತಿದ್ದವು. ನಲಿದಾಡುತ್ತಿದ್ದವು.

ತಡಿಯ ಮಳಲಲ್ಲಿ ದೂರ ನಿಂತ ಅಂದಗೇಡಿ ಮರಿ ಯೋಚಿಸಿತು. “ನಾನೂ ಅವರನ್ನು ಸೇರಲೆ? ಆದರೆ ಅಂದಗೇಡಿಯೆಂದು ನನ್ನನ್ನು ಕೊಕ್ಕು ಹೆಟ್ಟಿ ಹೊಡೆದೋಡಿಸಿದರೆ? ಅಯ್ಯೋ! ಅವರ ಅರ್ಧದಷ್ಟು ಚೆಂದ, ಮಾಟ, ಒಯ್ಯಾರ ನನಗೆ ಇದ್ದಿದ್ದರೆ!” ಮರಿಗೆ ತಡೆಯದಾಯಿತು. ಅವರು ಕೊಂದರೂ ಚಿಂತೆ ಇಲ್ಲ, ತಾನು ಅವರೊಂದಿಗೆ ಸೇರಿ ನೀರಾಟವಾಡಲೇಬೇಕು ಎಂದು ನಿರ್ಧಾರಕ್ಕೆ ಬಂದಿತು.

ಕಾಡುಬಾತಿಗೆ ಬೆಕ್ಕು ಹೇಂಟೆಗಳಿಂದ ಪೀಡೆ ಪಡೆದು ಸಾಕಾಯಿತು. ಈ ಹಂಸಗಳಿಂದ ಕೊಲ್ಲಲ್ಪಟ್ಟರೂ ಲೇಸೇ!

ಅಂದಗೇಡಿ ಮರಿ ಸರೋವರದ ನೀರಿನತ್ತ ಸರಿಯಿತು. ನೀರಾಟವಾಡಿ ಉಳಿದ ಹಂಸಗಳು ಬದಿಗೆ ಸರಿದು ನಿಂತಿದ್ದವು. ಮರಿಯು ಮುಂದಾಗಿ ನೀರಿಗೆ ಇಳಿಯಿತು. ಅದನ್ನು ಕಂಡೊಡನೆ ಆ ಹಂಸಗಳೆಲ್ಲ ಇದೊಂದು ಹೊಸ ಸಂಗಾತಿ ಸಿಕ್ಕನೆಂದು ಹಿಗ್ಗಿ ಕೇಕೆಹಾಕುತ್ತ ಮುನ್ನುಗ್ಗಿ ಬಂದವು. ಬಡ ಮರಿ ಹೆದರಿತು. ತನ್ನನ್ನು ಕೊಲ್ಲಲೇ ಅವು ಏರಿ ಬಂದವೆಂದು.

"ನಾನು ಸಾಯಲು ಸಿದ್ಧನಿದ್ದೇನೆ. ನಾನು ಯಾಕೆ ಹುಟ್ಟಿದೆನೋ ನಾನರಿಯೆ. ಬಾಳಲು ಬದುಕಿ ಉಳಿಯಲು ನನ್ನಂಥ ಅಂದಗೇಡಿಗೆ ಹಕ್ಕು ಇಲ್ಲ. ನನ್ನನ್ನು ಕೊಂದುಬಿಡಿ" ಎಂದು ಆ ಅಂದಗೇಡಿ ಬಾತು ಮರಿ ತಲೆ ತಗ್ಗಿಸಿತು.

ಆದರೆ ತಲೆ ತಗ್ಗಿಸಿದಾಗ ಆತ ನೀರಿನಲ್ಲಿ ಕಂಡದ್ದೇನು? ಆ ಅಂದಗೆಟ್ಟ ಮೈ, ಕಂದುಗೆಟ್ಟ ಮೈ ಎಲ್ಲಿ? ಅಸಡ್ಡಾಳ ಕುತ್ತಿಗೆ ಕೊಕ್ಕೆ ಕಾಲು ಎಲ್ಲಿ? ಅವೆಲ್ಲ ಮಾಯವಾಗಿದ್ದವು. ಅವನು ಈಗ ಸುಂದರಾಂಗ. ಬೆಡಗಿನ ಸಡಗರದ ಬಿಳಿಯ ಹಂಸ, ಅದೇ ಹೊತ್ತಿಗೆ ನೀರಿಗೆ ಬಂದ ಮಕ್ಕಳು ಚಪ್ಪಾಳೆ ತಟ್ಟಿ ಕೂಗಿದರು. "ನೋಡಿ, ನೋಡಿ ಎಷ್ಟು ಮುದ್ದಾದ ಹಂಸ, ಎಲ್ಲ ಹಂಸಗಳಲ್ಲಿ ಈ ಹೊಸ ಹಂಸವೇ ತುಂಬ ಚೆಲುವ?" ಅಂದಗೇಡಿ ಬಾತು ಮರಿ ನಿಜವಾಗಿಯೂ ರಾಜಹಂಸವಾಗಿತ್ತು! ಚೆಲುವಿನ ಹಿಗ್ಗು, ಗೆಲುವಿನ ಹಿಗ್ಗು ಅವನ ಎದೆಯನ್ನು ತುಂಬಿತು!

## ೧೫. ಆಕಾಶ ಬುಟ್ಟಿಯ ಪುರಾಣ

*ಇದು ಸಾವಿರ ವರ್ಷಗಳ ಹಿಂದಿನ ಕಥೆ. ಇದು ಚೀನದಲ್ಲಿ ಹುಟ್ಟಿದ ಮೊಟ್ಟಮೊದಲು ಆಕಾಶಬುಟ್ಟಿಯ ಕಥೆ. ಜತೆಗೆ ರೂಪಸುಂದರಿ, ಸರದಾರ ಕುವರಿ ಯೋ–ಸಿಂಗಳ ಪ್ರತಿಲೋಮ ಪ್ರಣಯದ ಗೆಲುವಿನ ಕಥೆ.*

ಒಂದು ದಿನ ನಡುಹಗಲು ಸರಿದಿತ್ತು. ಚೀನೀಯರ ಭಾಷೆಯಲ್ಲಿ ಹೇಳುವುದಾದರೆ 'ಮಂಗನ ಪ್ರಹರ' ಸರಿದಿತ್ತು. ಸಂಜೆ ಅಥವಾ 'ನಾಯಿಯ ಪ್ರಹರ' ಇನ್ನೂ ದೂರವಿತ್ತು. ತಂದೆಯ ಅರಮನೆಯ ಉಪವನದಲ್ಲಿ ಯೋ-ಸಿಂಗಳು ಅಂಗೈಯಲ್ಲಿ ಕೆಂಗಲ್ಲವನ್ನಿಟ್ಟುಕೊಂಡು ನಿಟ್ಟುಸಿರು ಬಿಡುತ್ತ ಕೂತಿದ್ದಳು- ಕೊಳದ ತಡಿಯಲ್ಲಿ.

ತಾಯಿ ಇಲ್ಲದ ತರಳೆ, ಮುದಿ ತಂದೆ ಮುದ್ದಿನಿಂದ ಅಂಗೈಯ ಅರಗಿಣಿಯಂತೆ ಬೆಳೆಯಿಸಿದ ಚೆಲುವೆ ಯೋ-ಸಿಂಗ್, ತಂದೆಗೆ ಇವಳೊಬ್ಬಳೇ ಸಂತತಿ, ಆತನೋ ಬಹಳ ಸಿರಿವಂತ ಸರದಾರ. ದಿನಬೆಳಗಾದರೆ ಅರಸನ ಓಲಗಕ್ಕೆ ಹೋಗಬೇಕು. ಓಲಗ ಮುಗಿಯುವ ತನಕವೂ ಸಿಂಹಾಸನದ ಮುಂದೆ ಮಂಡಿಯೂರಿ ನಿಂತು ಅರಸನನ್ನು ಓಲೈಸಬೇಕು. ನಗರದ ಪ್ರತಿಷ್ಠಿತ ಸರದಾರನೆಂದ ಮೇಲೆ ಅವನೊಂದಿಗೆ ಮತ್ತು ಅವನಿಲ್ಲದಾಗ ಮನೆಗೆ ಬರಹೋಗುವ ಗಣ್ಯರೂ ಮಾನ್ಯರೂ ಬಹಳ, ಬರಹೋಗುವವರ ಆದರಾತಿಥ್ಯವನ್ನು ನೋಡಿಕೊಳ್ಳುವ ಯಜಮಾನಿ ಯೋ-ಸಿಂಗಳೇ. ಇದರಿಂದ ಅವಳು ತನ್ನ ವಯಸ್ಸು ಮೀರಿ ದಿಟ್ಟಳಾಗಿದ್ದಳು. ಚೆಲುವಿನಷ್ಟೇ ಚದುರನ್ನೂ ಮೈಗೂಡಿಸಿಕೊಂಡಿದ್ದಳು. ನಡೆಯಲ್ಲಿ ನುಡಿಯಲ್ಲಿ ನೋಟದಲ್ಲಿ, ನಿಲುಮೆಯಲ್ಲಿ ಯೋ-ಸಿಂಗ್ ನಕ್ಷತ್ರದಂತೆ ಆಕರ್ಷಕಳು, ರಾಜಪುತ್ರಿಯಂತೆ ಪ್ರಭಾವಿ. ಆದರೆ ಜತೆಗೇ ತುಂಬ ವಿನಯ; ಮಧುರ ಪರಿಹಾಸ ರಸಿಕಳು. ರಸಿಕಳಿದ್ದಷ್ಟೇ ಮರ್ಯಾದೆಯ ಸೌಜನ್ಯದ ಮೂರ್ತಿ.

ತಂದೆ ಇಲ್ಲದಿದ್ದಾಗ– ಆತ ಮನೆಯಲ್ಲಿ ಇರುವುದೇ ಕಡಿಮೆ – ಬಂದ ಅಭ್ಯಾಗತರನ್ನು ಚತುರ ಮಧುರ ಸಂಭಾಷಣೆಯಿಂದ ಉಪಚರಿಸಿ ಅವರಿಗೆ ನಡುಮನೆಯಲ್ಲಿಯೋ ಉಪವನದ ಲತಾಮಂಟಪದಲ್ಲಿಯೋ, ಹಸಿರು ಚಹ ಸೋಸಿಕೊಟ್ಟು ತಿಂಡಿ ಇಟ್ಟು ಸತ್ಕರಿಸುವುದರಲ್ಲಿ ಯೋ-ಇಸಿಂಗ್ ಮಾದರಿಯ ಗೃಹಿಣಿ ಎನಿಸಿಕೊಂಡಿದ್ದಳು. ಅವಳ ಸುಕುಮಾರ ಹಸ್ತದ ಚಹವನ್ನು ಸವಿಯಲಿಕ್ಕೋ ಅದಕ್ಕಿಂತ ಹೆಚ್ಚು ಆ ಕೈಯ ಸೌಕುಮಾರ್ಯವನ್ನೂ ಅದರ ಹಿಂದೆ ನಗುತ್ತ ನಿಂತ ಆ ತರುಣಿಯ ಸೌಂದರ್ಯವನ್ನೂ ಕಣ್ಣಿನಿಂದ ಸವಿಯಲಿಕ್ಕೋ ತರುಣರೂ ವೃದ್ಧರೂ ಅನೇಕ ಪ್ರತಿಷ್ಠಿತ ಧನಿಕ ಶ್ರೇಷ್ಠಿಗಳೂ ಈ ಸರದಾರರ ಮನೆಗೆ – ಈತ ಇರದಿದ್ದಾಗಲೇ ಹೆಚ್ಚಾಗಿ ಬಂದುಹೋಗುತ್ತಿದ್ದರು. ಬಂದವರು ಬೇಗ ಹೋಗುತ್ತಿರಲಿಲ್ಲ. ಸರದಾರನಿಗಾಗಿ ಕಾಯುವ ನೆಪದಲ್ಲಿ ಯೋ-ಸಿಂಗಳೊಂದಿಗೆ ಹರಟುತ್ತ ಕೂತಿರುತ್ತಿದ್ದರು.

ಯೋ-ಸಿಂಗಳಿಗೂ ಈ ಧೂರ್ತರ ಅಥವಾ ಮೂರ್ಖರ ಇಂಗಿತ ಗೊತ್ತು. ಅವಳು ಯಾರಿಗೂ ಸೋಲದೆ ಅವರ ಮೈಗಳ್ಳ ವಿಲಾಸಿ ಮರುಳಾಟಕ್ಕೆ ಮನಸ್ಸಿನಲ್ಲಿಯೇ ತಿರಸ್ಕಾರಪಡುತ್ತ ಲೋಕಾಭಿರಾಮಖಾಗಿ ನಗೆಮೊಗದಿಂದ ಅವರನ್ನು ಉಪಚರಿಸುತ್ತ, ಬೆಕ್ಕು-ಇಲಿಗಳೊಂದಿಗೆ ಚಿನ್ನಾಟವಾಡುವಂತೆ ಕುಣಿಸಿ ಆಡುತ್ತಿದ್ದಳು.

*  *  *

ಆದರೆ ಇಂದು ಯೋ-ಸಿಂಗ್ ಏಕಾಕಿಯಾಗಿದ್ದಳು, ಏಕಾಂತದಲ್ಲಿದ್ದಳು, ಗಂಭೀರವಾಗಿದ್ದಳು, ಮೌನವಾಗಿದ್ದಳು. ಯಾರು ಬಂದರೂ ಉಪವನದಲ್ಲಿ ಪ್ರವೇಶವಿದ್ದಿಲ್ಲ. ಯಾವುದೋ ಚಿಂತನ, ಯಾವುದೋ ಚಿಂತೆ ಅವಳ ಮನಸ್ಸಿನ ಮೊಗ್ಗೆಯನ್ನು ಕೀಟದಂತೆ ಕೊರೆಯುತ್ತಿತ್ತು. ಅಲ್ಲ, ಕೀಟ ಒಂದೇ ಕೀಟಲೆ ಕೊಡುತ್ತಿತ್ತು ಮನಸ್ಸು ಅಲ್ಲಿ, ಅವಳಲ್ಲಿ ಇದ್ದಿಲ್ಲ. ಅದು ದೂರ ಅರಮನೆಯಿಂದ ನೆರೆಹೊರೆಯಿಂದ ದೂರ ಹೊರಟುಹೋಗಿತ್ತು.

ಅವಳಿಗೆ ಎದುರಿನ ಕೊಳ, ಅಲ್ಲಿ ಅರಳಿದ ತಾವರೆ, ಅದರ ಬಳಿ ತೇಲುವ ಹಂಸಗಳು, ಆಚೆ ತಡಿಯ ಮರ, ಮರದ ಮೇಲಿನ ಕೂಹೂಗುಡುವ ಕೋಗಿಲೆ- ಯಾವುದೂ ಗೋಚರವಾಗುತ್ತಿದ್ದಿಲ್ಲ. ಅವಳ ಕಣ್ಣಿಗೆ ಮುಚ್ಚಿರಲಿ, ದಿಟ್ಟಿಸಿರಲಿ, ಕಾಣುವುದು ನಗರದೊಳಗಿನ ಇಕ್ಕಟ್ಟಾದ ಬಡವರ ಕೇರಿ, ಅಲ್ಲಿ ಎಡಬಲದ ಚಿಕ್ಕ ಚಿಕ್ಕ ಅಂಗಡಿಗಳು, ಬೀದಿ ತುಂಬ ಜನಸ್ತೋಮ, ಒರಟಾದ ನೀಲಿ ಬಟ್ಟೆಗಳಲ್ಲಿ ಬರಹೋಗುವ ಕೆಲಸಗಾರರು, ರೈತರು ಆವರ ಮಾಸಿದ ಮೈ- ಕೈಯ ಒರಟು ದೇಹಗಳು. ಚರಂಡಿಯ ಬದಿಗೆ ಮಣ್ಣಿನಲ್ಲಿ ಕುನ್ನಿಗಳೊಂದಿಗೆ ಹಂದಿಮರಿಗಳೊಂದಿಗೆ ಕೂತು ಆಡುವ ಕೂಸುಗಳು. ಅಲ್ಲಿ, ಅವರ ಆಚೆಗೆ ಅಂಗಡಿಗಳ ಸಾಲಿನಲ್ಲಿಯ ಒಂದು ಪುಟ್ಟ ಅಂಗಡಿ. ಅದರ ಮುಂದಿನ ಹಲಗೆಯ ಕಪಾಟಿನ ಹಿಂದೆಯೇ ಬಿದಿರ ಚಾಪೆಯ ಗೋಡೆಯಾಚೆಗೆ ಗಂಜಿ ಬೇಯಿಸಿಕೊಳ್ಳುತ್ತಿದ್ದ ಒಬ್ಬ ಕೆದರಿದ ಕೂದಲಿನ ಆಜಾನುಬಾಹು ನವಯುವಕ.

ಹೌದು, ಆ ಯುವಕ ಅವಳ ಕಣ್ಣಿಗೆ ಕಟ್ಟಿದ್ದನು. ಎದೆಯಲ್ಲಿ ನಟ್ಟಿದ್ದನು. ಒಂದು ವಾರದ ಹಿಂದೆ ಆತ ಅವಳ ಅರಮನೆಗೆ ಬಂದಿದ್ದ. ಆತ ಕಾಗದ ತಯಾರಿಸುವ ಕಸಬುಗಾರ, ಅಂಥ ತರತರದ ಬೆಡಗಿನ ಸೊಬಗಿನ ಹಾಳೆಗಳನ್ನು ಯೋ-ಸಿಂಗ್ ಹಿಂದೆ ಒಟ್ಟಾಗಿ ಎಂದೂ ನೋಡಿದ್ದೇ ಇಲ್ಲ. ಅವುಗಳನ್ನು ತಯಾರಿಸುವ ಇಂಥ ಹೊಳೆಯುವ ಕಣ್ಣುಗಳುಳ್ಳ ಕುರುಳು ಕೂದಲು ಹಣೆ ತುಂಬ, ಆಡುವ ಫಕ್ಕನೆ ನಕ್ಕರೆ ಬೆಳ್ಳಗೆ ಬೆಳಗುವ ಹಲ್ಲ ಸಾಲಿನ ವಿಶಾಲವಾದ ಎದೆಯ ಗಟ್ಟಿಮುಟ್ಟಾದ ಮೈಕಟ್ಟಿನ ತರುಣನನ್ನಂತೂ ಆಕೆ ಅಂದೇ ನೋಡಿದ್ದು. ಜೊಲ್ಲು ಸುರಿಸುತ್ತ ಬಾಲ ಗುಂಡಾಡಿಸುತ್ತ ಅವಳಲ್ಲಿಗೆ ಬಂದು ಹೋಗುವ ಯಾವ ಸಿರಿವಂತ ಪುರುಷನೂ ಈ ಕಾಗದ ಮಾಡುವವನಂತೆ ಇದ್ದಿಲ್ಲ.

ಆತ ಕಾಗದ ಮಾರಲಿಕ್ಕೆ ಬಂದಿದ್ದನು. ಜಿನುಗಾದ, ನುಣುಪಾದ ಬಣ್ಣಬಣ್ಣದ ಎಂಥ ಅಂದ ಚಿಂದದ ಕಾಗದಗಳು! ಆತ ಕಾಗದ ಮಾರುವ ಬದಲು ಆಕೆಯೇ ಆ ಕಾಗದದವನಿಗೆ ತನ್ನನ್ನು ಮಾರಿಕೊಂಡಿದ್ದಳು. “ಸರದಾರರು ಮನೆಯಲ್ಲಿ ಇಲ್ಲ, ಅವರು ಬಂದಮೇಲೆ ಬಾ” ಎಂದು ಯೋ-ಸಿಂಗ್ ಅದೇಕೋ ನಗುವಾಗಲೂ ನಾಚಿ ಕೆನ್ನೆ

ಕೆಂಪೇರಿ-ಹೇಳಿ ವೇಳೆಯನ್ನು ಸೂಚಿಸಿದ್ದಳು. ಆಕೆ ಕೊಟ್ಟ ವೇಳೆಗೆ ಕಾಗದದವನು ಮತ್ತೆ ಬಂದನು. ಅವಳ ತಂದೆ ಅವನ ಮಾತುಕತೆ, ವಿನಯ ಮತ್ತು ಉತ್ತಮ ಕೈಗಾರಿಕೆಯ ಕೌಶಲ್ಯಕ್ಕೆ ಮೆಚ್ಚಿಹೋದನು. ಬಹಳ ಹಾಳೆಗಳನ್ನೂ ಹೂಗಳನ್ನೂ, ಚಿತ್ರಗಳನ್ನೂ ಕೊಂಡುಕೊಂಡನು ಮುದ್ದು ಮಗಳಿಗಾಗಿ.

ಆಮೇಲೆ ಕಾಗದಗಾರ ಮತ್ತೆ ಮತ್ತೆ ಬರತೊಡಗಿದನು. ಯೋ-ಸಿಂಗ್ ಕಾಗದದ ಹೂವು ಮಾಡಲು ಕಲಿಯಬೇಕೆಂದಳು. ಅವಳ ಹೂವಿನಂಥ ಮನಸ್ಸನ್ನು ತಂದೆ ಹೇಗೆ ಬಾಡಿಸ್ಯಾನು? ಅಂದಿನಿಂದ ಸಿರಿವಂತ ಸರದಾರ ಕನ್ಯೆ ಯೋ-ಸಿಂಗ್ ಮತ್ತು ಆ ಬಡ ಕಾಗದಗಾರ ಇವರಿಬ್ಬರಲ್ಲಿ ಪ್ರೀತಿ ಬೆಳೆಯತೊಡಗಿತು. ಪ್ರೀತಿಯ ರೀತಿಯೇ ಹೀಗೆ. ಅದು ನುಣ್ಣಗೆ ನೇರಕ್ಕೆ ಬೆಳೆಯುವುದೇ ಅಪರೂಪ ಕಾಲದಂತೆ ಪ್ರೇಮದ ಗತಿಯೂ ಕುಟಿಲ.

*        *        *

ಅದೇ ಪ್ರೇಮದ ಕುಟಿಲ ಗತಿಯನ್ನೇ ಇಂದು ಯೋ-ಸಿಂಗ್ ಚಿಂತಿಸುತ್ತ ಅಂಗೈಯಲ್ಲಿ ಕೆಂಗಲ್ಲವಿಟ್ಟು ಕುಳಿತಿದ್ದಳು. ಅಂದೇ ಮುಂಜಾನೆ ಮುದಿ ಸರದಾರ ಅವಳ ಮದುವೆಯ ಪ್ರಸ್ತಾಪ ತೆಗೆದಿದ್ದ ಯಾರೋ ಧನಿಕ ಕುಬೇರನೊಬ್ಬ ತನಗಾಗಿ ಯೋ-ಸಿಂಗಳನ್ನು ಬೇಡಿದ್ದ ಆದರೆ ಯೋ-ಸಿಂಗ್ ಒಪ್ಪಲಿಲ್ಲ. ತಂದೆಯ ಕಾಲುಗಳನ್ನು ಬಿಗಿಯಾಗಿ ಅಪ್ಪಿಕೊಂಡು ಅತ್ತೇ ಅತ್ತಳು. ಪಾಪ, ಅತ ತಂದೆಯೂ ಅಹುದು. ತಾಯಿಯೂ ಅಹುದು. “ನಿನ್ನ ಮನಸ್ಸು ಏನು? ಯಾರನ್ನು ಪ್ರೀತಿಸುವಿ?” ಆತ ಅಂಜುತ್ತಲೇ ಕೇಳಿದ. ಯೋ-ಸಿಂಗ್ ಅಳು ನಿಲ್ಲಿಸಿ ಕಂಬನಿಗಳೊಳಗಿಂದಲೇ ಹೂ ಬಿಸಿಲು ಚೆಲ್ಲಿದಂತೆ ನಕ್ಕು ನಾಚುತ್ತ ತನ್ನ ಅಂತರಂಗದ ಮಾತನ್ನು ತಂದೆಯ ಗಡ್ಡ ನೇವರಿಸುತ್ತ ಕಿವಿಯಲ್ಲಿ ಹೇಳಿದಳು.

ಸರದಾರ ಬೆಚ್ಚಿಬಿದ್ದ. ಆ ದರಿದ್ರ ಕಸಬುಗಾರನೆಲ್ಲಿ, ಸರದಾರ ಕುಲೀನ ಕುಲೋತ್ತಮೆಯೆಲ್ಲಿ! ಅತ ಒಪ್ಪಲಿಲ್ಲ, ಯೋ-ಇಸಿಂಗ್ ದುಂಬಾಲು ಬಿದ್ದಳು. ಕಾಲು

ಹಿಡಿದಳು, ಮುದುಕ ಬಾಳಿನಲ್ಲಿಯೇ ಮೊದಲು ಬಾರಿ ಸಿಡಿದೆದ್ದು ಮಗಳನ್ನು ನೂಕಿ ಹೊರಟುಹೋದ.

ಆಗಿನಿಂದ ಆಕೆ ಕೊಳದ ತಡಿಯಲ್ಲಿ ಹಾಗೆ ಬಳಲಿ ಬೆಂಡಾಗಿ ಕೂತಿದ್ದಳು. ಕೊಳದಲ್ಲಿ ನೋಡುತ್ತಿದ್ದಂತೆ ಆಕೆ ದಿಗಿಲುಬಿದ್ದಳು. ಹಿಂದೆ ತಂದೆ ಬಂದು ನಿಂತಿದ್ದನು. “ಮಗೂss” ಆತ ಕಕದನು. ಕರೆಯಲ್ಲಿಯೇ ಕರುಳು ಕರಗಿದ ದನಿಯಿತ್ತು. ಯೋ-ಸಿಂಗ್ ಎದ್ದು ತಂದೆಯನ್ನು ಬಿಗಿದಪ್ಪಿ ಅವನ ಎದೆಯಲ್ಲಿ ತಲೆ ಅಡಗಿಸಿ ಬಿಕ್ಕಿ ಬಿಕ್ಕಿ ಅತ್ತಳು. ತಂದೆಗೆ ಅವಳ ತಾಯಿಯ ನೆನಪಾಯಿತು. ಆತನೂ ಕಣ್ಣೀರು ತೊಟಕಿಸಿದನು. ಆಮೇಲೆ ಆತನ ಅಂದ, “ಮಗೂ, ನಿನ್ನ ಹಟಕ್ಕೆ ನಾನು ಸೋತೆ, ನನಗೆ ಗೊತ್ತು, ಆ ಕಾಗದಗಾರ ಸಜ್ಜನ, ಕುಶಲ, ಬುದ್ಧಿವಂತ, ಎಲ್ಲ ಸರಿ, ಆದರೆ ಆತ ದರಿದ್ರ ಕೂಲಿಕಾರ ಕುಲದವನು, ಆದರೂ ಅಡ್ಡಿ ಇಲ್ಲ, ಆದರೆ ನೋಡು, ವಿಚಾರ ಮಾಡು. ಮುಂದೆ ಪಶ್ಚಾತ್ತಾಪಪಡಬೇಕಾದೀತು ಅವನ ಹೆಂಡತಿಯಾಗಿ ಅವನ ಅಂಗಡಿಯ ಹಿಂದೆ ಗಂಜಿ ಬೇಯಿಸಿಕೊಂಡು ಚಾಪೆಯ ಮೇಲೆ ಮಲಗಬೇಕಾದಾಗ ನನ್ನ ನೆನಪಾದೀತು!” ಆದರೆ ಯೋ-ಸಿಂಗ್ ಕೇಳಲಿಲ್ಲ, “ನಿನ್ನ ನೆನಪು ಎಂದೂ ಮರೆಯಲಾರೆ. ಆದರೆ ಅವನೊಂದಿಗೆ ನರಕಕ್ಕೂ ಹೋಗಿ ಬದುಕಬಲ್ಲೆ, ಅವನಿದ್ದಲ್ಲಿಯೇ ನನಗೆ ಸ್ವರ್ಗ!” ಎಂದಳು.

ಆಗ ಒಂದು ಕ್ಷಣ ಧೇನಿಸಿ ಮುದುಕ ಮುತ್ಸದ್ದಿ ಅಂದ, “ಸರಿ, ನೀನು ಅವನನ್ನೇ ಮದುವೆಯಾಗು, ಆದರೆ ಒಂದು ಶರ್ತು, ಆತ ಗಾಳಿಯನ್ನೂ ಬೆಂಕಿಯನ್ನೂ ತನ್ನ ಆ ಕಾಗದದ ಹಾಳೆಯಲ್ಲಿ ಹಿಡಿದಿಡಬೇಕು!” ಹೀಗೆಂದು ಸರದಾರ ದಿಗ್ಗನೆ ಹೊರಟುಹೋದನು.

ಯುವಕ ಕಾಗದಗಾರ ಮರುದಿನ ಬಂದಾಗ ಯೋ-ಸಿಂಗ್ ಆದದ್ದನ್ನೆಲ್ಲ ಅವನ ತೋಳುಗಳ ತೆಕ್ಕೆಯಲ್ಲಿ ತೋಡಿಕೊಂಡಳು. ಆತ ಗಂಭೀರನಾದ. “ಗಾಳಿ? ಕಾಗದದಲ್ಲಿ ಸೆರೆ ಹಿಡಿಯಬಹುದೇನೋ, ಆದರೆ ಬೆಂಕಿ? ಕಾಗದದಲ್ಲಿ? ಹಾಳೆ ಸುಟ್ಟು ಕನ್ನೆ

ಬೀಳಬಹುದಲ್ಲ! ಆಗಲಿ ನೋಡೋಣ” ಎಂದು ಯುವಕ ಧೈರ್ಯ ಹೇಳಿ ಮೂರು ತಿಂಗಳ ಅವಧಿಯನ್ನು ಬೇಡಿದನು.

ಯೋ-ಸಿಂಗ್ ತಂದೆಗೆ ಹೇಳಿದಳು, ಆತನಿಗೆ ಗೊತ್ತು ತಾನು ಹಾಕಿದ ಶರ್ತು ಅಸಾಧ್ಯ, ಈ ಮದುವೆ ಆಗಲಾರದು! “ಏನು? ಎಲ್ಲಿಗೆ ಬಂತು ನಿನ್ನ ಕಾಗದಗಾರನ ಪ್ರತಿಜ್ಞೆ?” ಎಂದು ವಾರವಾರವೂ ಆತ ಮಗಳನ್ನು ಕೇಳಿ ಛೇಡಿಸ ಹತ್ತಿದನು.

ಒಂದು ದಿನ ಆಕೆ ಕುಲುಕುಲು ನಗುತ್ತ ತಂದೆಯ ಬಳಿ ಓಡಿದಳು. “ಅಪ್ಪಾ, ನಾಳೆ ನಿನ್ನ ಹುಟ್ಟುಹಬ್ಬ, ನೆನಪುಂಟೇ? ನಾಳೆ ರಾತ್ರಿ ಹೂದೋಟದಲ್ಲಿ ನಿನ್ನ ಇಷ್ಟಮಿತ್ರರಿಗೆಲ್ಲ ಮೇಜವಾನಿ ಆಗಲಿ ಮತ್ತು-”

“ಸರಿ ನಾನು ಬಲ್ಲೆ. ನಿನ್ನ ಇಷ್ಟಮಿತ್ರರನ್ನೂ ಕರೆಯಬೇಕಷ್ಟೇ? ಅಡ್ಡಿ ಇಲ್ಲ ಕರೆದುಕೋ. ಆದರೆ ಆತನ ಪ್ರತಿಜ್ಞೆ ಎಲ್ಲಿಗೆ ಬಂದಿತು?” ತಂದೆ ಕೇಳಿದನು.

“ನಾಳೆ ನೋಡುವಿಯಂತೆ!” ಯೋ-ಸಿಂಗ್ ತುಂಬು ನಗೆ ನಕ್ಕು ಅಂದಳು.

ಮರುದಿನ ರಾತ್ರಿ ಬೆಳದಿಂಗಳಿದ್ದಿಲ್ಲ ಕಗ್ಗತ್ತಲೆ, ಆದರೆ ಹೂದೋಟದ ತುಂಬ ಬಣ್ಣ ಬಣ್ಣದ ಬೆಳಕಿನ ಓಕುಳಿ ಚೆಲ್ಲಿತ್ತು. ಅತಿಥಿಗಳು ಮೈಯೆಲ್ಲ ಕಣ್ಣಾಗಿ ನೋಡಿದ್ದೇ ನೋಡಿದ್ದು. ಯೋ-ಸಿಂಗ್ ತಂದೆಯನ್ನು ಕೈಹಿಡಿದು ತೋಟದ ತುಂಬ ತಿರುಗಾಡಿಸಿದಳು, ಮರಗಳ ಕೊಂಬೆಕೊಂಬೆಗಳಿಂದ ದೊಡ್ಡ ಹಣ್ಣು ಹಂಪಲುಗಳಂತೆ ಹೂಗೊಂಚಲುಗಳಂತೆ ಬಣ್ಣದ ಹಾಳೆಗಳ ದೀಪಗಳು – ಆಕಾಶಬುಟ್ಟಿಗಳು– ತೂಗಾಡುತ್ತಿದ್ದವು. ತೋಟದ ತುಂಬ ಅದೇ ಬಣ್ಣದ ಬೆಳಕು ತುಳುಕಾಡುತ್ತಿತ್ತು! ಮುದುಕ ಚಕಿತನಾದ, ಮೆಚ್ಚಿ ಮುಗ್ಧನಾದ. “ಇದೇನು ಮಗೂss” ಆತ ಕೇಳಿದನು. ಆಗ ಅದೇ ಸಮಯ ಒಳ್ಳೆಯ ರೇಶಿಮೆಯ ನಿಲುವಂಗಿ ತೊಟ್ಟ ಯುವಕ ಕಾಗದಗಾರನು ಮುಂದೆ ಬಂದು ಕೈಜೋಡಿಸಿ ಅಂದನು: “ಸ್ವಾಮಿ, ಇದು ಬೆಂಕಿ, ಕಾಗದದಲ್ಲಿ ಹಿಡಿದಿಟ್ಟಿದ್ದೇನೆ!” ಮುದಿ ಸರದಾರ ಬೆರಗಾದನು. ಆಗಲೆ ಯೋ-ಸಿಂಗ್ ಖಿಲಿಖಿಲಿ ನಗುತ್ತ ತನ್ನ

ಕೈಯೊಳಗಿನ ಎರಡು ಉದ್ದ ಕೋಲುಗಳನ್ನು ಗೋಲಾಗಿ ತೆರೆದಳು. “ಅದೇನು ಮತ್ತೆ” ಸರದಾರನು ಕಣ್ಣು ಕಣ್ಣು ಬಿಟ್ಟು ಕೇಳಿದನು. ಯೋ-ಸಿಂಗ್ ಕಾಗದದ ನಿರಿಗೆಗಳು ತೆರೆದ ಆ ಬಣ್ಣ ಬಣ್ಣದ ಬೀಸಣಿಕೆಯಿಂದ ತಂದೆಯ ಮುಖಕ್ಕೆ ಗಾಳಿ ಬೀಸುತ್ತ ಮೃದುವಾಗಿ ಅಂದಳು: “ಇದು ಗಾಳಿ, ಹಾಳೆಯಲ್ಲಿ ಹಿಡಿದಿಟ್ಟದ್ದು!” ಹಾಗೆಯ ಆ ಬೀಸಣಿಗೆಯನ್ನು ತಂದೆಯ ಕೈಯಲ್ಲಿ ಕೊಟ್ಟು ತನ್ನ ಪ್ರಿಯಕರನೊಂದಿಗೆ ಅವನ ಪಾದಮುಟ್ಟಿ ನಮಸ್ಕರಿಸಿ, ಇಬ್ಬರೂ ಹಿಗ್ಗಿ ನಕ್ಕು ಕೈಗೆ ಕೈ ಸಿಲುಕಿಸಿ ಕೊಳದ ಕಡೆಗೆ ಹೊರಟುಹೋದರು.

ಅಂದಿನಿಂದ ವರ್ಷಕ್ಕೆ ಒಂದು ದಿನ ಯೋ-ಸಿಂಗಳ ಪ್ರೇಮದ ಸ್ಮಾರಕವಾಗಿ ಆಕಾಶಬುಟ್ಟಿ ಮತ್ತು ಬೀಸಣಿಕೆಗಳು ಹುಟ್ಟಿದ ದಿನ ಚೀನೀಯರು ದೀಪಗಳ ಹಬ್ಬ ಆಚರಿಸುತ್ತ ಬಂದಿದ್ದಾರೆ.

## ೧೬. ಬರ್ಮಿಸೈದ ಮೇಜವಾನಿ

*ಇದು "ಅರೇಬಿಯನ್ ನೈಟ್ಸ್ ಎಂಟರಟೇನಮೆಂಟ್ಸ್" (ಯವನ ಯಾಮಿನೀ ವಿನೋದ) ಎಂಬ ಅರಬೀ ಕಥೆಗಳ ಸಂಗ್ರಹದಲ್ಲಿ ಬಂದ "ನಾಪಿತನ ಆರನೆಯ ತಮ್ಮನು ಹೇಳಿದ ಕಥೆ."*

*ಹರೂನ-ಆಲ್-ರಶೀದ ಬಗದಾದದ ದೊರೆ. ಅವನಿಗೆ ಎರಡು ಹುಚ್ಚು-ಅಷ್ಟೇ ಬಲಿಷ್ಠ, ಒಂದು, ದಿನಕ್ಕೊಂದು ಮದುವೆ ಮಾಡಿಕೊಂಡು ಒಂದಿನ ವಧುವಿನೊಂದಿಗೆ ರಾತ್ರಿ ಕಳೆದ ಮೇಲೆ ಮರುದಿನ ಮುಂಜಾನೆಯೇ ಅವರನ್ನು ಕೊಲ್ಲಿಸಿ ಹೊಸ ಮದುವೆಗೆ ಸಿದ್ಧನಾಗುವದು. ಇನ್ನೊಂದು, ಹೊಸ ಹೊಸ ಕಥೆಗಳನ್ನು ಕೇಳುವದು, ಅವನ ಈ ಎರಡನೆಯ ಹುಚ್ಚಿನಿಂದ ಮೊದಲನೆಯ ಹುಚ್ಚು ತೊಲಗಿತು.*

*ಹೇಗೆಂದರೆ ಹಲವಾರು ಹೊಸ ಹರಯದ ಹೆಣ್ಣುಮಕ್ಕಳನ್ನು ದಿನಕ್ಕೊಂದು ಮದುವೆಯಾದ ಮರುದಿನ ಕೊಂದ ಮೇಲೆ, ಆತ ಒಬ್ಬ ಚೆಲುವೆ ಚತುರೆ ಕನ್ಯೆಯ ಹಿಡಿದನು. ಆಕೆ ಮದುವೆಯ ರಾತ್ರಿ ಹರೂನನಿಗೆ ಒಂದು ಕಥೆಯನ್ನು ಹೇಳಿದಳು. ಕಥೆಯಲ್ಲಿ ತೇಲಿಹೋದ ದೊರೆ ಅವಳನ್ನು ಆ ರಾತ್ರಿ ತೀರಿದಾಗ ಕೊಲ್ಲಿಸಲು ಮರೆತನು. ಆದರೆ ಮರುರಾತ್ರಿಯೇ ಆಕೆ ಇನ್ನೊಂದು ಕಥೆ ಹೇಳಿದಳು, ಅದು ಹಿಂದಿನದಕ್ಕಿಂತ ಹೆಚ್ಚು ಸುರಸವಾಗಿತ್ತು. ಹೀಗೆ ರಾತ್ರಿಯ ಬೆನ್ನಿಗೆ ರಾತ್ರಿ ಸಂದವು. ಆದರೆ ಕಥೆಗಳು ಮುಗಿಯಲಿಲ್ಲ. ಅವುಗಳ ಸ್ವಾರಸ್ಯವೂ ಕಡಿಮೆಯಾಗಲಿಲ್ಲ, ಕೊನೆಗೆ ತನ್ನ ಈ ಹೆಂಡತಿಯ ಬುದ್ಧಿವಂತಿಕೆಯನ್ನು ಮೆಚ್ಚಿ ಹರೂನ ಅವಳನ್ನು ಕೊಲ್ಲಿಸದೆ ಬಿಟ್ಟ, ಅವಳು ಹೇಳಿದ ಕಥೆಗಳ ಸಂಗ್ರಹವೇ "ಯವನ- ಯಾಮಿನೀ ಕಥಾ ವಿನೋದ."*

ನಾಪಿತನ ಆರನೆಯ ತಮ್ಮನ ಹೆಸರು ಶ್ಚಕಲಿಕ. ಅವನು ತಂದೆಯಿಂದ ನೂರು ರೂಪಾಯಿಗಳನ್ನು ಪಡೆದು ಅವನ್ನೆಲ್ಲ ದುರ್ದೈವದಿಂದ ಕಳೆದುಕೊಂಡು ಭಿಕ್ಷೆ

ಬೇಡತೊಡಗಿದನು. ಅವನ ನಾಲಿಗೆ ಚುರುಕಾಗಿ ನುಣ್ಣಗಾಗಿ ಕೆಲಸ ಮಾಡುತ್ತಿದ್ದಿತು. ಅವನ ನಡತೆಯೂ ಒಳ್ಳೆ ಸಭ್ಯವಾಗಿತ್ತು. ಆದ್ದರಿಂದ ತಿರುಪೆಯ ಈ ಹೊಸ ಕಸಬಿನಲ್ಲಿಯೂ ಅವನ ವರಮಾನ ಚೆನ್ನಾಗಿ ಕುದುರಿತು.

ಒಂದು ದಿನ ಶ್ಚಕಲಿಕ ಒಂದು ಭವ್ಯಸೌಧದ ಮುಂದಿನಿಂದ ಸಾಗಿದ್ದ, ಮನೆಯ ಮೊಗಸಾಲೆಯಲ್ಲಿ ಸೇವಕರ ದೊಡ್ಡ ಗುಂಪೊಂದು ಹಾಯಾಗಿ ಹರಟೆ ಹೊಡೆಯುತ್ತ ಕೂತಿತ್ತು. ಇದೊಂದು ಭಾರೀ ಕುಳ ಸಿಕ್ಕಿತು. ಇಂದು ಇಲ್ಲಿ ಒಳ್ಳೆಯ ಸಂಪಾದನೆಗೆ ಅಡ್ಡಿ ಇಲ್ಲ-ಎಂದುಕೊಂಡು ಮೊಗಸಾಲೆಯನ್ನು ಪ್ರವೇಶಿಸಿ,

"ಈ ಮನೆ ಯಾರದು?" ಎಂದು ಆಳುಗಳಿಗೆ ಕೇಳಿದನು.

"ಅಯ್ಯೋ ಮಾರಾಯ, ನೀನು ಎಲ್ಲಿಂದ ಬಂದವ? ಇಂಥ ಮನೆ ಬರ್ಮಿಸ್ಸೈದರದಾಗದೆ ಬೇರೆ ಯಾರದಾದೀತು? ಇಷ್ಟೂ ನಿನಗೆ ಗೊತ್ತಿಲ್ಲವೇ?" ಎಂದು ಒಬ್ಬ ಆಳು ತಿರುಗಿ ಕೇಳಿದ, ಆಗ ಶ್ಚಕಲಿಕನಿಗೆ ನೆನಪಾಯಿತು. ಆ ಬರ್ಮಿಸ್ಸೈದರದು ಪರ್ಶಿಯಾದ ಹಿರಿಯ ಸರದಾರ ಮನೆತನ, ಹರೂನ್ ಆಲ್ ರಶೀದ್ ಕಾಲಕ್ಕೆ ಒಳ್ಳೇ ಬಲಾಢ್ಯರು ಈ ಬರ್ಮಿಸ್ಸೈದರು. ಈ ವಂಶದ ಜಾಫರ ಎಂಬ ಒಬ್ಬನು ಈ ದೊರೆಯ ವಜೀರನಾಗಿದ್ದನು. ಒಡನಾಡಿಯೂ ಆಗಿದ್ದನು. ಬರ್ಮಿಸ್ಸೈದರು ಔದಾರ್ಯ ಮತ್ತು ದಾನಶೀಲತೆಗಾಗಿ ಹೆಸರಾಗಿದ್ದರು.

"ನನಗೆ ಏನಾದರೂ ಭಿಕ್ಷೆ ಹಾಕುವಿರಾ?" ಶ್ಚಕಲಿಕ ಒಬ್ಬ ಬಾಗಿಲು ಕಾಯುವವನಿಗೆ ಕೇಳಿದನು. ಅದಕ್ಕೆ ಯಾರೂ ಇಲ್ಲೆನಲಿಲ್ಲ.

"ಒಳಗೆ ಹೋಗು, ಯಜಮಾನರನ್ನು ಕಾಣು" ಎಂದು ಸಾಮಾನ್ಯವಾಗಿಯೇ ಅವರು ಸೂಚಿಸಿದರು. ಆ ನಾಪಿತ ಬಂಧು ಒಳಗೆ ಹೋದನು. ಬರ್ಮಿಸ್ಸೈದನ ಒಳಮನೆಯನ್ನು ಮುಟ್ಟಲಿಕ್ಕೆ ಅವನಿಗೆ ಸ್ವಲ್ಪ ವೇಳೆ ಹಿಡಿಯಿತು. ಆ ಮನೆಯೇ ಅಷ್ಟು ವಿಶಾಲವಾಗಿತ್ತು. ಅಲ್ಲಿ ಬೆಡಗಿನ ಚಿತ್ರಗಳಿಂದ ಕಂಗೊಳಿಸುವ ಒಂದು ತೊಟ್ಟಿಯಲ್ಲಿ

ಒಂದು ಸೋಫಾದಲ್ಲಿ ಒಬ್ಬ ಮುದುಕ ಕುಳಿತಿದ್ದ. ಅವನ ಗಡ್ಡ ಪೂರಾ ಬಿಳಿದಾಗಿತ್ತು. ಆತ ಅತ್ಯಂತ ಅನುಗ್ರಹದಿಂದ ಶ್ಚಕಲಿಕನನ್ನು ಬರಮಾಡಿಕೊಂಡನು. ಆಗ ಅವನನ್ನು ಯಾಚಿಸಲಿಕ್ಕ ಈ ಯಾಚಕನಿಗೆ ಧೈರ್ಯ ಬಂದಿತು.

"ಮಹಾ ಪಭುಗಳೇ, ನಾನೊಬ್ಬ ಭಿಕಾರಿ ತಮ್ಮಂಥ ಪುಣ್ಯವಂತರ ದಯೆಯಿಂದಲೇ ಬದುಕಬೇಕಾದವ" ಶ್ಚಕಲಿಕ ಅಂದನು.

ಬರ್ಮಿಸೈದ ಚಕಿತನಾದಂತೆ ತೋರಿಸಿದನು. "ಎಲಾ ನಾನು ಬಗದಾದದಲ್ಲಿ ಬದುಕಿರುವಾಗ ನಿನ್ನಂಥವನು ಉಪವಾಸ ಬೀಳುವದೆಂದರೇನು?"

"ಪ್ರಭುಗಳೇ"-ಶ್ಚಕಲಿಕ ಅಂದನು, "ತಮ್ಮ ಪಾದದಾಣೆ, ನಾನು ನಿನ್ನೆ ಇಡೀ ದಿವಸ ಏನೂ ಉಂಡಿಲ್ಲ, ತಿಂದಿಲ್ಲ."

"ಏನು ಹೊಟ್ಟೆಗಿಲ್ಲದೆ ಸಾಯುತ್ತೀ?" ಬರ್ಮಿಸೈದ ಉದ್ಗರಿಸಿದ,

"ಛೇ..ಛೇ..ಛೇ.. ಯಾರಲ್ಲಿ? ಗುಲಾಂ, ನೀರು ತಾ, ನಾವು ಕೈ ತೊಳೆದುಕೊಳ್ಳಬೇಕಾಗಿದೆ-ಊಟಕ್ಕೆ ಕೂಡುವ ಮುಂಚೆ ಹೂಂ, ಬೇಗ ಬಿಸಿನೀರು ತಾ."

ಯಾವ ಗುಲಾಮನೂ ಬರಲಿಲ್ಲ, ಆದರೆ ಬರ್ಮಿಸೈದನು ಗುಲಾಮ ಕೊಟ್ಟ ನೀರಿನಲ್ಲಿ ತಾನು ಕೈತೊಳೆದುಕೊಂಡಂತೆ ನಟಿಸಿದನು. ಎರಡೂ ಕೈಗಳನ್ನು ತೊಳೆದು ಉಜ್ಜಿಕೊಳ್ಳಲು ತಪ್ಪಲಿಲ್ಲ. ಆಮೇಲೆ ಶ್ಚಕಲಿಕತನತ್ತ ಹೊರಳಿ-

"ಇದೇನು? ನೀನು ಕೈತೊಳೆದುಕೊಳ್ಳುವದಿಲ್ಲವೇ?" ಎಂದನು.

ಇದೇನೋ ತಮಾಷೆಯಾಗಿದೆ. ಈ ಮುದುಕ ಒಳ್ಳೇ ಕಿಲಾಡಿ ಎಂದುಕೊಂಡು ಶ್ಚಕಲಿಕ ಮುಂದೆ ಬಂದು ಹಾಗೆಯೇ ನಟಿಸಿದನು.

ಹೀಗೆ ಕೈತೊಳೆದಾದ ಮೇಲೆ ಬರ್ಮಿಸೈದ ದನಿಯೇರಿಸಿ ಕರೆದ “ಯಾರಲ್ಲಿ? ನಮ್ಮ ಮುಂದೆ ಕೂಡಲೆ ತಾಟು ಬಡಿಸಿರಿ. ನಾವು ಭಾರಿ ಹಸಿದಿದ್ದೇವೆ.”

ಯಾರು ಯಾವ ತಾಟನ್ನೂ ತಂದಿಡಲಿಲ್ಲ, ಏನೂ ಬಡಿಸಲೂ ಇಲ್ಲ, ಆದಾಗ್ಯೂ ಬರ್ಮಿಸೈದ ತಾಟಿನಿಂದ ಒಂದು ತುತ್ತು ಎತ್ತಿ ಬಾಯಿಗೆ ಹಾಕಿಕೊಂಡವರಂತೆ ನಾಲಿಗೆ ಚಪ್ಪರಿಸುತ್ತ ಅಂದನು-

“ವಾಃ! ಎಂಥ ರುಚಿ! ತಿನ್ನು ದೋಸ್ತ, ತಿನ್ನು, ಏನೂ ಸಂಕೋಚಪಡಬೇಡ. ಇದು ನಿನ್ನದೇ ಮನೆಯೆಂದು ತಿಳಿ, ಎರಡು ದಿನದಿಂದ ಹಸಿದಿರುವೆಯೆಂದೆ ಆದರೆ ಆ ಮಾನದಿಂದ ನಿನ್ನ ಊಟ ತೀರ ಸಣ್ಣದು. ಹೂಂ ಹೊಟ್ಟತುಂಬ ಉಣ್ಣು.”

“ಕ್ಷಮಿಸಿ ಸ್ವಾಮಿ” ಶ್ಚಕಲಕ ಹೇಗೋ ಮನಸ್ಸು ಬಿಗಿ ಹಿಡಿದುಕೊಂಡು ಅತಿ ವಿನಯದಿಂದ ಅಂದನು.

“ನಾನು ಹೊತ್ತು ಕಳೆಯುತ್ತಿಲ್ಲ. ಮನಮೆಚ್ಚಿ ಉಣ್ಣುತ್ತಾ ಇದ್ದೇನೆ. ನನ್ನ ಊಟ ಸ್ವಲ್ಪ ನಿಧಾನ.”

“ಸರಿ ಈ ರೊಟ್ಟಿ ಹೇಗೆ? ನಿನಗೆ ಸೇರಿತೋ? ಈ ಪುಲಾವು? ಮತ್ತೆ ಈ ಬಿರ್ಯಾನಿ?”

ಬರ್ಮಿಸೈದ ಒಂದೊಂದನ್ನು ಎತ್ತಿ ಕಾಣಿಸಿದಂತೆ ಮಾಡಿ ಮಾತನಾಡುತ್ತಿದ್ದ.

“ನನಗಂತೂ ಇವು ಭಾರಿ ಭೇಷ್ ರುಚಿಯಾದವು.”

ಶ್ಚಕಲಿಕನಿಗೆ ಅವನ ಕೈಯಲ್ಲಿ ಯಾವ ಪದಾರ್ಥವೂ ಕಾಣಲಿಲ್ಲ. ಆದರೂ ಅವನೆಂದ...

“ಹೌದು ಸ್ವಾಮಿ, ಇಂಥ ಊಟ, ಇಂಥ ರುಚಿ ನಾನು ಈ ಜನ್ಮದಲ್ಲಿಯೇ ಕಂಡಿಲ್ಲ-ಉಂಡಿಲ್ಲ.”

“ಸರಿ, ಹಾಗಾದರೆ ಬೇಕಾದ್ದು ತಿನ್ನು.”

ಬರ್ಮಿಸೈದ ಆಗ್ರಹದಿಂದ ಹೇಳಿದ.

“ಈ ಬಿರ್ಯಾನಿ ಮಾಡುವ ಅಡಿಗೆಯವಳನ್ನು ನಾನು ಇದಕ್ಕಾಗಿಯೇ ೫೦೦ ಹೊನ್ನು ತೆತ್ತು ಕೊಂಡುಕೊಂಡೆ.”

ಹೀಗೆ ಹಲವಾರು ಪಕ್ವಾನ್ನಗಳ ತಾಟುಗಳನ್ನು ತರಲು ಆತ ಗುಲಾಮರಿಗೆ ಆಜ್ಞೆ ಮಾಡಿದ (ಅವು ಯಾವವೂ ಬಂದಿದ್ದೇ ಇಲ್ಲ). ಅವೆಲ್ಲ ಬಂದು, ಯಥೇಚ್ಛ ಉಂಡು ಅವುಗಳನ್ನು ಬರಿದು ಮಾಡಿದ್ದಾಯಿತು. ಆಮೇಲೆ ಬರ್ಮಿಸೈದ ಢರ್ ಎಂದು ತೇಗಿ ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡು ಗಡ್ಡ ನೇವರಿಸಿಕೊಳ್ಳುತ್ತ ಹೇಳಿದ-

“ಅಬ್ಬಾ, ಊಟವಂತೂ ಸೊಗಸಾಗಿ ಆಯಿತು. ಅಲ್ಲವೇ? ಇನ್ನು ತುಸು ಮದ್ಯ ಕುಡಿಯೋಣ.”

ಅದಕ್ಕೆ ಮೊದಲು ನಾಪಿತನ ತಮ್ಮ ತುಸು ಮಡಿವಂತಿಕೆ ತೋರಿಸಿ ಆಕ್ಷೇಪಿಸಿದನು. ಆದರೆ ಯಜಮಾನರ ಆಗ್ರಹ ಮೀರುವುದುಂಟೆ? ಸ್ವಲ್ಪ ಕುಡಿಯಲು ಒಪ್ಪಿಕೊಂಡ. ಆಗ ಬರ್ಮಿಸೈದ ಇಬ್ಬರ ಗ್ಲಾಸುಗಳನ್ನು ತುಂಬಿದ್ದೇ ತುಂಬಿದ್ದು ಇಬ್ಬರೂ. ಅದನ್ನು ಬರಿದು ಮಾಡಿದ್ದೇ ಮಾಡಿದ್ದು (ಅಲ್ಲಿ ನಿಜವಾಗಿಯೂ ಗ್ಲಾಸೂ ಇದ್ದಿಲ್ಲ ಮದ್ಯವೂ ಇದ್ದಿಲ್ಲ.) ಬರ್ಮಿಸೈದ ತಾನೂ ಕುಡಿದಂತೆ ಮಾಡಿ ಶ್ಚಕಲಿಕನಿಗೆ ಮತ್ತೆ ಮತ್ತೆ ಕುಡಿಯಲು ಒತ್ತಾಯ ಮಾಡುತ್ತಿದ್ದನು.

ಶ್ಚಕಲಿಕನಿಗೆ ಮದ್ಯದ ರೂಢಿಯೇ ಇದ್ದಿಲ್ಲ. ಅಂದಾಗ ಇಷ್ಟೆಲ್ಲ ಮದ್ಯ ಹೊಟ್ಟೆಯಲ್ಲಿ ಹೋದರೆ ತಲೆಗೇರದೇ ಬಿಟ್ಟೀತೆ? ಆತ ಅಮಲೇರಿದಂತೆ ತೇಲ್ಗಣ್ಣು

ತೂರಾಡುತ್ತ ಎದ್ದು ಬರ್ಮಿಸೈದನ, ಕಪಾಳಕ್ಕೆ ಫಳಕ್ ಎಂದು ಒಂದು ಬಿಗಿದನು. ಆ ಪೆಟ್ಟಿಗೆ ಆ ಮುದುಕ ನೆಲಕ್ಕೆ ಕುಪ್ಪಳಿಸಿದನು. ಬಿದ್ದಲ್ಲಿಯೇ ಅವನಿಗೆ ಇನ್ನೊಂದು ಗುದ್ದು ಏರಿಸಲಿಕ್ಕೆ ಈ ಅತಿಥಿ ತೋಳನ್ನು ಎತ್ತಿದ, ಅಷ್ಟರಲ್ಲಿ ಬರ್ಮಿಸೈದ ಕೂಗಿದ.

"ನಿನಗೇನು ಹುಚ್ಚು ಬಡಿಯಿತೇ?"

ಅದಕ್ಕೆ ಒಮ್ಮೆಲೆ ನೆತ್ತಗೇರಿದ ಪಿತ್ತ ಸರ್ರನೆ ಇಳಿದಂತೆ ಕಾಣಿಸಿಕೊಂಡು ಶ್ವಕಲಿಕ ನಾಚಿಕೆಯಿಂದ ಕ್ಷಮೆಯನ್ನು ಬೇಡಿದನು-

"ಮಹಾಸ್ವಾಮಿ, ಕ್ಷಮಿಸಿ. ಈ ತಪ್ಪು ನನ್ನದಲ್ಲ, ತಾವು ನನಗೆ ಕುಡಿಸಿದ ಹಾಳು ಮದ್ಯದ್ದು."

ಈ ಮಾತಿಗೆ ಬರ್ಮಿಸೈದ ರೇಗಲಿಲ್ಲ, ಬಾಯ್ತುಂಬ ಗಹಗಹಿಸಿ ನಕ್ಕನು ಎದ್ದು ಶ್ಚಕಲಿಕನನ್ನು ಆಲಂಗಿಸಿದನು.

"ಭಲೇ ದೋಸ್ತ, ನಾನು ನಿನ್ನಂಥ ಕದೀಮನನ್ನೇ ಕಾಯುತ್ತಿದ್ದೆ ಎಂದಿನಿಂದಲೂ ಹುಡುಕುತ್ತಿದ್ದೆ. ಇನ್ನು ಮೇಲೆ ಈ ಮನೆಯು ನಿಜವಾಗಿಯೂ ನಿನ್ನದು. ಕಾಯಂ ನಿನ್ನದು. ನನ್ನ ಒಲವು ಅರಿತು ಅದಕ್ಕೆ ಸರಿಯಾಗಿ ಹೊಂದಿಕೊಂಡು ನೀನೂ ನಟಿಸುವ ಸರಸತೆಯನ್ನು ಚೆನ್ನಾಗಿ ಕಾಣಿಸಿದೆ, ಹೊಟ್ಟೆ ಹಸಿದರೂ ಏನೂ ಬಡಿಸದಿದ್ದರೂ ಬರಿಗೈಯಿಂದ ಭೋಜನ ಮಾಡಿ ನನ್ನ ಲಹರಿಗೆ ಕೂಡಿಕೊಂಡೆ, ಇನ್ನು ನಿನಗೆ ಭರ್ಜರಿ ಮೇಜವಾನಿ ಮಾಡಿಸುತ್ತೇನೆ."

ಎಂದು ಬರ್ಮಿಸೈದ ಚಪ್ಪಾಳೆ ತಟ್ಟಿದನು. ಕೂಡಲೆ ದಾಸ ದಾಸಿಯರು ಪರಿಪರಿಯ ಪಕ್ವಾನ್ನಗಳಿಂದ ತುಂಬಿದ ತಾಟುಗಳನ್ನು ಅವರಿಬ್ಬರ ಇದಿರು ತಂದಿಟ್ಟರು. ಅವರ ಊಟ ನಡೆಯುವಾಗ ಅವರು ಹಾಡಿದರು. ಕುಣಿದರು ಭೋಜನ ಮುಗಿದ ಮೇಲೆ ಶ್ಚಕಲಕನಿಗೆ ಬೀರುವಿನಿಂದ ಉತ್ತಮೋತ್ತಮ ಪೋಷಾಕು ತೆಗೆದು ತೊಡಿಸಿ ಅವನನ್ನು ತನ್ನ ಮನೆಯ ಮಮತೆಯ ಆಪ್ತಮಿತ್ರನಂತೆ ನಡೆಯಿಸಿಕೊಂಡನು.

ಈ ಕಥೆಯಿಂದ "ಬರ್ಮಿಸೈದ ಮೇಜವಾನಿ" ಎಂಬ ಒಂದು ಪದ ಪ್ರಯೋಗವೇ ರೂಢವಾಯಿತು. ಇದರ ಅರ್ಥ "ಬರಿಗೈಯಿಂದ ಮೊಳಹಾಕುವದು" ಎಂಬಂತೆ-ಬರಿ ಒಣಮಾತಿನ ಹುಸಿ ಉಪಚಾರದ ಆಡಂಬರವೆಂದು.

## ೧೭. ಪೆಂಡೊರಾಳ ಪೆಟ್ಟಿಗೆ

*ಅಮೇರಿಕೆಯ ಜಗತ್ಪ್ರಸಿದ್ಧ ಕಥೆ-ಕಾದಂಬರಿಗಳಲ್ಲಿ ನೆಥೇನಿಯಲ್ ಹ್ಯಾಥೊರ್ನ ಒಬ್ಬ, ಆತ ಬರೆದ ಜನಪ್ರಿಯ ಪೌರಾಣಿಕ ಕಥೆಯಿದು. ಗ್ರೀಕರ ಪುರಾಣದಲ್ಲಿ ಬರುವ ಆದಿ ನರ ನಾರಿಯರ ಕಥೆ 'ಪೆಂಡೊರಾಳ ಪೆಟ್ಟಿಗೆ' ಯ ಕಥೆ.*

*ಗೊತ್ತಿಲ್ಲದ ತೊಡಕು- ತೊಂದರೆಗಳ ಮೊಟ್ಟೆ ಬಿಚ್ಚುವದೆಂದರೆ ಪೆಂಡೊರಾಳ ಪೆಟ್ಟಿಗೆ ತೆರೆಯುವದು ಎಂದು ಒಂದು ವಾಕ್ಪ್ರಯೋಗ, ಈ ಪ್ರಯೋಗ ಪ್ರಚಲಿತವಾದದ್ದು ಈ ಕಥೆಯ ಮೂಲಕ. ಪೆಂಡೊರಾ ಗ್ರೀಕ ಪುರಾಣದಲ್ಲಿ ಬಣ್ಣಿಸಿದ ಮೊತ್ತಮೊದಲಿನ ಹೆಣ್ಣು, ಲೋಕದ ಶೋಕಕ್ಕೆ ಅವಳ ಕುತೂಹಲವೇ ಕಾರಣ-ಹಾಗೆಯೇ ಆಕೆಗೂ.*

ಬಹಳ ಪ್ರಾಚೀನ ಕಾಲದಲ್ಲಿ ಈ ಭೂಮಿಯ ಈಗಿದ್ದಂತೆ ಇದ್ದಿಲ್ಲ, ತುಂಬ ಎಳೆಪ್ರಾಯದಿಂದ ತಳತಳಿಸುತ್ತಿತ್ತು. ಆಗ ಎಳೆಪ್ರಾಯದ ಚೆಲುವ ಹುಡುಗನೊಬ್ಬ ಈ ಭೂಮಿಯಲ್ಲಿ ಇದ್ದನು. ಅವನ ಹಸರು ಇಪಿಮೆಥೂಸ್. ಆತ ತಬ್ಬಲಿ ಕೂಸು, ತಾಯ್ತಂದೆಗಳನ್ನು ಕಳೆದುಕೊಂಡು ಸಂಗಾತಿಗಳೂ ಇಲ್ಲದೆ ಒಂಟಿಯಾಗಿದ್ದ, ಅದಕ್ಕೆ ಮರುಕವಿಟ್ಟು ದೇವರು ಅವನೊಂದಿಗೆ ಆಡಲು ಸಂಗಾತಿಯಾಗಿ ಒಬ್ಬ ಹುಡುಗಿಯನ್ನು ಕಳುಹಿದನು. ಆಕೆಯೂ ಚೆಲುವೆ, ಅವನಂತೆಯೇ ಅನಾಥೆ, ಅವಳ ಹೆಸರು ಪೆಂಡೊರಾ.

ಪೆಂಡೊರಾ ಇಪೆಮೆಥೂಸನ ಗುಡಿಸಲಿಗೆ ಬಂದಾಗ ಅವಳು ಅಲ್ಲಿ ಮೊದಲು ಕಂಡದ್ದು ಒಂದು ಅಪರೂಪದ ಚೆಂದವಾದ ಪೆಟ್ಟಿಗೆ, ಅದರಲ್ಲಿ ಏನಿದೆ ಎಂದು ನೋಡುವ ಕುತೂಹಲ ಆಕೆಗೆ ವಿಪರೀತ. ಅದು ಎಲ್ಲಿಂದ ಬಂದಿರಬಹುದು? ಅದರಲ್ಲಿ ಇರುವದಾದರೂ ಏನು? ಅವಳು ಇಪಮೆಥೂಸನಿಗೆ ಮತ್ತೆ ಮತ್ತೆ ಕೇಳಿದಳು, ಅವನೂ ಮತ್ತೆ ಮತ್ತೆ ಉತ್ತರ ಕೊಡುವನು. “ನನಗೆ ಗೊತ್ತಿಲ್ಲ. ಗೊತ್ತಿಲ್ಲದೆ ಅದರೊಳಗೇನಿದೆಯಿಂದು ಹೇಗೆ ಹೇಳಲಿ?”

ಒಂದು ದಿನ ಎಪಿಮೆಥೂಸ ಮನೆಯೊಳಗೆ ಇದ್ದಿಲ್ಲ. ಆಗ ಆ ಪೆಟ್ಟಿಗೆಯನ್ನು ತೆರೆದು ನೋಡಬೇಕೆಂಬ ಮೋಹ ಪೆಂಡೊರಾಳಿಗೆ ಬಲವಾಯಿತು. ಮೊದಲು ಅವಳು ಅದರ ಮುಚ್ಚಳವನ್ನು ಕಟ್ಟಿದ್ದ ಹೊಂಬಣ್ಣದ ಗಂಟನ್ನು ಎತ್ತಿ ಅದರೊಂದಿಗೆ ಆಡಹತ್ತಿದಳು, ಫಕ್ಕನೆ ಆಡುತ್ತ ಆಡುತ್ತ ಆ ಗಂಟು ಬಿಚ್ಚಿತು. ಪೆಟ್ಟಿಗೆಯ ಹೊರಭಾಗವನ್ನು ನೋಡುತ್ತಿದ್ದಂತೆ ಅದರ ಒಳಗಡೆಯಿಂದ ವಿಚಿತ್ರ ಸದ್ದು ಕೇಳಬಂದಿತು. ಆದರೆ ಅವಳಿಗೆ ಅದನ್ನು ತೆರೆಯುವ ಧೈರ್ಯವಾಗಲಿಲ್ಲ.

ಆದರೂ ಎಂದಿಗಿಂತ ಹೆಚ್ಚು ಲವಲವಿಕೆಯಿಂದ ಆಕೆ ಅಂದಳು- "ಏನೇ ಇರಲಿ, ನಾನು ಪೆಟ್ಟಿಗೆಯೊಳಗೆ ಒಮ್ಮೆ ಇಣಿಕಿ ನೋಡುವವಳೇ, ಇದನ್ನು ನಾನು ಲಗು ತೆರೆದು ಒಳಗೆ ಏನಿದೆಯೋ ನೋಡೇ ಬಿಡುವೆನು, ಒಮ್ಮೆ ಇಣಿಕಿ ನೋಡಿದರೆ ಅದೇನು ಅಪಾಯವಿಲ್ಲ."

ಆ ಹೊತ್ತಿಗೆ ಎಪಿಮೆಥೂಸ ಹೊರಗೆ ಆಡುತ್ತಿದ್ದ. ಆತ ಒಂದು ಹೂವಿನ ಮಾಲೆಯನ್ನು ಹೆಣೆದಿದ್ದ, ಅದನ್ನು ಪೆಂಡೊರಾಳ ತಲೆಗೆ ಮುಡಿಸಲೆಂದು ಗುಡಿಸಲಿನೊಳಗೆ ಬಂದನು. ಆತ ಒಳಗೆ ಕಾಲಿಡುವಾಗ ಪೆಂಡೊರಾಳ ಕೈ ಪೆಟ್ಟಿಗೆಯ ಮುಚ್ಚಳದ ಮೇಲೆ ಇತ್ತು. ಆತ ಅವಳನ್ನು ನೋಡಿದನು. ಆದರೆ ಕೂಗಲಿಲ್ಲ, ಅವನಿಗೂ ಆ ಪೆಟ್ಟಿಗೆಯೊಳಗೆ ಏನಿತ್ತೆಂದು ನೋಡಬೇಕೆಂಬುದೇ ಬಯಕೆ.

ಪೆಂಡೊರಾ ಮುಚ್ಚಳ ತೆರೆದು ಒಳಗಡೆ ನೋಡಿದಳು, ಒಮ್ಮೆಲೆ ಹೊರಗೆ ನುಗ್ಗಿ ಬಂದವು- ಗರಿಯುಳ್ಳ ಕೀಟಗಳು ಗುಂಪುಗುಂಪಾಗಿ "ಓ ನನ್ನ ಕಡಿದವು! ಅಯ್ಯೊ! ನನ್ನ ಕಚ್ಚಿದವು!" ಎಪಿಮೆಥೂಸನ ಕೂಗು ಕೇಳಿಸಿತು. ತೀವ್ರ ನೋವಿನಿಂದ ಆತ ಕೂಗುತ್ತಿದ್ದ "ತುಂಟ ಪೆಂಡೊರಾ! ನೀನೇಕೆ ಪೆಟ್ಟಿಗೆ ತೆರೆದೆ?"

ಏನಾಯಿತೆಂದು ನೋಡಲು ಪೆಂಡೊರಾ ತಲೆ ಎತ್ತಿದಳು ಆಗ ಒಂದು ಕೀಟ ಬಂದು ಅವಳ ಹಣೆಗೇ ಕಡಿಯಿತು. ಅವಳೂ ನೋವಿನಿಂದ ನರಳಿ ಚೀರಿದಳು. ಅವಳ

ಸುತ್ತಲೂ ಅಸಂಖ್ಯ ಕೀಟಗಳು ಗುಯ್ಯಡುತ್ತ ರೊಯ್ಯನೇ ಹಾರಾಡುತ್ತಿದ್ದವು. ಪತಂಗ, ಸೊಳ್ಳೆ, ದೊಡ್ಡ ನೊಣ, ಗುಂಗಾಡು, ಚಿಕ್ಕಾಡು, ಮಿಡಿಚೆ, ಒಂದೇ ಎರಡೇ ಆದರೆ ಒಂದೊಂದೂ ದೊಡ್ಡವು. ವಿಕರಾಳ ರೂಪದವು, ಬಾಲದಲ್ಲಿ ಉದ್ದುದ್ದ ಕೊಂಡಿ ಚೂಪಾಗಿ ಚಾಚಿದ್ದವು.

ಆ ವಿದ್ರೂಪ ಕೀಟಕಗಳೆಂದರೆ ಕಷ್ಟ ಸಂಕಟಗಳ ತೊಡಕು ತೊಂದರೆಗಳ ಪರಿವಾರಗಳು. ಅವೇ ಚಿಂತೆ, ದುಃಖ, ರೋಗ, ವಿಕಾರ, ದುರ್ಭಾವನೆಯೇ ಮುಂತಾದ ಅನಿಷ್ಟಗಳು–ಅರಿಷ್ಟಗಳು, ಅಂದಿನಿಂದ ಮಾನವನನ್ನು ದುರಿತ ದುರಾಶೆಗಳಿಗೆ ಈಡು ಮಾಡಿದವೆಲ್ಲ ಇವೇ ಅನರ್ಥಗಳು, ಪೆಟ್ಟಿಗೆಯನ್ನು ತೆರೆಯದಿದ್ದರೆ ಇವೆಲ್ಲ ತಾಪತ್ರಯಗಳು ಈ ಪ್ರಪಂಚದಲ್ಲಿ ನುಸುಳಿ ಬರುತ್ತಲೇ ಇದ್ದಿಲ್ಲ.

ಹೂವುಗಳು ಬಾಡಿ ಸತ್ತವು, ಹಸುಗೂಸುಗಳು ಬೆಳೆದು ಮುದುಕಾಗಹತ್ತಿದವು, ಆ ಮನೆಯಿಂದ ಹೊರಬಿದ್ದ ಆ ರೆಕ್ಕೆಯ ಕೀಟಗಳು ಪ್ರತಿಯೊಬ್ಬರನ್ನೂ ಪೀಡಿಸತೊಡಗಿದವು. ಸಣ್ಣ ಜನಕ್ಕೆ ಅವುಗಳ ಪೀಡೆ ಇಟ್ಟುಕೊಂಡಿತು. ಅವರು ದಿವಸಗಟ್ಟಲೆ ನಗಲೊಲ್ಲರು.

ಎಪಿಮೆಥೂಸನಿಗೆ ಪೆಂಡೊರಾಳ ಮೇಲೆ ಬ್ರಹ್ಮಾಂಡ ಸಿಟ್ಟು, ಅವಳೊಂದಿಗೆ ಆತ ಮಾತೇ ಬಿಟ್ಟನು. ಪೆಂಡೊರಾ ಆ ಕೆಟ್ಟ ಪೆಟ್ಟಿಗೆಯ ಮೇಲೆ ತಲೆಯಿಟ್ಟು ಕಡುವಾಗಿ ಅಳತೊಡಗಿದಳು. ಆಗ ಒಮ್ಮೆಲೆ ಅದರ ಮುಚ್ಚಳದ ಒಳಗಡೆಗೆ ತಟ್ಟಿದ ಸದ್ದಾಯಿತು.

“ಇದೇನು ಮತ್ತೆ?” ಅವಳು ಎಪಿಮೆಥೂಸನನ್ನು ಕೇಳಿದಳು. ಆದರೆ ಆತ ಉತ್ತರ ಕೊಡಲಿಲ್ಲ. ಪಂಡೊರಾ ಇನ್ನೂ ಹೆಚ್ಚು ಬಿಕ್ಕತೊಡಗಿದಳು.

ಮತ್ತೆ ಮತ್ತೆ ತಟ್ಟಿದ ಸದ್ದು, ಪೆಂಡೊರಾಳಿಗೆ ತಡೆಯಲಾಗಲಿಲ್ಲ,

“ನೀನು ಯಾರು?” ಅಕೆ ಕೇಳಿದಳು.

“ಯಾರು ಈ ಕೆಟ್ಟ ಪೆಟ್ಟಿಗೆಯಲ್ಲಿ?”

“ಮುಚ್ಚಳವನ್ನು ಎತ್ತು ಮತ್ತು ನೋಡು.”

ಮಧುರವಾದ ಕಂಠದಿಂದ ಉತ್ತರ ಬಂದಿತು. ಪೆಂಡೊರಾ ಅಂದಳು-

“ನಾನೊಲ್ಲೆ, ಈಗಾಗಲೇ ಜಗತ್ತಿನಲ್ಲಿ ನಿನ್ನ ಕೆಟ್ಟ ಸೋದರ -ಸೋದರಿಯರು ಸಾಕಷ್ಟು ಕಷ್ಟ ಕೊಡುತ್ತಿದ್ದಾರೆ. ನಿನ್ನನ್ನು ಹೊರಗೆ ಬಡಲಾರೆ.”

ಆಕೆ ಎಪಿಮೆಥೂಸನ ಕಡೆಗೆ ನೋಡಿದಳು, ಆತ ಏನಾದರೂ ಅನ್ನಬಹುದೋ ಎಂದು, ಆದರೆ ಆತ ಆಕೆಯನ್ನು ಗಮನಿಸಲೇ ಇಲ್ಲ.

“ಓ! ನೋಡು. ನಿನಗೆ ಪಶ್ಚಾತ್ತಾಪವಾದೀತು-ನನ್ನನ್ನು ಹೊರಗೆ ಬಿಡದಿದ್ದರೆ- ನಾನು ಬಾಲದ ಕೊಂಡಿಯಲ್ಲಿ ಕಡಿತವಿಡುವಂಥ ಕೆಟ್ಟ ಪ್ರಾಣಿಯಲ್ಲ, ದಮ್ಮಯ್ಯ, ಮುದ್ದು ಪೆಂಡೊರಾ, ನನ್ನ ಬಿಡುಗಡೆ ಮಾಡು.”

“ಪ್ರಿಯ ಎಪಿಮೆಥೂಸ” ಪೆಂಡೊರಾ ಕೂಗಿದಳು.

“ನೀನು ಕೇಳಿದೆಯಾ ಈ ದನಿಯನ್ನು?”

“ಹೂಂ ಕೇಳಿದೆನಲ್ಲ, ಅದಕ್ಕೇನು?”

“ಹಾಗಾದರೆ ಪೆಟ್ಟಿಗೆಯ ಮುಚ್ಚಳವನ್ನು ತೆಗೆಯಲೋ?” ಪೆಂಡೊರಾ ಕೇಳಿದಳು.

“ನಿನ್ನಿಷ್ಟ.” ಎಪಿಮೆಥೂಸ ಅಂದ.

“ನೀನು ಈಗಾಗಲೇ ಇಷ್ಟು ಭಾರಿ ತೊಂದರೆಗಳನ್ನು ತಂದೊಡ್ಡಿರುವೆ. ಇನ್ನು ಹೆಚ್ಚು ಬಂದರೂ ಅಷ್ಟೇ, ವಿಶೇಷವೇನೂ ವ್ಯತ್ಯಾಸವಿಲ್ಲ.”

"ಮುದ್ದು ಪೆಂಡೊರಾ." ಒಳಗಿನಿಂದ ನಗೆಯ ಇನಿದನಿ ಬಂದಿತು.

"ಅವನಿಗೆ ನಿಜವಾಗಿಯೂ ನನ್ನನ್ನು ನೋಡಬೇಕೆಂದು ಅನಿಸುತ್ತದೆ. ಮುಚ್ಚಳ ಬೇಗ ತೆರೆ, ನಾನು ನಿನಗೆ ನಿಜವಾಗಿಯೂ ಸಂತೋಷಪಡಿಸುವೆ. ಸಮಾಧಾನಗೊಳಿಸುವೆ, ಜಗತ್ತಿನಲ್ಲಿ ನೀನು ತಿಳಿದಷ್ಟು ಮಬ್ಬು ತುಂಬಿಲ್ಲ ಎಂಬುದನ್ನು ನಾನು ಕಾಣಿಸಿಕೊಡುತ್ತೇನೆ."

ಪೆಂಡೊರಾ ಮುಚ್ಚಳ ತೆಗೆಯಲಿಕ್ಕೆ ಯತ್ನಿಸಿದಳು, ಎಪಿಮೆಥೂಸನು ಅವಳಿಗೆ ಬಂದು ನೆರವಾದನು. ಇಬ್ಬರೂ ತರಳರು ಆ ಪೆಟ್ಟಿಗೆಯನ್ನು ತೆರೆದರು. ಕೂಡಲೆ ಹೊರಗೆ ಹಾರಿತು-ಒಬ್ಬ ಪುಟ್ಟ ಮಿನುಗುವ ಯಕ್ಷಿಣಿ. ಅವಳು ಕೋಣೆತುಂಬ ಕುಣಿಯತೊಡಗಿದಳು. ಅವಳು ಹೋದಲ್ಲಿ, ಹಾಯ್ದಲ್ಲಿ ಬೆಳಕು ಚೆಲ್ಲಿತು. ಕೋಣೆಯಲ್ಲಿ ಕವಿದ ಮಬ್ಬು ಕರಗಿ ಮಾಯವಾಯಿತು. ಅವಳು ಎಪಿಮೆಥೂಸನ ಗಾಯವನ್ನು ತನ್ನ ಮೃದು ಬೆರಳಿನಿಂದ ಹಗುರವಾಗಿ ಮುಟ್ಟಿದಳು, ಒಮ್ಮೆಲೆ ನೋವು ನಿಂತಿತು. ಪೆಂಡೊರಾಳ ಬಳಿಗೆ ಹೋಗಿ ಅವಳು ಆಕೆಯ ಹಣೆಯನ್ನು ಮುತ್ತಿಟ್ಟಳು. ಆಕೆಯ ನೋವೆಲ್ಲ ವಾಸಿಯಾಯಿತು.

ಆ ಬೆಳಕಿನ ಬೊಂಬೆ ಈ ತರಳರ ಸುತ್ತಲೂ ಬಗ್ಗಿನಲ್ಲಿ ಸೊಗಸಾ ಸುಳಿದಾಡಿತು.

"ನೀನು ಯಾರು? ಓ ಪುಟ್ಟ ಚೆಲುವೆ, ಯಾರು ನೀನು?" ಪೆಂಡೊರಾ ಕಣ್ಣು ಅರಳಿಸಿ ಕೇಳಿದಳು.

"ನನ್ನನ್ನು ಆಶಾ ಎಂದು ಕರೆಯಬೇಕು." ಆ ಸೂರ್ಯನ ಪ್ರಭೆಯ ಮೂರ್ತಿ ಅಂದಳು.

"ಈ ಭೂಮಿಯ ಮೇಲೆ ನೀವು ತೆರೆದು ಛೂ ಬಿಟ್ಟ ಕಷ್ಟಕೋಟಲೆಗಳ ನಷ್ಟ ತುಂಬಿಕೊಳ್ಳಲಿಕ್ಕೆ ನನ್ನನ್ನು ಈ ಪೆಟ್ಟಿಗೆಯೊಳಗೆ ಇಡಲಾಗಿತ್ತು. ಹೆದರಬೇಡಿರಿ. ಅವು ಏನೇ ಇರಲಿ, ಎಷ್ಟೇ ಬರಲಿ ನಾವು ಚೆನ್ನಾಗಿ ಬಾಳೋಣ."

“ಎಂಥ ಚೆಂದ ಪಕ್ಕ!” ಪೆಂಡೊರಾ ಅಂದಳು, ಆಕೆಯ ಗರಿಮುಟ್ಟಿ-

“ನಿನ್ನ ಪಕ್ಕ ಕಾಮನ ಬಿಲ್ಲಿನಂತೆ ಇವೆ.”

“ಸರಿ, ನಾನೂ ಕಾಮನಬಿಲ್ಲಿನಂತೆಯೇ ಏಕೆ ಗೊತ್ತೆ? ನಾನೂ ಕಣ್ಣೀರು ಮತ್ತು ನಗೆಗಳಿಂದ ಕೂಡಿ ಆಗಿರುತ್ತೇನೆ.”

“ನೀನು ನಮ್ಮ ಜತೆ ಯಾವಾಗಲೂ ಉಳಿಯುವಿಯಾ?” ಎಪಿಮೆಥೂಸ ಕೇಳಿದನು.

“ಯಾವನಕ ನಿಮಗೆ ಬೇಕೋ ಆತನಕ. ಅಂದರೆ ನೀವು ಬದುಕಿರುವ ತನಕವೇ ಅನ್ನಿ, ನಾನೂ ನಿಮ್ಮ ಜತೆಗೆ.” ಅವಳು ಸವಿಯಾಗಿ ನಕ್ಕಳು.

“ಕೆಲಸಲ ನಿಮಗೆ ಅನಿಸಬಹುದು, ನಾನು ನಿಮ್ಮನ್ನು ಬಿಟ್ಟು ಹೋಗಿಬಿಟ್ಟೆನೆಂದು. ಆದರೆ ನಾನು ನಿಮ್ಮನ್ನು ಎಂದಿಗೂ ಬಿಡೆ, ನೀವು ನನ್ನನ್ನು ನಿರೀಕ್ಷಿಸದೆ ಇದ್ದಾಗಲೇ ನಿಮ್ಮ ಗುಡಿಸಲಿನಲ್ಲಿ ನನ್ನ ರೆಕ್ಕೆಗಳ ಹೊಳಪು ನೀವು ಕಾಣುವಿರಿ. ಆಗ ನಿಮಗೆ ಗೊತ್ತಾಗುವದು ನಾನು ನಿಮ್ಮೊಂದಿಗೇ ಇರುತ್ತೇನೆಂದು. ಹೌದು ನನ್ನ ಮುದ್ದು ಮಕ್ಕಳೇ ನಿಮಗೆ ಈ ಲೋಕದಾಚೆಗೆ ಕೊಡಬೇಕಾದ ಏನೋ ಒಂದು ಒಳಿತಾದ, ಚೆಲುವಾದ ವಸ್ತು ನನಗೆ ಗೊತ್ತಿದೆ. ಆದರೆ ಬದುಕಿರುವಾಗ ಅಂಥ ಯಾವ ಪ್ರಸಂಗ ಬಂದರೂ ಆಶೆಯನ್ನು ಬಿಡಬೇಡಿ. ನನ್ನ ಆಶ್ವಾಸನೆಯನ್ನು ನಂಬಿರಿ.”

“ನಾವು ಖಂಡಿತ ನಿನ್ನನ್ನು, ನಂಬುತ್ತೇವೆ.” ಪೆಂಡೂರು ಮತ್ತು ಎಪಿಮೆಥೂಸ ಒಂದೇ ಉಸುರಿಗೆ ಹೇಳಿದರು.

ಅವರು ಆಕೆಯನ್ನು ನಂಬಿದರು. ಅವರು ಮಾತ್ರವಲ್ಲ; ಅಂದಿನಿಂದ ಇಂದಿನವರೆಗೂ ಬದುಕಿ ಬಂದ ಪ್ರತಿಯೊಬ್ಬರೂ ಆಕೆಯಲ್ಲಿ ನಂಬಿದ್ದಾರೆ. ನಂಬಿ

ಕೆಟ್ಟವರುಂಟೆ? ಆಕೆಯೇ ಇಲ್ಲದಿದ್ದರೆ ಲೋಕದಲ್ಲಿ ನಾವು ಯಾಕೆ ಯಾತಕ್ಕಾಗಿ ಬದುಕಬೇಕು?

## ೧೮. ಓರ್ಫಿಯಸ್ ಮತು ಯುರಿಡೈಕ್

*ಕೃಷ್ಣನ ಕೊಳಲಿಗೆ ದನಕರುಗಳು ನಲಿದಾಡುತ್ತಿದ್ದವು. ಗೋಪ-ಗೋಪಿಯರು ಮೈಮರೆಯುತ್ತಿದ್ದರು. ಗೋಕುಲ ವೃಂದಾವನಗಳು ಅರಳುತ್ತಿದ್ದವು.*

*ಸಾವಿತ್ರಿಯ ಪಾತಿವ್ರತ್ಯದ ಶಕ್ತಿಗೆ ಯಮಧರ್ಮನೇ ಮನಸೋತನು. ತಲೆಬಾಗಿದನು. ಸತ್ಯವಾನನ ಪ್ರಾಣವನ್ನು ತಿರುಗಿ ಕೊಟ್ಟನು.*

*ಇವೆರಡೂ ಅದ್ಭುತರಮ್ಯವಾದ ಹೃದಯಂಗಮ ಕಲ್ಪನೆಗಳು ಒಟ್ಟಾಗಿ ಎರಕ ಹೊಯ್ದು ಮಾಡಿದ ಅಮರ ಪ್ರತಿಮೆ ಪಾಶ್ಚಾತ್ಯರ ವಾಙ್ಮಯ ಪರಂಪರೆಯಲ್ಲಿ ಒಡಮೂಡಿದೆ. ಅದೇ ಓರ್ಫಿಯಸ್ ಮತ್ತು ಯುರಿಡೈಕ್‌ರ ಕಥೆ, ಕೃಷ್ಣನು ಮೋಹನ ಮುರಲಿಯನ್ನು ನುಡಿಸಿದಂತೆ ಓರ್ಫಿಯಸ್ ತನ್ನ ಸ್ವರಮಂಡಲ (ಹಾರ್ಪ್)ವನ್ನು ಮಿಡಿಯುತ್ತಿದ್ದನು. ಯಮನನ್ನು ಹಿಂಬಾಲಿಸಿಕೊಂಡು ಹೋಗಿ ಸಾವಿತ್ರಿಯ ಪತಿಯ ಪ್ರಾಣವನ್ನು ಪುನಃ ಪಡೆದುಕೊಂಡು ಬಂದಂತೆ ಓರ್ಫಿಯಸ್ ತನ್ನ ಪತ್ನಿಯ ಪ್ರಾಣವನ್ನು ಮೃತ್ಯುಲೋಕದಿಂದ ತಿರುಗಿ ಪಡೆದುಕೊಂಡು ಬಂದನು.*

*ಪ್ರೀತಿಯು ಸಾವನ್ನು ಗೆಲ್ಲಬಲ್ಲದು. ಕಲೆಯು ಸಾವನ್ನು ಗೆಲ್ಲಬಲ್ಲದು, ಇವೆರಡೂ ಶಕ್ತಿಗಳು ಕೂಡಿದಾಗ ಆ ಸಾವು ಸೋತರೆ ಸೋಜಿಗವೇನು?*

ಥೆನಾಲಿ ಎಂಬ ಒಂದು ನಾಡು. ಅದರ ಸೊಗಸಾದ ಕೊಳ್ಳಗಳಲ್ಲಿ ಓರ್ಫಿಯಸ್ ವಾಸಿಸುತ್ತಿದ್ದನು. ಪ್ರತಿ ದಿನವೂ ತನ್ನ ಸ್ವರಮಂಡಲವನ್ನು ಮಿಡಿದು ನುಡಿಸಿ ಮೃದುಮಧುರವಾದ ಸಂಗೀತವನ್ನು ಸೃಷ್ಟಿಸುತ್ತಿದ್ದನು. ಅದಕ್ಕೆ ದನಿಗೂಡಿಸಿ ದಿವ್ಯವಾಗಿ ಹಾಡುತ್ತಿದ್ದನು.

ಓರ್ಫಿಯಸ್ ಹಾಡುತ್ತಿದ್ದರೆ ಸಾಕು. ವಿಶ್ವವೇ ಗಾನಲೀನ, ನಾದಲೋಲ, ಮರಗಳು ತಲೆಬಾಗಿ ಕಿವಿಗೊಡುತ್ತಿದ್ದವು. ಮೋಡಗಳು ಮಂದವಾಗಿ ತೇಲುತ್ತಿದ್ದವು. ಬಾನಿಗೇ ಕಳೆ ಏರುತ್ತಿತ್ತು. ನದಿಯು ಓರ್ಫಿಯಸ್‌ನ ಪಾದತಡಿಗೆ ಸದ್ದಡಗಿಸಿ ತೆರೆಗಳನ್ನು ತಗ್ಗಿಸಿ ಮೆಲ್ಲಗೆ ಹರಿಯುತ್ತಿತ್ತು.

ಓರ್ಫಿಯಸ್‌ನಿಗೆ ಅಚ್ಚುಮೆಚ್ಚಿನ ಹೆಂಡತಿ ಯುರಿಡೈಕ್-ಮನ್ಮಥನಿಗೆ ರತಿ ಇದ್ದಂತೆ. ಬೇಸಿಗೆ ತುಂಬ ಚಳಿಗಾಲವೆಲ್ಲ ಬಿಸಿಲಿರಲಿ, ಹಿಮವಿರಲಿ, ಓರ್ಫಿಯಸ್‌ನಿಗೆ ಬೇರೆ ಕೆಲಸವೇ ಇಲ್ಲ, ಯುರಿಡೈಕಳಿಗೆ ತನ್ನ ದಿವ್ಯ ಸಂಗೀತವನ್ನು ಕೇಳಿಸುವದೊಂದೇ! ಆತ ಸ್ವರಮಂಡಳಕ್ಕೆ ದನಿಗೂಡಿಸಿ ಹಾಡುತ್ತಿದ್ದಂತೆ ಆಕೆ ಅವನ ಹತ್ತಿರ ಹುಲ್ಲಿನ ಹಸಿರು ಹಸೆಯಲ್ಲಿ ಕುಳಿತು ತನ್ಮಯಳಾಗಿ ಕೇಳುತ್ತಿದ್ದಳು. ರಾಧೆ ಕೃಷ್ಣನಲ್ಲಿ ತನ್ಮಯಳಾಗುವಂತೆ ಯುರಿಡೈಕ ಓರ್ಫಿಯಸ್‌ನಲ್ಲಿ ಮತ್ತು ಇಬ್ಬರೂ ಸಂಗೀತದ ಸ್ವರಸ್ವರ್ಗದಲ್ಲಿ ತಲ್ಲೀನರಾಗಿಬಿಡುತ್ತಿದ್ದರು.

ಒಂದು ದಿನ ಯುರಿಡೈಕ್ ಕೆಲವು ಮಕ್ಕಳೊಂದಿಗೆ ಹೊಳೆಯ ತೀರದಲ್ಲಿ ಆಡುತ್ತಿದ್ದಳು. ಆಗ ಅವಳು ಅಲ್ಲಿ ಎದ್ದ ಬೆಳೆದುನಿಂತ ಹುಲ್ಲಿನಲ್ಲಿ ಅರಿಯದೆ ಒಂದು ಹಾವನ್ನು ಮೆಟ್ಟಿದಳು. ಕೂಡಲೇ ಆ ಹಾವು ಕೆರಳಿ ಅವಳನ್ನು ಕಚ್ಚಿತು. ಕ್ರಮೇಣ ಅವಳ ಮೈಯಲ್ಲಿ ನಂಜೇರಿ ಅವಳು ಸಾಯಲು ಬಿದ್ದಳು. ಆಗ ಆ ಮಕ್ಕಳೊಂದಿಗೆ ತನ್ನ ನೆಚ್ಚಿನ ಗಂಡನಿಗೆ ನಿರೂಪ ಕಳುಹಿದಳು, “ನಿನ್ನನ್ನು ಅಗಲಿ ಹೋಗಬೇಕಾಗಿ ಬಂದಿದೆ. ಬಹಳ ದುಃಖವಾಗುತ್ತಿದೆ. ಜನ್ಮಜನ್ಮಾಂತರಕ್ಕೂ ನಿನ್ನನ್ನು ಸದಾಕಾಲವೂ ಪ್ರೀತಿಸುತ್ತಲೇ ಇರುತ್ತೇನೆ” ಆಮೇಲೆ ಆ ಮೆತ್ತನೆಯ ಹುಲ್ಲಿನಲ್ಲಿ ತಲೆಯಿಟ್ಟು ಮೈಮರೆತು ಯುಡಿಡೈಕ್ ಪ್ರಾಣ ಬಿಟ್ಟಳು.

ಮಕ್ಕಳು ಓಡಿಬಂದು ಈ ದುರಂತದ ವಾರ್ತೆ ಅರುಹಿದಾಗ ಓರ್ಫಿಯಸ್ ಸಿಡಿಲು ಬಡಿದವರಂತೆ ಮರವಟ್ಟನು. ಅಂದಿನಿಂದ ಆತನ ಗಾಯನ ವಾದನ ಸಂಗೀತ ಎಲ್ಲ ಮಾಯವಾಯಿತು. ಲೋಕಕ್ಕೆ ಪರಮಾಶ್ಚರ್ಯವಾಯಿತು. ದಿನದ ಹಿಂದೆ ದಿನ

ಉರುಳಿದವು. ಓರ್ಫಿಯಸ್ ನಿಶ್ಚಲನಾಗಿ ಕೂತಲ್ಲಿಯೇ ಕೂತಿರುತ್ತಿದ್ದನು. — ಯುರಿಡೈಕ್ ಅವನ ಸಂಗಡ ಕೂಡುತ್ತಿದ್ದ ಸ್ಥಳದಲ್ಲಿ ಹಗಲು ಇರುಳು ಅವಳನ್ನು ಹಂಬಲಿಸುತ್ತ ಆತ ಕುಳಿತಿರುತ್ತಿದ್ದನು. ಅವನ ಕೆನ್ನೆಗಳು ಕಣ್ಣೀರ ಧಾರೆಯಿಂದ ತೊಯ್ದಿರುತ್ತಿದ್ದವು.

ಕೊನೆಗೆ ಅವನ ತಾಳ್ಮೆ ಮೀರಿತು. ಹೆಂಡತಿಯ ವಿಯೋಗ ಓರ್ಫಿಯಸ್‌ನಿಗೆ ಅಸಹ್ಯವಾಯಿತು. “ಅವಳಿಲ್ಲದ ನಾನು ಬಾಳಲಾರೆ. ಅವಳ ಬೆನ್ನಿಗೆ ನಾನೂ ಹೋಗಬೇಕು. ಸತ್ತಮೇಲೆ ಮಂದಿ ಸೇರುವ ಲೋಕದ ದೊರೆ ಅವಳನ್ನು ತಿರುಗಿ ನನಗೆ ಒಪ್ಪಿಸಬಹುದು.”

ಕೂಡಲೆ ಓರ್ಫಿಯಸ್ ಹೊರಟನು- ಕೈಯ ಸ್ವರಮಂಡಳ ಕಣ್ಣಲ್ಲಿ ನೀರು, ಎದೆಯಲ್ಲಿ ಅಗಲಿಹೋದ ಮುದ್ದು ಮಡದಿಯ ಮೂರ್ತಿ ದೂರ ದೂರ ಬಲುದೂರ ಆತ ನಡೆದನು. ಹಗಲು ಹಿಂದೆ ಬಿತ್ತು. ಬೆಳಕು ಕಾಣದಾಯಿತು. ಒಮ್ಮೆ ಕಗ್ಗತ್ತಲೆಯ ಲೋಕ, ಮೋಡ ಮಂಜು ಮಬ್ಬು ಕವಿದ ದಾರಿ. ಅದರಾಚೆಗೆ? ಕಣ್ಣು ಕುಕ್ಕುವ ಕತ್ತಲು.

ಓರ್ಫಿಯಸ್ ಧೃತಿಗೆಡದೆ ನಡೆದನು. ಆದರೆ ಕೊನೆಗೂ ಆತ ತಡೆದನು. ಎದುರಿಗೆ ಒಂದು ಭವ್ಯ ಮಹಾದ್ವಾರ ಕಬ್ಬಿಣದ ಸರಳುಗಳಿಂದ ಅಡ್ಡಗಟ್ಟಿತ್ತು. ದಸೆಗೆಟ್ಟ ಪರಿಸರ. ಆಶೆಯ, ಪ್ರೀತಿಯ, ಜೀವಕಳೆಯ ಯಾವ ಕಿರಣವೂ ಅಲ್ಲಿಗೆ ಮುಟ್ಟಲಿಲ್ಲ.

ಆ ಮಹಾದ್ವಾರದ ಮುಂದೆ ಒಂದು ರಾಕ್ಷಸ ಆಕಾರದ ಮತ್ತು ವಿಕಾರವಾದ ನಾಯಿ ಇತ್ತು. ಅದಕ್ಕೆ ಮೂರು ತಲೆ, ಆರು ಕಣ್ಣು, ಮೂರು ನಾಲಿಗೆ! ಆ ಕಗ್ಗತ್ತಲೆಯಲ್ಲಿ ಅದರ ಕಣ್ಣುಗಳು ಬೆಂಕಿಯ ಚೆಂಡುಗಳಂತೆ ಧಗಧಗಿಸಿ ಉರಿಯುತ್ತಿದ್ದವು. ಎವೆಯಿಕ್ಕದೆ ಆ ನಾಯಿ ಆ ಯಮಲೋಕದ ದ್ವಾರವನ್ನು ಕಾಯುತ್ತಿತ್ತು. ಓರ್ಫಿಯಸ್ ಸಮೀಪಿಸುತ್ತಿರುವುದನ್ನು ಕಂಡೊಡನೆ ಆ ನಾಯಿ-ಅದರ ಹೆಸರು ಕರ್ಬೆರೊಸ್-ಮೂರು ಬಾಯಿಗಳನ್ನು ತೆಗೆದು ಕೋರೆಯ ಹಲ್ಲುಗಳನ್ನು ನಾಲಿಗೆಗಳಿಂದ ಚಪ್ಪರಿಸಿ ಕೇಳುವವರ ಕರುಳು ಕತ್ತರಿಸಿ ಬೀಳುವಂತೆ ಕೂಗಿತು. ಆದರೆ ಓರ್ಫಿಯಸ್ ತಡೆಯಲಿಲ್ಲ. ಮುಂದೆ

ಬರುತ್ತಲೇ ಇದ್ದ ಆ ವಿರಹದಲ್ಲಿ ಬೆಂದು ಬಳಲುವ ಆ ಪ್ರೇಮಿಕನ ಪಾಲಿಗೆ ಆ ನಾಯಿ ಆ ನರಕ ಯಾವುದೂ ಇದ್ದಿಲ್ಲ. ಅವನ ಒಳ ಹೊರಗೆಲ್ಲ ಯುರಿಡೈಕಳ ಒಂದೇ ಹಂಬಲ-ಅದೇ ಅವನ ಬಲ. ಆತ ಹತ್ತಿರ ಬಂದಂತೆ ಅವನ ಮೇಲೆ ಹಾರಲು ಕರ್ಬೆರೊಸ್ ಎದ್ದು ನಿಂತಿತು ಹಾರಿ ಅವನನ್ನು ಹರಿದು ತಿನ್ನಲಿಕ್ಕೆ.

ಆಗ ಓರ್ಫಿಯಸ್ ತನ್ನ ಸ್ವರಮಂಡಳವನ್ನು ಎತ್ತಿಕೊಂಡು ಅದರ ಚಿನ್ನದ ತಂತಿಗಳ ಮೇಲೆ ಬೆರಳು ಆಡಿಸಿದನು. ಸ್ವರಮಾಲೆ ತುಂತುರು ಚಿಮ್ಮಿತು. ಆ ಪ್ರಚಂಡ ರಾಕ್ಷಸ ನಾಯಿ ಹಿಂಜರಿಯಿತು. ದನಿ ತಗ್ಗಿಸಿತು. ತಲೆ ತಗ್ಗಿಸಿತು. ಬಾಲ ಮುದುಡಿ ಬಿದ್ದುಕೊಂಡಿತು. ಅವನ ಸಂಗೀತದ ಸಂಮೋಹನಕ್ಕೆ ನಿದ್ದೆಹೋಯಿತು. ಅದರ ಉಸಿರೊಂದೇ ಆ ಸಂಗೀತಕ್ಕೆ ತಾಲ ಹಿಡಿದಂತೆ ನಡೆದಿತ್ತು.

ಓರ್ಫಿಯಸ್ ನಾಯಿಯನ್ನು ದಾಟಿ ಮಹಾದ್ವಾರಕ್ಕೆ ಬಂದನು. ಅದೂ ಈಗಾಗಲೇ ತೆರೆದು ನಿಂತಿತ್ತು. ಆತ ಒಳಗೆ ಹೋದನು. ಒಮ್ಮೆ ಬಹುದೂರ ಸಾಗಿದನು. ಮೃತ್ಯುಲೋಕದ ಅರಮನೆಯ ಬಾಗಿಲಿಗೆ ಬಂದನು. ಅಲ್ಲಿಯೂ ಬಿಚ್ಚುಗಣ್ಣಿನ ಬಿಚ್ಚುಗತ್ತಿಯ ಕಾವಲು ನಿಂತಿತ್ತು. ಆದರೆ ಓರ್ಫಿಯಸ್‌ನ ಸ್ವರಮಂಡಳದ ಅದ್ಭುತ ಮೋಹಿನಿಗೆ ಅವರೂ ಮರುಳಾದರು. ಓರ್ಫಿಯಸ್‌ನಿಗೆ ದಾರಿ ಬಿಟ್ಟುಕೊಟ್ಟರು.

ಆತ ರಾಜಭವನದೊಳಗೆ ಕಾಲಿಟ್ಟನು. ಅಲ್ಲಿ ಗದ್ದುಗೆಯಲ್ಲಿ ಮೃತ್ಯುದೇವತೆ-ನಮ್ಮ ಯಮಧರ್ಮನಂತೆ ತನ್ನ ರಾಣಿಯೊಂದಿಗೆ ವಿರಾಜಮಾನನಾಗಿದ್ದನು. ಆತ ಭಯಂಕರ ಧ್ವನಿಯಲ್ಲಿ ಗದ್ದರಿಸಿದನು.

“ನೀನು ಯಾರು? ಇಲ್ಲಿ ಹೇಗೆ ಬಂದೆ? ಇಲ್ಲಿಗೆ ಸತ್ತ ಮೇಲೆಯೇ ಪ್ರವೇಶವೆಂಬುದು ನಿನಗೆ ಗೊತ್ತಿಲ್ಲವೇ, ಮೂರ್ಖ.”

ಓರ್ಫಿಯಸ್ ಮಾತಾಡಲಿಲ್ಲ, ಸ್ವರಮಂಡಳವನ್ನು ಎದೆಗೊತ್ತಿಕೊಂಡು ತಂತಿಗಳನ್ನು ಮೀಟತೊಡಗಿದನು-ಎಂದಿಗಿಂತಲೂ ಸವಿ, ಎಂದಿಗಿಂತಲೂ ಮೃದು,

ಎಂದಿಗಿಂತಲೂ ಇಂಪಾಗಿ ಆತ ಹಾಡುತ್ತಿದ್ದಂತೆ ಮೃತ್ಯುದೇವನ ಮೋರೆ ಹಿಗ್ಗಿತು. ಸಿಟ್ಟು ಕರಗಿತು. ಸಿಟ್ಟಿಗಿಂತ ಶಾಂತಿ ಎಷ್ಟು ಸುಖ ಅನಿಸಿತು – ಮೃತ್ಯುದೇವತೆಗೆ.

"ನಿನಗೇನು ಬೇಕು, ಹೇಳು. ನೀನು ನನ್ನನ್ನು ಸುಖಿಯಾಗಿ ಮಾಡಿರುವಿ. ನಿನಗೇನೋ ಬೇಕಾಗಿದೆ, ಇಲ್ಲವಾದರೆ ಇಲ್ಲಿಗೆ ಹೀಗೆ ಬದುಕಿರುವಾಗಲೇ ನೀನು ಬರುತ್ತಿರಲಿಲ್ಲ, ಏನು ಬೇಕು ಬೇಡಿಕೊ."

"ದೇವಾ, ನನ್ನ ಯುರಿಡೈಕ್ ನನಗೆ ಬೇಕು. ಇನ್ನೇನೂ ಬೇಡ, ಅವಳನ್ನು ನನಗೆ ತಿರುಗಿ ಕೊಡು, ಅವಳೊಂದಿಗೆ ಭೂಮಿಯಲ್ಲಿ ನಾನು ಸುಖವಾಗಿ ಬಾಳುವೆನು" ಎಂದನು. ಓರ್ಫಿಯಸ್ ಕಕುಲಾತಿಯಿಂದ.

"ತಥಾಸ್ತು. ಆದರೆ ಒಂದು ಮಾತು. ಈಗ ನಿನ್ನ ಮಡದಿ ನಿನ್ನನ್ನು ಹಿಂಬಾಲಿಸುವಳು. ಅವಳನ್ನು ಭೂಲೋಕಕ್ಕೆ ಒಯ್ಯಿ. ಆದರೆ ನಡುವೆ ಹಾದಿಯಲ್ಲಿ ಎಂದೂ ಅವಳನ್ನು ಹೊರಳಿ ಹಿಂದೆ ನೋಡಬಾರದು. ನೀನು ಎಷ್ಟೇ ಸೊಗಸಾಗಿ ಹಾಡಿದರೂ ಪ್ರಯೋಜನವಿಲ್ಲ, ನಿನ್ನ ಪಾಡು ನಿನಗೆ."

ಮುದ್ದು ಮೋಹದ ಯುರಿಡೈಕಳನ್ನು ಒಮ್ಮ ಆದರೂ ಕಣ್ತುಂಬ ನೋಡಬೇಕೆಂದು ಓರ್ಫಿಯಸ್‌ನಿಗೆ ಎಲ್ಲಿಲ್ಲದ ಲವಲವಿಕೆ. ಆದರೆ ಉಪಾಯವಿಲ್ಲ, ಮೃತ್ಯುದೇವತೆಯ ಮಾತಿಗೆ ಒಪ್ಪಲೇಬೇಕಾಯಿತು.

ಓರ್ಫಿಯಸ್ ಮರಳಿ ಮರ್ತ್ಯಲೋಕಕ್ಕೆ ಹೋದನು-ಯುರಿಡೈಕಳೊಂದಿಗೆ ಅದೇ ಕತ್ತಲು ತುಂಬಿದ ಹಾದಿಯಲ್ಲಿ ತಿರುಗಿ ನಡೆದನು. ಕೊನೆಗೆ ಭೂಲೋಕದ ಅಂಚಿಗೆ ಬಂದನು. ಅಲ್ಲಿ ಕಡಲಿಂದ ಮೇಲೇರಿ ಬರುವ ಸೂರ್ಯನ ಹೊಂಗಿರಣದ ಗೆರೆ ದಿಗಂತವನ್ನು ಬೆಳಗಹತ್ತಿತ್ತು. ನಿಧಾನವಾಗಿ ಹಗಲು ಹಬ್ಬಿತ್ತು. ಆ ಬಟ್ಟ ಬೆಳಗಿನಲ್ಲಿ ಒಮ್ಮೆ ಹಿಂದಿರುಗಿ ಹೆಂಡತಿಯ ಮೊಗವನ್ನು ನೋಡಬೇಕೆಂಬ ಬಯಕೆ ಓರ್ಫಿಯಸ್‌ನಿಗೆ ಅನಿವಾರ್ಯವಾಯಿತು. ತಿರುಗಿಯೇ ಬಿಟ್ಟನು.

ಆದರೆ ಪಾಪ, ಯುರಿಡೈಕ್ ಇನ್ನೂ ಭೂಮಿಯ ಅಂಚಿಗೆ ತಲುಪಿದ್ದಿಲ್ಲ. ಆಕೆ ಇವನ ಆ ನಟ್ಟ ನೋಟಕ್ಕೆ ಮಂಜು ಕರಗುವಂತೆ ಮಾಯವಾಗಿಬಿಟ್ಟಳು. ಮುಂದೆ ಅಸ್ಪಷ್ಟ ಬಿಳಿಯ ಆಕೃತಿ ಮತ್ತು ಸೌಮ್ಯವಾದ ಮೃದುವಾದ ದೂರದ ದನಿ ಹಾಗೆಯೇ ದೂರಿಂದಲೇ ತೇಲಿ ಹೋದಂತೆ ಅನಿಸಿತು. 'ಓ ಓರ್ಫಿಯಸ್! ಹಿಂದೇಕೆ ಹೊರಳಿದಿ? ತಿರುಗೇಕೆ ನೋಡಿದಿ? ನನ್ನ ಪ್ರಾಣಕ್ಕೂ ಮಿಗಿಲಾದ ಪ್ರಿಯತಮ, ಇನ್ನು ನಾನು ನಿಮ್ಮನ್ನು ಕಾಣುವದೆಂತು? ನಿಮ್ಮನ್ನು ಒಮ್ಮೆಯಾದರೂ ಚುಂಬಿಸದೆ ಹೀಗೆ ಅಗಲಬೇಕಾಯಿತಲ್ಲ ಹಾ!" ಎಂದು ಆ ದನಿಯು ನಿಡಿದಾಗಿ ಸುಯ್ದು ಅಂದಿತು.

ಓರ್ಫಿಯಸ್ ಅಲ್ಲಿಯೇ ತನ್ನ ಪ್ರಿಯತಮೆ ಅಗಲಿಹೋದ ಸ್ಥಳದಲ್ಲಿಯೇ ಕುಸಿದು ಕೂತನು. ಅಲ್ಲಿಯೇ ಆತ ಕುಳಿತು ಉಳಿದನು. ದಿನಗಳ ಹಿಂದೆ ದಿನಗಳುರುಳಿದವು. ಕುಳಿತಲ್ಲಿಯೇ ಓರ್ಫಿಯಸ್ ಕೊರಗಿ ಕೊರಗಿ ಕೃಶನಾದನು. ಕಳೆಗುಂದಿದನು. ಅವನು ಸೊರಗಿ ದುರ್ಬಲನಾದನು. ಆದರೆ ಅವನಿಗೆ ತನ್ನ ಅವಸ್ಥೆಗಾಗಿ ದುಃಖವೆನಿಸಲಿಲ್ಲ. ಆತ ಬದುಕನ್ನು ಬಿಸಿಲು ಬೆಳಕು, ಬಣ್ಣ ಬನಸಿರಿ, ಬಾನು ಬಯಲುಗಳನ್ನು ಮೆಚ್ಚಿದ ರಸಿಕ, ಆದರೆ ಇದೆಲ್ಲವನ್ನೂ ಮೀರಿ ಆತ ಮೆಚ್ಚಿದ್ದು ಯುರಿಡೈಕಳನ್ನು, ಅವಳ ಚೆಲುವಿನಿಂದಲೇ ಇದೆಲ್ಲ ಅವನಿಗೆ ಪ್ರಿಯವಾಗಿತ್ತು.

ಆದ್ದರಿಂದ ಆತ ಅಲ್ಲಿಯೇ ದೇಹವಿಟ್ಟನು. ಪ್ರಾಣ ಬಿಟ್ಟನು. ಆಗ ಓರ್ಫಿಯಸ್ ಯರಿಡೈಕಳನ್ನು ಮತ್ತೆ ಕೂಡಿದನು -ಆ ದಿಗಂತದಾಚೆಯ ಬೆಳಕಿಲ್ಲದ ಲೋಕದಲ್ಲಿ ಮತ್ತೆ ಅವಳಿಂದ ಆತ ಅಗಲಲಿಲ್ಲ.

## ೧೯. ಟ್ರೋಜನ್ ಕುದುರೆ

*ಟ್ರೋಜನ್ ಕುದುರೆ ಎಂಬ ಒಂದು ಪದವು ಈಗ ನಮ್ಮ ರಾಜಕೀಯ ರಂಗದಲ್ಲಿ ತುಂಬಿ ಬೆಳಕಿಗೆ ಬಂದಿದೆ. ಶತ್ರುಪಕ್ಷವು ವೇಷ ಮರೆಯಿಸಿ ತಮ್ಮದೊಂದು ಗುಂಪನ್ನು ಪರಪಕ್ಷದಲ್ಲಿ ಪಿತೂರಿ ನಡೆಯಿಸಲಿಕ್ಕೆ ಕಳುಹಿಸುವ ತಂತ್ರಕ್ಕೆ ಈ ಹೆಸರು ಬಂದಿದೆ.*

*ಟ್ರಾಯ ನಗರವನ್ನು ಭೇದಿಸಿ ಗೆಲ್ಲಲು ಹೂಡಿದ ತಂತ್ರವಿದು- ಟ್ರೋಜನ ಕುದುರೆ. ಇದನ್ನು ನಮ್ಮದೇ ಇತಿಹಾಸದ ಮಾತಿನಲ್ಲಿ ಅನುವಾದಿಸುವದಾದರೆ "ಪದ್ಮಿನಿಯ ಪಲ್ಲಕ್ಕಿ" ಎನ್ನಬಹುದು. ತನ್ನ ಪತಿ ಭೀಮಸಿಂಹನ ಬಿಡುಗಡೆಗಾಗಿ ಚಿತ್ತೂರಿನ ಮಹಾರಾಣಿ ಪದ್ಮಿನಿಯು ಅಲ್ಲಾ ಉದ್ದೀನನಿಗೆ ವಶವಾಗುವೆನೆಂದು ನಟಿಸಿ ತನ್ನ ಪಲ್ಲಕ್ಕಿಯಲ್ಲಿ ವೀರ ಬಾದಲನನ್ನು ಕೂಡಿಸಿ ಅವನ ಶಿಬಿರಕ್ಕೆ ಕಳುಹಿಸಿದಳು. ಅವಳ ಪರಿವಾರದ ದಾಸಿಯರೆಂದು ನೂರಾರು ಪಲ್ಲಕ್ಕಿಗಳಲ್ಲಿ ರಜಪೂತ ಯೋಧ ಯುವಕರೇ ಅವಿತು ಕೂತು ಶತ್ರು ಶಿಬಿರವನ್ನು ಮೋಸದಿಂದ ಹೊಕ್ಕರು.*

*ಟ್ರಾಯ ನಗರವನ್ನು ಗೆಲ್ಲಲಿಕ್ಕೂ ಗ್ರೀಕ ವೀರರು ಇದೇ ರೀತಿ ಮೋಸ ಹೂಡಿದರು. ಆ ಕಥೆಯು ಹೀಗಿದೆ-*

ಈ ಕಥಾಪ್ರಸಂಗವು ರೋಮನ್ನರ ಮಹಾಕಾವ್ಯ ಇನಿಡ್‌ದಲ್ಲಿ ಬರುತ್ತಿದೆ. ಇದರ ಮಹಾಕವಿ ವರ್ಜಿಲ್. ಯೇಸುಕ್ರಿಸ್ತ ಹುಟ್ಟುವದಕ್ಕೆ ನೂರು ವರುಷ ಹಿಂದೆಯೇ ವರ್ಜಿಲ್ ಮಹಾಕವಿ ಆಗಿಹೋದನು. ಆತ ೫೧ ವರ್ಷ ಕಾಲ ಬದುಕಿದನು. ವರ್ಜಿಲ್ ಗ್ರೀಕರ ಹೋಮರ್ ಮಹಾಕವಿಯಂತೆ ಅಲ್ಲ. ಹೋಮರ್ ದುರ್ದೆಶೆಯಲ್ಲಿ ಬಾಳಿ ದಿಕ್ಕಿಲ್ಲದೆ ಸತ್ತನು. ಅದರೆ ಆತ ಸತ್ತ ಮೇಲೆ ಹೋಮರ್ ತಮ್ಮವನೆಂದು ಅವನ ಶವವನ್ನು ವಶಪಡಿಸಿಕೊಳ್ಳಲು ಗ್ರೀಸದ ಒಂಭತ್ತು ರಾಜ್ಯಗಳು ಬಡಿದಾಡಿದವು.

ಆದರೆ ವರ್ಜಿಲನ ಬಗೆಗೆ ಹಾಗೇನೂ ಆಗಲಿಲ್ಲ. ಆತ ತಾನು ಬಾಳಿದ ಸ್ಥಳ, ಕಾಲ ಮತ್ತು ರೀತಿಗಳ ಬಗ್ಗೆ ತಾನೇ ಬರೆದಿಟ್ಟಿದ್ದಾನೆ. ಇರಲಿ.

ಗ್ರೀಕ ಮಹಾಕಾವ್ಯ 'ಈಲಿಯಡ್'ದ ಮುಂದಿನ ಕಥೆ 'ಈನಿಡ್' ಟ್ರಾಯ ನಗರ ರಾಜ್ಯದ ತರುಣ ರಾಜಪುತ್ರ ಆನಿಯಸ್ ಟ್ರಾಯ ನಗರದ ಪತನದ ನಂತರ ಹೇಗೆ ಬಾಳಿದನು ಎಂಬುದರ ಕಥನವೇ ಈನಿಡ್ ಕಾವ್ಯ.

ಟ್ರಾಯ ನಗರದ ರಾಜಪುತ್ರ ಪಾರಿ ಗ್ರೀಸದ ಒಂದು ಪ್ರಾಂತವಾದ ಸ್ಪಾರ್ಟಾಕ್ಕೆ ಹೋದನು. ಆಗ ಮೆನೆಲೊಸ್ ಎಂಬ ದೊರೆ ಸ್ಪಾರ್ಟಾ ಆಳುತ್ತಿದ್ದನು. ಅವನಿಗೆ ಹೆಲೆನ್ ಎಂಬ ಪರಮ ಸುಂದರಿಯಾದ ಹೆಂಡತಿ ಇದ್ದಳು. ಹೆಲನ್‌ಳ ಚೆಲುವಿನ ಕೀರ್ತಿ ದಿಗ್ದೇಶಗಳಿಗೆ ಹಬ್ಬಿತ್ತು. ದೊರೆಯ ಗೆಳೆಯನಾಗಿ ಸ್ಪಾರ್ಟಾಕ್ಕೆ ಬಂದ ಪಾರಿ ದೊರೆಯ ಹೆಂಡತಿಯನ್ನು ಅಪಹರಿಸಿಕೊಂಡು ಹೋಗಬೇಕೇ? ಅದೂ ಅವಳ ಎಲ್ಲ ಸಂಪತ್ತಿನೊಂದಿಗೆ!

ರಾವಣನು ಸೀತೆಯನ್ನು ಕದ್ದೊಯ್ದಂತೆ! ಅಲ್ಲ. ಸೀತೆಯನ್ನು ರಾವಣನು ಬಲಾತ್ಕಾರದಿಂದ ಸೆಳೆದೊಯ್ದನು. ಆದರೆ ಇಲ್ಲಿ ಹೆಲೆನ್ ಪಾರಿಯೊಂದಿಗೆ ತಾನೇ ಮರುಳಾಗಿ ಹೋಗಿದ್ದಳು.

ಏನೇ ಇದ್ದರೂ ರಾಣಿಯ ಅಪಹರಣವನ್ನು ಪ್ರಜೆ ಕ್ಷಮಿಸುವದೇ? ಗ್ರೀಕರು ಟ್ರಾಯ ನಗರದ ಮೇಲೆ ದಾಳಿ ಮಾಡಿದರು. ಹತ್ತು ವರ್ಷ ಮುತ್ತಿಗೆ ಹಾಕಿ ಕೂತರು. ಎಷ್ಟು ಹೋರಾಡಿದರೂ ಆ ನಗರ ಕೋಟೆಯನ್ನು ವಶಪಡಿಸಿಕೊಳ್ಳಲಿಕ್ಕೆ ಗ್ರೀಕ ಸೇನೆಗೆ ಸಾಧ್ಯವಾಗಲಿಲ್ಲ.

ಪಾರಿಯ ಸೋದರ ಹೆಕ್ಟರ ಮತ್ತು ಟ್ರಾಯದ ರಾಜಪುತ್ರ ಆನಿಯಸ್ ಇಬ್ಬರೂ ಟ್ರೋಜನ್ ವೀರರಲ್ಲಿ ಅಪ್ರತಿಮರು, (ಟ್ರೋಜನ್ ಎಂದರೆ ಟ್ರಾಯದವನು ಎಂಬ ಅರ್ಥ) ಅವರು ರಣಧೀರ ಕಂಠೀರವರು. ವರ್ಷಾನು ವರ್ಷ ನಡೆದ ಗ್ರೀಕರ ಹಲ್ಲೆಗಳನ್ನು

ಇವರೀರ್ವರೇ ತಡೆದು ಹಿಮ್ಮೆಟ್ಟಿಸಿದರು. ಟ್ರಾಯ ನಗರವನ್ನು ನಾಶವಾಗದಂತೆ ನೋಡಿಕೊಂಡರು.

ಆದರೆ ಗ್ರೀಕರಲ್ಲಿ ವೀರಾಗ್ರಣಿಯಾದ ಎಚಿಲಸ್ ಹೆಕ್ಟರನನ್ನು ಕೊಂದನು. ಆಗ ಅನಿಯಸ್ ಒಬ್ಬನೇ ನಗರ ರಕ್ಷಣೆಗಾಗಿ ಹೋರಾಡಬೇಕಾಗಿ ಬಂತು. ಏಕಾಕಿಯಾದರೂ ಏಕೈಕ ವೀರನಾದ ಆನಿಯಸ್ ಟ್ರೋಜನ್ ಪಡೆಗಳ ನಾಯಕತ್ವವನ್ನು ಅದ್ಭುತವಾಗಿ ನಿರ್ವಹಿಸಿದನು.

ಗ್ರೀಕರು ಧೈರ್ಯಗೆಟ್ಟರು. ಟ್ರಾಯ ನಗರವನ್ನು ವಶಪಡಿಸಿಕೊಳ್ಳುವದು ತಮಗೆ ಶಕ್ಯವಿಲ್ಲೆಂದು ಮನಗಂಡರು.

ಆಗ ಶಕ್ತಿಯಿಂದ ಸಾಧ್ಯವಾಗದ್ದನ್ನು ಯುಕ್ತಿಯಿಂದ ಸಾಧಿಸಬೇಕಂದು ಗ್ರೀಕರು ಯೋಚಿಸಿದರು.

ಅವರು ಮರದ ಒಂದು ಪ್ರಚಂಡ ಕುದುರೆಯನ್ನು ತಯಾರಿಸಿದರು. ಮತ್ತು ಅದರ ಹೊಟ್ಟೆಯೊಳಗೆ ತಮ್ಮ ಕೆಲವು ಆಯ್ದ ವೀರರನ್ನು ತುಂಬಿದ್ದರು. ಉಳಿದ ಎಲ್ಲ ಸೇನಾಪತಿ-ಸೇನಾಪಡೆಗಳೊಂದಿಗೆ ಗ್ರೀಕ ಹಡಗಗಳು ಹಾಯ ಬಿಚ್ಚಿ ಕಡಲಲ್ಲಿ ದೂರ ಹೊರಟಿದ್ದವು. ಗೆಲ್ಲುವ ಆಶೆ ಬಿಟ್ಟು ಯುದ್ಧಕ್ಕೆ ಶರಣು ಹೊಡೆದು ಟ್ರಾಯ ನಗರದ ಮುತ್ತಿಗೆ ಕಿತ್ತು ಗ್ರೀಕ ಸೇನೆ ತಿರುಗಿ ತನ್ನ ನಾಡಿಗೆ ಹೊರಟಿತು – ಎಂದು ಟ್ರೋಜನರು ಭಾವಿಸಿದರು.

ಆದರೆ ಗ್ರೀಕರು ಬಹಳ ದೂರ ಹೋಗಿರಲಿಲ್ಲ. ಹತ್ತಿರದ ದ್ವೀಪ ಒಂದರಲ್ಲಿ ಅಡಗಿ ನಿಂತರು. ಕುದುರೆಯ ಹೊಟ್ಟೆಯೊಳಗಿನ ಬಂಟರ ಕರ ಬಂದೊಡನೆ ಅವರು ಮರಳಿ ಬಂದು ದಾಳಿ ಮಾಡುವವರಿದ್ದರು.

ಆದರೆ ಟ್ರೋಜನ್ ದಂಡಿಗೆ ಟ್ರಾಯದ ಮಂದಿಗೆ ಇದೇನು ಗೊತ್ತು? ಅವರು ಶೂರರಾದರೂ ಸರಳ ಮನಸ್ಸಿನ ಜನ. ಅವರಿಗೆ ಹೊಟ್ಟೆ ಹಿಡಿಸದಷ್ಟು ಹಿಗ್ಗು. ಕೊನೆಗೂ

ಗ್ರೀಕರ ಶನಿ ತೊಡಗಿತು. ಹತ್ತು ವರ್ಷದ ಕಾಟ ಕಳೆದುಹೋಗಿ ಬೇಸತ್ತ್ ಜೀವ ಇಂದು ಬಿಡುಗಡೆ ಆಯಿತು ಎಂದು ಅವರು ಭಾವಿಸಿದರು.

ಟ್ರಾಯದ ಜನರೆಲ್ಲ, ಹಿರಿ-ಕಿರಿ, ಮುದಿ-ಎಳೆಯ, ಗಂಡು- ಹೆಣ್ಣು ಎಂಬ ಭೇದವಿಲ್ಲದೆ ನಗರದ ಅಗಸೆ ಬಾಗಿಲ ತೆರೆದು ಹೊರಗೆ ಬಂದರು. ಬಯಲಲ್ಲಿ ಅಲೆದಾಡಿದರು. ತಮ್ಮ ಹಗೆ ದೂರದಲ್ಲಿ ತೇಲಿಹೋಗುವುದನ್ನು ಕಣ್ತುಂಬ ನೋಡಿದರು. ಹತ್ತು ವರ್ಷ ಕಾಲ ದೊಡ್ಡ ಸೆರೆಮನೆಯಲ್ಲಿ ಇದ್ದಂತೆ ಅವರು ತಮ್ಮದೇ ನಗರ ಕೋಟೆಯಲ್ಲಿ ಕಟ್ಟಿ ಬಿದ್ದಿದ್ದರು. ಈಗ ತಿರುಗೊಮ್ಮೆ ಹಾಯಾಗಿ ಕೈಕಾಲು ಆಡಿಸಿ ಬಯಲಲ್ಲಿ ಗಾಳಿ ಬಿಸಿಲುಗಳನ್ನು ಸವಿಯಲಿಕ್ಕೆ ಟ್ರೋಜನರಿಗೆ ಅನುವು ದೊರೆಯಿತು. ಅವರು ಅತ್ತಿತ್ತ ಓಡಾಡಿದರು.

ಮತ್ತು ಫಕ್ಕನೆ ಆ ಮರದ ಪ್ರಚಂಡ ಕುದುರೆಯನ್ನು ಕಂಡರು. ಎಲ್ಲ ಜನ ಅದರ ಸುತ್ತ ಕಿಕ್ಕಿರಿದರು. ಪ್ರತಿಯೊಬ್ಬರದೂ ಅದರ ಬಗೆಗೆ ಒಂದು ಅಭಿಪ್ರಾಯ ಇದ್ದೇ ಇತ್ತು. ಪ್ರತಿಯೊಬ್ಬರೂ ಅದನ್ನು ಗಂಟಲೇರಿಸಿ ಗಂಟೆ ಬಡಿದಂತೆ ಕೂಗಿಕೊಳ್ಳುತ್ತಲೇ ಇದ್ದರು. ಈ ಕುದುರೆ ಏನು? ಎಲ್ಲಿಯದು? ಇಲ್ಲಿ ಏಕೆ? ಹೇಗೆ ಬಂತು? ಕೊನೆಗೆ ಆ ಗದ್ದಲದೊಳಗೆ ಒಬ್ಬ ಮುದುಕನ ದನಿಯೇ ಮೇಲಾಯಿತು. ಇದು ಗ್ರೀಕರು ಓಡಿಹೋಗುವ ಮುಂಚೆ ತಮ್ಮ ದೇವರಿಗೆ ಬಿಟ್ಟು ಹೋದ ಏನೋ ಹರಕೆಯ ಗೊಂಬೆ!

ಈ ಮಾತು ನೆರೆದವರಿಗೆಲ್ಲ ನಂಬಿಕೆಯಾಯಿತು. ಅವರೆಲ್ಲ ಆ ಕುದುರೆಯನ್ನು ತೇರಿನಂತೆ ಎಳೆದು ನಗರದೊಳಗೆ ತರಲು ಹೊರಟರು. ಕುದುರೆಯು ನಿಂತ ಪೀಠದ ಗಾಲಿಗಳು ಉರುಳಿದವು. ಜನಸಂದಣಿ ಸಂತಸದಿಂದ ಕೈತಟ್ಟಿ ಕೇಕೆ ಹಾಕುತ್ತ ಮಹಾ ಕೋಲಾಹಲದ ನಡುವೆ ಆ ಕುದುರೆಯನ್ನು ನಗರದೊಳಗೆ ತಂದರು.

ಟ್ರಾಯ ನಗರದ ಮಧ್ಯದಲ್ಲಿ ನಗರದೇವತೆಯ ದೂಡ್ಡ ಗುಡಿ ಇತ್ತು. ಅದರ ಇದುರಿಗೆ ಆ ದೊಡ್ಡ ಕುದುರೆಯನ್ನು ತಂದು ನಿಲ್ಲಿಸಿದರು. ಮರುದಿನ ತಮ್ಮ ದೇವರಿಗೆ

ಅದನ್ನು ಬಲಿಯಾಗಿ ಅರ್ಪಿಸಿ ಹೋಮದಲ್ಲಿ ಸುಡಬೇಕೆಂದು ಪುರಜನರೆಲ್ಲ ನಿರ್ಣಯಿಸಿ ತಮ್ಮ ತಮ್ಮ ಮನೆಗೆ ಹೋದರು.

ಆದರೆ ಆ ಮೊದಲೇ ಟ್ರಾಯ ನಗರವೇ ಹೋಮವಾಯಿತು. ಹಗಲೆಲ್ಲ ಉತ್ಸಾಹ ಉತ್ಸವದಲ್ಲಿ ಓಡಾಡಿ ಓಡಾಡಿ ದಣಿದ ಜನ ಆ ರಾತ್ರೆ ಸತ್ತುಬಿದ್ದವರಂತೆ ನಿದ್ದೆ ಹೋದರು. ನಿದ್ದೆ ಮಾಡದೆ ಜಪ್ಪನೆ ಕುಳಿತವರು ಕುದುರೆಯ ಹೊಟ್ಟೆಯೊಳಗಿನ ಧೂರ್ತ ಯೋಧರು! ನಡುರಾತ್ರೆಯಲ್ಲಿ ಕುದುರೆಯ ಹೊಟ್ಟೆಯ ಕದ ತೆರೆಯಿತು. ಒಳಗೆ ಅವಿತಿದ್ದ ಗ್ರೀಕ ವೀರರು ಒಬ್ಬೊಬ್ಬರಾಗಿ ಸದ್ದಿಲ್ಲದೆ ಹೊರಗೆ ಹಾರಿದರು. ಎಲ್ಲರೂ ಸೂಟಿಯಾಗಿ ಹಾಗೆಯೇ ನೇರವಾಗಿ ಹೋಗಿ ಕೋಟೆಯ ಬಾಗಿಲನ್ನು ತೆರೆದರು.

ಅಷ್ಟರಲ್ಲಿ ಅವರ ಗೆಳೆಯರ ಹಡಗಗಳು ಮರಳಿದ್ದವು. ಗ್ರೀಕ ಪಡೆಗಳು ದಂಡೆಗೆ ಇಳಿದು ಬಂದು ಕೋಟೆಯ ಅಗಸೆಯ ಹೊರಗೆ ಕಾದಿದ್ದವು. ಅವು ನಗರದೊಳಗೆ ಪ್ರವೇಶ ಮಾಡಿದವು. ಗ್ರೀಕ ಸೈನಿಕರೆಲ್ಲ ಕೇರಿ ಕೇರಿಗಳಲ್ಲಿ ಸುತ್ತಾಡಿ ಮನೆಗಳಿಗೆ ಬೆಂಕಿ ಇಕ್ಕಿದರು.

ಟ್ರೋಜನರೆಲ್ಲ ಒಮ್ಮೆಲೆ ದಂಗುಬಡಿದು ಎಚ್ಚತ್ತರು. ಕಂಗೆಟ್ಟರು. ನಗರದಲ್ಲಿ ಹಾಹಾಕಾರವಿದ್ದಿತು. ಆ ಮಧ್ಯರಾತ್ರಿಯ ಕಗ್ಗತ್ತಲೆಯಲ್ಲಿ ಬೆಂಕಿ ಬಿದ್ದು ಉರಿಯುವ, ಉರುಳುವ ಮನೆ ಮಾಡು ಗೋಡೆ ಗೋಪುರಗಳ ನಡುವೆ ಹೌಹಾರಿದ ಜನ ದಿಕ್ಕುಪಾಲಾಗಿ ಓಡಹತ್ತಿದರು. ಗ್ರೀಕರು ಅವರನ್ನು ಬೆನ್ನಟ್ಟಿ ಬೇಟೆ ಆಡಿದರು. ಕೈಗೆ ಸಿಕ್ಕವರನ್ನು ಕಡಿದು ಚೆಲ್ಲಿದರು.

ತಪ್ಪಿಸಿಕೊಂಡವರು ಹೇಗೋ ನಗರದ ಹೊರಗೆ ಓಡಿದರು. ಬಯಲಲ್ಲಿ ಬಂಡೆ ಮರ ಮಟ್ಟಿಗಳಲ್ಲಿ ಅವಿತುಕೊಂಡರು. ಅನೇಕರು ನೀರಿಗೆ ಹಾರಿ ಈಜಿಯೋ ಮುಳುಗಿಯೋ ಪಾರಾದರು!

ಹೀಗೆ ಜೀವ ಹಿಡಿದುಕೊಂಡು ಪಾರಾದವರಲ್ಲಿ ಈನಿಡಿಯನ್ ನಾಯಕ ಆನಿಯಸ್ ಒಬ್ಬನು.

ಅಂದಿನಿಂದ ’ಟ್ರೋಜನ್ ಕುದುರೆ’ ಭೇದದಲ್ಲಿ ಹೂಕ್ಕು ಇರಿಯುವ ಮೋಸಕ್ಕೆ ಮನೆಮಾತಾಗಿದೆ. ನಿಜಸ್ವರೂಪವನ್ನು ಮರೆಯಿಸಿ ಪರಪಕ್ಷವನ್ನು ಸೇರಿ ದ್ರೋಹ ಬಗೆದು ಸ್ವಪಕ್ಷದ ಹಿತ ಸಾಧಿಸುವ ಗುಂಪಿನ ಗತ್ತುಗಾರಿಕೆಯೇ “ಟ್ರೋಜನ ಕುದುರೆ!”

## ೨೦. ವಿಲಿಯಂ ಟೆಲ್

ಸ್ವಿಟ್ಸರ್ಲಂಡ ಯುರೋಪದ ಕಾಶ್ಮೀರ. ನಿಸರ್ಗ ಸೌಂದರ್ಯದ ನಂದನವನ. ಜೊತೆಗೆ ಅದು ನಮ್ಮ ಕೊಡಗಿನಂತೆ ರಾಜಸ್ಥಾನದಂತೆ ಸ್ವಾತಂತ್ರ್ಯದ ತೊಟ್ಟಿಲು. ಅಲ್ಲಿಯ ಜನ ಅಲ್ಲಿಯ ಹಿಮಗಿರಿ ಕಂದರದಲ್ಲಿ ಬೆಳೆದು ನಿಂತ ಹೆಮ್ಮರಗಳಂತೆಯೇ ಉನ್ನತ-ಸರಳ, ಬಲಿಷ್ಠ, ಎಂಥ ಬಿರುಗಾಳಿಗೂ ಮುರಿದುಬೀಳುವರೇ ಹೊರತು ಮಣಿದು ಮೈ ಕೊಡುವವರಲ್ಲ.

ಇಂದಿಗೂ ಯುರೋಪದ ರಾಷ್ಟ್ರಗಳು ಪುಟ್ಟ ಸ್ವಿಟ್ಸರ್ಲಂಡಿನ ಸ್ವಾತಂತ್ರ್ಯವನ್ನು ಮನ್ನಿಸುತ್ತವೆ. ಎರಡು ಮಹಾಯುದ್ಧಗಳು ನಡೆದವು. ಅದರ ಅಂಚೆ ಆಚೆ ಪ್ರಬಲ ರಾಷ್ಟ್ರಗಳು ಎದ್ದು ನಿಂತು ಯುರೋಪವನ್ನೇ ನಡುಗಿಸಿದವು. ಆದರೂ ಆ ಚಿಕ್ಕ ಚೆಲುವಿನ ಬೀಡು ಸ್ವಿಟ್ಸರ್ಲಂಡ ಯಾರೂ ಆಕ್ರಮಿಸಿಲ್ಲ.

ಆದರೆ ಈ ಸ್ವಾತಂತ್ರ್ಯ ಆ ನಾಡಿಗೆ ತಂದುಕೊಟ್ಟ ಮಹಾವೀರ ಬಹಳ ಹಿಂದೆಯೇ ಆಗಿಹೋದನು. ಆತನೇ ವಿಲಿಯಂ ಟೆಲ್, ಆರುನೂರು ವರ್ಷಗಳ ಹಿಂದೆ ಈ ದೇಶವೂ ಪಾದಾಕ್ರಾಂತವಾಗಿ ಪರದಾಸ್ಯದಲ್ಲಿ ತೊಳಲಾಡಿತ್ತು. ನೆರೆಯ ಆಸ್ಟ್ರಿಯಾ ದೇಶದ ಸಾಮ್ರಾಜ್ಯಶಾಹಿಯ ತುಳಿತಕ್ಕೆ ಅದು ಒಳಪಟ್ಟಿತ್ತು. ಆಗ ಆ ಹೆರವರ ನೊಗವನ್ನು ಕಿತ್ತೊಗೆದು ತನ್ನ ಜನ ಮೊಗವೆತ್ತಿ ನಿಲ್ಲುವಂತೆ ಮಾಡಲಿಕ್ಕೆ ಹಗಲಿರುಳೂ ಹಂಬಲಿಸಿ ಅದಕ್ಕಾಗಿ ಹೋರಾಡಿದ ಎಂಟೆದೆಯ ಬಂಟನೇ ವಿಲಿಯಂ ಟೆಲ್.

ನಮ್ಮ ಪ್ರತಾಪ ಸಿಂಹ, ಶಿವಾಜಿ ಮುಂತಾದ ರಾಷ್ಟ್ರ ಪುರುಷರಂತೆಯೇ ವಿಲಿಯಂ ಟೆಲ್ ಸ್ವಿಟ್ಸರ್ಲಂಡಿನ ಮನೆಮನೆಯಲ್ಲಿಯೂ ಒಬ್ಬ ಪವಾಡ ಪುರುಷನಾಗಿ ಪೂಜ್ಯನಾಗಿದ್ದಾನೆ. ಇವನ ಚರಿತ್ರದಲ್ಲಿ ಇತಿಹಾಸದೊಂದಿಗೆ ಕವಿಕಲ್ಪನೆಯೂ ಸೇರಿ ಕಳೆ

ಕಟ್ಟಿದೆ. ಅಂದಿನಿಂದ ಇಂದಿನವರೆಗೂ ಸ್ವಾತಂತ್ರ್ಯ ಪ್ರೀತಿ ಮತ್ತು ದೇಶಭಕ್ತಿಗಳಿಗೆ ವಿಲಿಯಂ ಟೆಲ್ ಒಬ್ಬ ಉಜ್ವಲ ಪ್ರತೀಕನಾಗಿದ್ದಾನೆ.

ಟೆಲ್‌ನ ಆಖ್ಯಾಯಿಕೆಗಳು ಸ್ವಿಟ್ಸರ್ಲಂಡಿನ ಹಳ್ಳಿಯ ಹಾಡಿನಿಂದ ಹಿಡಿದು ನಾಟಕ ಪ್ರಬಂಧಗಳವರೆಗೂ ಹೆಣೆದುಕೊಂಡಿವೆ. ಅವು ಪರಿಪರಿಯಿಂದ ಜನರ ನಾಲಿಗೆಯಲ್ಲಿ ನಲಿದಾಡುತ್ತ ಕಣ್ಮನಗಳನ್ನು ತನ್ಮಯಗೊಳಿಸುತ್ತಿವೆ.

ಅರ್ಜುನನ ಮತ್ಸ್ಯಯಂತ್ರ ಭೇದದ ಕಥೆ ನಮಗೆ ಚೆನ್ನಾಗಿ ಗೊತ್ತು. ವಿಲಿಯಂ ಟೆಲ್ಲನ ಶರಸಂಧಾನವೂ ಅಷ್ಟೇ ಅದ್ಭುತ. ಅದು ರಾಮಬಾಣದಷ್ಟೇ ಅಮೋಘ! ತನ್ನ ಈ ಅಪ್ರತಿಮ ಗುರಿಗಾರಿಕೆಯಿಂದ ಆತನು ಒಮ್ಮೆ ತನ್ನ ಹಾಗೂ ಮಗನ ಪ್ರಾಣಗಳನ್ನು ತಿರುಗಿ ಪಡೆದ ಕಥೆ ಪ್ರಪಂಚದ ಸಾಹಿತ್ಯದಲ್ಲಿಯೇ ಅತ್ಯಂತ ಜನಪ್ರಿಯ ಕಥೆಗಳಲ್ಲಿ ಒಂದಾಗಿದೆ.

ವಿಲಿಯಂ ಟೆಲ್ ಬೇಸಾಯಗಾರ, ಬೇಟೆಗಾರ-ಬಿಲ್ಲುಗಾರ, ಪ್ರಸಂಗ ಬಿದ್ದರೆ ಉತ್ತಮ ದೋಣಿಕಾರನೂ ಹೌದು. ಸ್ವಿಟ್ಸರ್ಲಂಡಿನ ಊರಿ ಎಂಬ ಬೆಟ್ಟದ ಕೊಳ್ಳದಲ್ಲಿ ಒಂದು ಚಿಕ್ಕ ಹಳ್ಳಿಯಲ್ಲಿ ಹೊಲಮನೆ ನೋಡಿಕೊಂಡು ವಾಸಿಸುತ್ತಿದ್ದನು. ಗದ್ದೆಗೆಲಸವಲ್ಲದೆ, ಕುರಿ ಸಾಕುವದು, ಬೇಟೆ ಆಡುವದು, ಹೆಜ್ಜೇನು ಹೊಡೆದ ಮಿಗಗಳ ತೊಗಲು ಕೋಡು ಇತರ ಅಡವಿಯ ಸರಕುಗಳನ್ನು ಹತ್ತಿರದ ಪೇಟೆಯ ಪಟ್ಟಣಗಳಲ್ಲಿ ಒಯ್ದು ಮಾರುವದು. ಬಿಡುವಿನಲ್ಲಿ ತನ್ನ ನಾಡಿನ ಬಿಡುಗಡೆಯ ಹಂಚಿಕೆ ಹೂಡುವದು ಇದೇ ಈ ಎದೆಗಾರನ ಬದುಕಾಗಿತ್ತು.

ಪರಾಕ್ರಮಿ ಆಗಿಯೂ ಪ್ರಾಮಾಣಿಕನು ಸ್ವಾಭಿಮಾನಿಯು ಸರಳ ಹೃದಯಿ. ಮುಂದಾಳುವಾಗಿಯೂ ಪರಿಶ್ರಮಿಯು. ಜನಪ್ರಿಯನಾಗಿಯೂ ಸಂಕೋಚ ಪ್ರಕೃತಿಯವನು-ಇಂಥ ಟೆಲ್ ಸ್ವಿಸ್ ಜನತೆಗೆ ಮಾದರಿಯ ಮಾನವನಾಗಿ ಕಂಡರೆ ಆಶ್ಚರ್ಯವಲ್ಲ.

ವಿಲಿಯಂನಿಗೆ ಒಬ್ಬನೇ ಮಗ-ವಾಲ್ಟರ್, ಚಿಕ್ಕವನಾದರೂ ತಂದೆಯಂತೆ ಮಗ, ಮರದ ಕೆಚ್ಚು ಚೆಕ್ಕೆಯಲ್ಲಿಯೂ ಇತ್ತು. ಸದಾಕಾಲವೂ ತಂದೆಯೊಂದಿಗೇ ಇರುತ್ತಿದ್ದನು. ತಂದೆಯ ಎಲ್ಲ ಕೆಲಸ ಬೊಗಸೆಗಳಲ್ಲಿ ನೆರವಾಗುತ್ತಿದ್ದನು.

ಆ ಕಾಲವು ಸ್ವಿತ್ಸರ್ಲಂಡಿಗೆ ಒಂದು ಕೇಡುಗಾಲ, ಆಸ್ಟ್ರಿಯಾದ ಸಾಮ್ರಾಜ್ಯಕ್ಕೆ ಒಳಪಟ್ಟು ದಾಸ್ಯದಲ್ಲಿ ಕೊಳೆಯುತ್ತಿತ್ತು. ಆಗ ಸ್ವಿತ್ಸರ್ಲಂಡವನ್ನು ಆಳುವ ಗೆಸ್ಲರ್ ಎಂಬ ಗವರ್ನರನ 'ನೆತ್ತಿಗೇರಿದ ಕುರುಡು ದಬ್ಬಾಳಿಕೆಗೆ' ಸ್ವಿಸ್ ಜನವೆಲ್ಲ ಹಣ್ಣಾಗಿಹೋಗಿದ್ದರು.

ಗವರ್ನರ ಗೆಸ್ಲರ್ ಲೋಕಕಂಟಕವಾಗಿದ್ದನು. ಎಷ್ಟು ಕ್ರೂರನೋ ಅಷ್ಟೇ ಕ್ಷುದ್ರ ಬುದ್ಧಿಯವನು. ಪ್ರಜೆಯ ಮಾನಗೇಡು ಮಾಡುವ ಯಾವ ಅವಕಾಶವನ್ನೂ ಆತ ಬಿಡುತ್ತಿದ್ದಿಲ್ಲ. ಸ್ವಿಸ್ ಜನ ಗುಲಾಮರೆಂಬುದನ್ನು ಅವರು ಅಡಿಗಡಿಗೆ ನೆನಪಿಡುವಂತೆ ಅವರನ್ನು ಪೀಡಿಸಲಿಕ್ಕೆ ಏನಾದರೊಂದು ದುರಾಲೋಚನೆಯನ್ನು ಆತ ಮಾಡುತ್ತಲೇ ಇರುತ್ತಿದ್ದನು.

ಅಂಥ ಒಂದು ದುಷ್ಟ ಯೋಜನೆಯಿಂದಲೇ ವಿಲಿಯಂ ಟೆಲ್ಲನ ಜಗತ್ ಪ್ರಸಿದ್ಧ ಸಾಹಸದ ಪ್ರಸಂಗ ಒದಗಿ ಬಂದಿತು.

ಗೆಸ್ಲರನ ರಾಜಧಾನಿ ಆಲ್ಟೋರ್ಫ - ವಿಲಿಯಂ ಟೆಲ್‌ನ ಹಳ್ಳಿಗೆ ಹತ್ತಿರದ ಪೇಟೆಯ ಪಟ್ಟಣವಾಗಿತ್ತು. ಸಕಲ ಪ್ರಜೆಗಳೂ ತನ್ನನ್ನು ದ್ವೇಷಿಸುತ್ತಾರೆಂಬುದು ಗೆಸ್ಲರನಿಗೆ ಗೊತ್ತಿತ್ತು. ಹಳ್ಳಿ ಕೊಳ್ಳಗಳ ಜನ ತನ್ನ ಅಳ್ವಿಕೆಯ ವಿರುದ್ಧ ದೊಂಬಿ ಎಬ್ಬಿಸುವ ಹೊಂಚು ಸಂಚುಗಳನ್ನು ಮಾಡುತ್ತಿರುವ ಸುಳಿವೂ ಅವನಿಗಿತ್ತು. ಆದ್ದರಿಂದ ಈ ಜನರ ರಾಜನಿಷ್ಠೆಯನ್ನು ಪರೀಕ್ಷಿಸಲಿಕ್ಕೆ ಈ ಮೂರ್ಖ ಗವರ್ನರನು ಒಂದು ಹಂಚಿಕೆ ಮಾಡಿದನು. ಅದು ಹಾಸ್ಯಾಸ್ಪದವಿದ್ದಷ್ಟೇ ಜನತೆಗೆ ಅಪಮಾನಾಸ್ಪದವೂ ಆಗಿತ್ತು.

ಅಲ್ಟೋರ್ಫದ ಪೇಟೆಯಲ್ಲಿ ಬೀದಿ ಕೂಟದ ಚೌಕಿನಲ್ಲಿ ಒಂದು ಕಂಬದ ಮೇಲೆ ತನ್ನ ಟೊಪ್ಪಿಗೆಯನ್ನು ಇರಿಸಿ, ಅದನ್ನು ಆ ಹಾದಿಯಲ್ಲಿ ಬರಹೋಗುವ ಪ್ರತಿಯೊಬ್ಬರೂ

ಸಲಾಮು ಹೊಡೆದು ಗೌರವಿಸತಕ್ಕದ್ದು-ಎಂದು ಗೆಸ್ಲರ್ ಕಟ್ಟಪ್ಪಣೆ ಮಾಡಿದನು. ಅಲ್ಲದೆ "ಸ್ವಿಸ್ ಗುಲಾಮರೇ, ಈ ಟೊಪ್ಪಿಗೆ ತಲೆಬಾಗಿರಿ, ಇಲ್ಲದಿದ್ದರೆ ನಿಮಗೆ ತಲೆದಂಡ" ಎಂದು ಡಂಗುರವನ್ನು ಹೊಡೆಯಿಸಿದನು. ತನ್ನ ಆಜ್ಞೆಯನ್ನು ಯಾರು ಮೀರುವರೆಂಬುದನ್ನು ಕಂಡುಹಿಡಿದು ದಂಡಿಸಲಿಕ್ಕೆ ಆ ಕಂಬದಡಿಗೆ ಒಂದು ದಂಡಿನ ಪಡೆಯನ್ನು ನೇಮಿಸಿದ್ದನು.

ವಾಡಿಕೆಯಂತೆಯೇ ಒಂದು ಸಂತೆಯ ವಾರ. ವಿಲಿಯಂ ಟೆಲ್ ತನ್ನ ಮಗ ವಾಲ್ಟರನೊಡನೆ ಆ ಪೇಟೆಯ ವ್ಯವಹಾರಕ್ಕಾಗಿ ಆಲ್ಟೋರ್ಟಿಗೆ ಬಂದನು. ಸಂತೆಯಲ್ಲಿ ತಂದ ಸರಕು ಮಾರಿ ಬೇಕಾದ ಜೀನಸು ಕೊಂಡು ತಂದೆ ಮಗ ಇಬ್ಬರೂ ಮರಳಿ ಹಳ್ಳಿಗೆ ಹೊರಟರು. ಹಾಗೆಯೇ ಬೀದಿಯ ಚೌಕಿಗೆ ಬಂದರು.

ಅವರು ಆ ದಿನವೇ ಹಳ್ಳಿಯಿಂದ ಆ ಪಟ್ಟಣಕ್ಕೆ ಬಂದವರು, ಅವರಿಗೆ ಗವ್ರ್ನರನ ಆಜ್ಞೆಯಾಗಲಿ ಆ ಟೊಪ್ಪಿಗೆ ತಲೆದಂಡದ ವಿಷಯವಾಗಲಿ ಗೊತ್ತಿದ್ದಿಲ್ಲ. ಅಲ್ಲಿ ಇದ್ದಕ್ಕಿದಂತೆ ನಡು ಚೌಕಿನಲ್ಲಿ ಕಂಬದ ಮೇಲೆ ಕೂತ ಟೊಪ್ಪಿಗೆಯನ್ನು ನೋಡಿ ವಾಲ್ಟರನಿಗೆ ತಮಾಷೆ ಅನಿಸಿತು. "ಅಪ್ಪಾ ಇದು ನೋಡು, ತಮಾಷೆಯಾಗಿದೆ" ಎಂದು ಆತ ತಂದೆಯ ಗಮನವನ್ನು ಕಂಬದತ್ತ ಎಳೆದನು.

"ಹೋ, ಕಂಬಕ್ಕೆ ಯಾರೋ ಟೊಪ್ಪಿಗೆ ಹಾಕಿದ್ದಾರೆ. ಅದೇನೆ ಇರಲಿ ನಡೆ ನಾವು ಬೇಗ ಊರು ಸೇರಬೇಕು, ಲಗು ಹೆಜ್ಜೆ ಹಾಕು, ಆ ಟೊಪ್ಪಿಗೆಯ ರಗಳೆ ನಮಗೆ ಬೇಡ, ಕತ್ತಲೆಯಾಗುವ ಮುಂಚೆ ಮನೆ ಸೇರೋಣ" ಎಂದು ಕಂಬವನ್ನು ಲೆಕ್ಕಿಸದೆ ವಿಲಿಯಂ ಮಗನ ಕೈಹಿಡಿದು ಅವಸರದಲ್ಲಿ ಮುನ್ನಡೆದನು.

ಸಿಪಾಯರಿಗೆ ಇಷ್ಟೇ ಸಾಕಾಯಿತು. "ಏ ಮೂಳಾ! ನಿಲ್ಲಲ್ಲಿ" ಒಬ್ಬ ದಂಡಾಳು ಅಬ್ಬರಿಸಿದನು. "ಹಿಂದಿರುಗು, ಗುಲಾಮನ ಸೂಕ್ಕು ನೋಡು, ಗವ್ರ್ನರ ದೊರೆಯ

ಟೊಪ್ಪಿಗೆ ಲೆಕ್ಕಿಸದೆ ಹೋಗುತ್ತಾನೆ. ತಿರುಗು ಹಿಂದೆ, ಕಂಬದ ಮುಂದೆ ನಿಂತು ಸಲಾಮು ಹೊಡೆದು ಹೋಗು."

"ಆಂ! ಇದೇನು ಹುಚ್ಚು!" ವಿಲಿಯಂ ಅಂದನು.

"ರಾಜಾಜ್ಞೆಯನ್ನು ಹುಚ್ಚೆಂದು ಬೇರೆ ಹೀಯಾಳಿಸುವೆಯಾ ಬದ್ಮಾಶ್?"

"ರಾಜಾಜ್ಞೆ?"

"ಹೌದು. ಅದೂ ಗೊತ್ತಿಲ್ಲವೆಂದು ಸೋಗು ಮಾಡ್ತೀಯಾ? ಇಲ್ಲಿ ಹಾದು ಹೋಗುವವರು ಈ ಟೊಪ್ಪಿಗೆಗೆ ಸಲಾಮು ಮಾಡಲೇ ಬೇಕು."

"ಇಲ್ಲವಾದರೆ?"

"ಇಲ್ಲವಾದರೆ ಜೇಲಿಗೆ ಹೋಗಬೇಕು. ಜೀವ ಕೊಡಬೇಕು."

"ಹೀಗೋ? ನನಗೆ ಇದೇನೂ ಗೊತ್ತಿದ್ದಿಲ್ಲ. ನಾನು ಹಳ್ಳಿಯಿಂದ ಇಲ್ಲಿ ಬಂದದ್ದು ಇಂದೇ."

"ನಿನಗೆ ಗೊತ್ತಿಲ್ಲದಿದ್ದರೆ ಅದು ನಮ್ಮ ತಪ್ಪಲ್ಲ."

"ಹಾಗಾದರೆ ಕೇಳು. ನನಗೆ ಗವ್ರ್ನರ-ಗಿವ್ರ್ನರ ಯಾರೂ ಗೊತ್ತಿಲ್ಲ. ನಿಮ್ಮ ಗೆಸ್ಲರ್ ನನ್ನ ಒಡೆಯನಲ್ಲ. ಅವನು ಆಳಿಕೆ ನಾನು ಒಪ್ಪುವದಿಲ್ಲ. ಕಂಬದ ಮೇಲಿನ ಅವನ ಟೊಪ್ಪಿಗೆಗೆ ನಾನು ಸಲಾಂ ಮಾಡುವದಿಲ್ಲ. ನನ್ನ ತಲೆಬಾಗುವದು ಒಂದೇ ಕಡೆಗೆ-ದೇವರ ಅಡಿಗೆ."

ಎಂದು ಟೆಲ್ ಮಗನೊಂದಿಗೆ ಮುಂದೆ ಅಡಿ ಇಟ್ಟನು. ಆದರೆ ಸೈನಿಕರು ಸುಮ್ಮನಿರುತ್ತಾರೆಯೇ? ಅವರು ಅವರಿಬ್ಬರನ್ನು ಮುತ್ತಿದರು. ವಿಲಿಯಂದಿಗೆ ತಾಳ್ಮೆಗೆಟ್ಟಿತು. ಆತ ಅವರನ್ನು ಪ್ರತಿಭಟಿಸಿದನು. ದಂಡಾಳುಗಳು ಪುಂಡಾಟಿಕೆಯಿಂದ

ಅವನ ಮೇಲೆ ಏರಿಹೋಗಿ ಅವನನ್ನು ಥಳಿಸಿ ಸೆರೆಹಿಡಿದರು. ಹಾದಿಹೋಕರ ಗುಂಪು ಈ ಗದ್ದಲು ನೋಡಲು ನೆರೆಯಿತು.

ಅಷ್ಟರಲ್ಲಿ ಗವರ್ನರ್ ಗೆಸ್ಲರನೆ ಆ ಹಾದಿಯಲ್ಲಿ ಬಂದನು. ಸಿಪಾಯಿಗಳು ಅವನನ್ನು ಕಂಡು ಸೆಟೆದು ನಿಂತು ಶಿಸ್ತಾಗಿ ಒಂದು ಸಲಾಂ ಹೊಡೆದು ವಿಲಿಯಂ ವಾಲ್ಟರನನ್ನು ಅವನ ಮುಂದೆ ಒಡ್ಡಿದರು.

"ಪ್ರಭುಗಳೇ, ಈ ಗುಲಾಮ ಪ್ರಭುಗಳ ಟೊಪ್ಪಿಗೆಗೆ ಸಲಾಂ ಮಾಡಲು ಒಪ್ಪಲಿಲ್ಲ. ತಂದೆ-ಮಗ ಇಬ್ಬರೂ ಅದನ್ನು ಹೀಯಾಳಸುತ್ತಿದ್ದರು."

"ಹೀಗೋ?" ಗೆಸ್ಲರನ ಕಣ್ಣು ಕೆಂಪಾಯಿತು.

"ಇಬ್ಬರನ್ನೂ ಹೆಡೆಮುರಿಗೆ ಕಟ್ಟಿ ಸೆರೆಮನೆಗೆ ಅಟ್ಟಿರಿ. ನನ್ನ ಆಜ್ಞೆ ಮುರಿದ ಪಾಪಿಗಳಿಗೆ ಘೋರ ಶಿಕ್ಷಯಾಗಲಿ! ಏ ಮೂಳಾ, ನಿನ್ನ ಹೆಸರೇನು?"

"ವಿಲಿಯಂ ಟೆಲ್"

"ವಿಲಿಯಂ ಟೆಲ್? ಮತ್ತೆ ನಿನ್ನ ಮಗ?"

"ವಾಲ್ಟರ್, ನನ್ನ ಒಬ್ಬನೇ ಮಗ."

"ಹೀಗೋ?"

ಗೆಸ್ಲರ ಕ್ಷಣಕಾಲ ತಂದೆ ಮಕ್ಕಳಿಬ್ಬರನ್ನೂ ದಿಟ್ಟಿಸುತ್ತ ಮೀಸೆ ಹುರಿಮಾಡಿಕೊಳ್ಳುತ್ತ ನಿಂತನು. ಏನೋ ದುರಾಲೋಚನೆ ಅವನ ಮಿದುಳನ್ನು ಕೊರೆಯುತ್ತಿತ್ತು. ದಂಡಾಳುಗಳು ವಿಲಿಯಂ-ವಾಲ್ಟರರನ್ನು ಸೆಳೆದೊಯ್ಯಹತ್ತಿದರು.

"ತಡೆಯಿರಿ" ಗೆಸ್ಲರ ಕೂಗಿದನು.

“ಟೆಲ್ ನಿನ್ನ ಹೆಸರು ಕೇಳಿದ್ದೆ. ನೀನೊಬ್ಬ ಹೆಸರಾಂತ ಬಿಲ್ಲುಗಾರನಂತೆ, ದೇಶದಲ್ಲೆಲ್ಲಾ ನಿನ್ನ ಗುರಿಕಾರಿಕೆಯನ್ನು ಕೊಂಡಾಡುವವರೇ.”

“ಏನೋ ಸ್ವಾಮಿ, ನನ್ನ ಜನ ಹಾಗೆ ಏನೇನೋ ಅಂದುಕೊಳ್ಳುತ್ತಾರೆ. ಆದರೆ ಈಗೇಕೆ ಅದರ ಮಾತು?”

“ಏಕೆಂದು ಹೇಳುತ್ತೇನೆ. ಕೇಳು. ನಿನ್ನ ಗುರಿಗಾರಿಕೆ ನಾನು ನೋಡಬೇಕಾಗಿದೆ. ಅದರ ಪರೀಕ್ಷೆ ಈಗ ಮಾಡುತ್ತೇನೆ. ಸಿಪಾಯರೇ, ಈ ಹುಡುಗನನ್ನು ಅಲ್ಲಿ ಆ ಸೇಬಿನ ಮರದ ಬುಡಕ್ಕೆ ನಿಲ್ಲಿಸಿರಿ. ಅವನ ತಲೆಯ ಮೇಲೆ ಒಂದು ಸೇಬಿನ ಹಣ್ಣು ಇಡಿರಿ, ಹೂಂ, ವಿಲಿಯಂ ನೋಡು, ನೀನು ಒಂದು ಬಾಣದಿಂದ ಆ ಹಣ್ಣನ್ನು ತುಂಡರಿಸಬೇಕು. ಅಂದರೆ ಈ ಸಲ ನಿನಗೆ ಆ ರಾಜದ್ರೋಹದ ದಂಡದಿಂದ ಬಿಡುಗಡೆ-ಇಬ್ಬರಿಗೂ ಬಿಡುಗಡೆ.” ಗೆಸ್ಲರ ಗುಡುಗಿದನು.

ಅಷ್ಟರಲ್ಲಿ ಸಿಪಾಯಿಗಳು ವಾಲ್ಟರನನ್ನು ಎಳೆದೊಯ್ದು ಮರದ ಬುಡಕ್ಕೆ ಬಿಗಿದು ಕಟ್ಟಿ ನಿಲ್ಲಿಸಿದರು. ಅವನ ತಲೆಯ ಮೇಲೆ ಸೇಬಿನ ಹಣ್ಣನ್ನು ಇಟ್ಟರು. ಸುತ್ತಲೂ ಜನ ಇನ್ನಿಷ್ಟು ಮುಕುರಿದರು. ತಂದೆ ಮಗನ ತಲೆಗೆ ಗುರಿ ಇಡಬೇಕು! ಹಣ್ಣಿನ ಬದಲು ತಲೆಯೇ ತುಂಡಾದರೆ?

ಗೆಸ್ಲರನ ದುರಾಲೋಚನೆಯೂ ಹಾಗೆಯೇ ಇತ್ತು. ಗುರಿ ತಪ್ಪಿ ಮಗ ಸಾಯುವವನೇ. ಆಗ ಮಗನನ್ನು ಕೊಂದ ಅಪರಾಧಕ್ಕಾಗಿ ಟೆಲ್‌ನ ತಲೆ ಉರುಳಿಸುವದು. ಒಂದು ಕಲ್ಲಿನಿಂದ ಎರಡು ಹಕ್ಕಿ ಕೊಂದು ತನ್ನ ಹಗೆಯ ವಂಶವನ್ನು ನಿರ್ಮೂಲ ಮಾಡುವದು.

“ಅಯ್ಯೋ ಸ್ವಾಮಿ! ಇದೇನು ಶಿಕ್ಷೆ ವಿಧಿಸಿದಿರಿ?” ವಿಲಿಯಂ ಸಿಟ್ಟು, ಭಯ, ದುಃಖ ಉಮ್ಮಳಿಸಿ ಬಂದು ನಡುಗುವ ದನಿಯಲ್ಲಿ ಅಂಗಲಾಚಿದನು.

"ನನ್ನ ತಪ್ಪಿಗೆ ಮಗನಿಗೇಕೆ ಶಿಕ್ಷೆ? ಅದೂ ನನ್ನ ಕೈಯಿಂದ! ನನ್ನ ಮೇಲೆ ಸೇಡು ತೀರಿಸಿಕೊಳ್ಳಿ. ನನ್ನ ಮಗನ ಮೇಲೇಕೆ?"

"ಮೂರ್ಖಾ, ನಿನ್ನ ಮೇಲೆಯೇ ಸೇಡು ತೀರಿಸಿಕೊಳ್ಳುತ್ತಾ ಇದ್ದೇನೆ. ಹಃಹಃಹಃ! ಗುರಿ ತಪ್ಪಿದರೆ ಮಗ ಸಾಯುತ್ತಾನೆ. ಆಗ ಮಗನನ್ನು ಕೊಂದ ಪಾಪಕ್ಕೆ ನಿನಗೆ ದೇಹಾಂತ ಶಿಕ್ಷೆ! ಆದರೂ ನೋಡು, ನಿನಗೆ ಇದೊಂದು ಭಾಗ್ಯದ ಸಂಧಿ; ಬಿಡುಗಡೆಯ ಒಂದೇ ದಾರಿ, ನೀನು ಮಹಾಬಿಲ್ಲುಗಾರ ಸೇಬನ್ನು ತುಂಡರಿಸಲಾರೆಯಾ? ನೋಡು, ಮಗನಿಗೂ ನಿನಗೂ ಬಿಡುಗಡೆ."

ವಿಲಿಯಂ ಟೆಲ್ಲನಿಗೆ ಬ್ರಹ್ಮೇತಿ ಸಿಟ್ಟು ಬಂತು, ಆದರು ತಾಳಿಕೊಂಡನು. ಒಮ್ಮೆ ಕವಿವಿಸಿಯಿಂದ ಮಗನತ್ತ ನೋಡಿದನು.

"ಅಪ್ಪಾ! ಏನು ನೋಡುವಿ? ಹೂಂ, ಬಾಣ ಹೂಡು, ಗುರಿ ಹಿಡಿ, ನಿನ್ನ ಗುರಿ ತಪ್ಪಿದ್ದೇ ಇಲ್ಲ, ತ್ವರೆ ಮಾಡು, ಬೇಗ ಮುಗಿಸು, ಕತ್ತಲೆ ಆಗುವ ಮುಂಚೆ ಮನೆ ಸೇರಬೇಕು."

ದೂರದಿಂದ ಮಗನ ಮಾತು ಬೆಳ್ಳಿಯ ಗಂಟೆಯಂತೆ ಕೇಳಿಬಂದಿತು. ಮರುಕ್ಷಣಕ್ಕೆ ವಿಲಿಯಂ ಮನಸ್ಸನ್ನು ಗಟ್ಟಿ ಮಾಡಿದನು. ಬತ್ತಳಿಕೆಯಿಂದ ಎರಡು ಬಾಣಗಳನ್ನು ಆಯ್ದು ತೆಗೆದನು. ಒಂದನ್ನು ಸೊಂಟದ ಪಟ್ಟಿಗೆ ಸಿಕ್ಕಿಸಿಕೊಂಡನು.

"ಆಯಿತು ಮಗು, ನಾನು ಸಿದ್ಧ, ನನ್ನ ಧೈರ್ಯವೇ ನನ್ನ ಶಕ್ತಿ, ದೇವರ ಹೆಸರು ಹೇಳು. ದೇವರೇ, ನನ್ನ ವಾಲ್ಟರನನ್ನು ಕಾಪಾಡು"

ಎಂದು ವಿಲಿಯಂನು ಇನ್ನೊಂದು ಬಾಣವನ್ನು ತಿಬ್ಬಿಗೇರಿಸಿದನು, ಬಿಲ್ಲನ್ನೆತ್ತಿ ಹುಬ್ಬು ಗಂಟಿಕ್ಕಿ ತಿಬ್ಬನ್ನು ಕಿವಿಯವರೆಗೆ ಎಳೆದನು. ನೇಟ ಬಾನ, ಹಣ್ಣು ಒಂದು ಗೆರೆ ಆಯಿತು. ಟೆಲ್‌ನ ಮೈಕೈ ಕಲ್ಲ ಅರೆ ಆಯಿತು.

ಸೂಂಯ್ ಬಾಣವು ಗಾಳಿಯನ್ನು ಸೀಳಿ ಹಾರಿತು. “ಶಾಭಾಶ್! ವಾಹವಾ! ಸೈ ವಿಲಿಯಂ ಟೆಲ್!” ಜನಸ್ತೋಮ ಬೊಬ್ಬಿರಿಯಿತು. ಬಾಣವು ಸೇಬನ್ನು ಸೀಳಿತ್ತು.

“ಭಲೆ ಟೆಲ್, ಭಲೆ ಭಲೆ!”

ಗೆಸ್ಲರ ಬಾಯಿಂದ ಉದ್ಗಾರ ಹೊರಟಿತು. “ನಿನ್ನ ಗುರಿಯೇ ಸರಿ! ನಿನ್ನ ಮಗನೂ ಸಿಂಹದ ಮರಿ! ಇನ್ನು ನಿಮಗೆ ಬಿಡುಗಡೆ, ನಾನು ಆಡಿದ ಮಾತು ತಪ್ಪುವದಿಲ್ಲ, ನಿನ್ನ ಗುರಿಯಂತೆಯೇ! ಹಃ ಹಃ ಹಃ! ಆದರೆ ನಿನ್ನ ಸೊಂಟದಲ್ಲಿ ಆ ಇನ್ನೊಂದು ಬಾಣವೇಕೆ?”

“ಸ್ವಾಮೀ, ಈಗ ಹೇಳಲು ಅಡ್ಡಿ ಇಲ್ಲ ಆ ಬಾಣ ನಿಮಗಾಗಿ ಆಗಿತ್ತು. ನನ್ನ ಬಾಣ ಗುರಿ ತಪ್ಪಿ ವಾಲ್ಟರನ ನೆತ್ತಿ ಕೊಕ್ಕಿದ್ದರೆ ಈ ಬಾಣವು ನಿಮ್ಮ ಎದೆಯನ್ನು ಹೊಗುತ್ತಿತ್ತು”

“ಎಲಾ ದುಷ್ಟಾ! ಹೀಗೋ ದ್ರೋಹಿ” ಗೆಸ್ಲರ ಆರ್ಭಟಿಸಿದನು. ಅವನ ಮೋರೆ ದ್ವೇಷದಿಂದ, ರೋಷದಿಂದ ಕಪ್ಪಿಟ್ಟಿತು.

“ಬಿಡಬೇಡಿರಿ ಗುಲಾಮನನ್ನು! ಕೈಕಾಲು ಕಟ್ಟಿ ಜೇಲಿಗೆ ಒಯ್ಯಿರಿ.” ಅವನ ಅಪ್ಪಣೆಯಾಯಿತು.

ಆಯಿತು ವಿಲಿಯಂ ಟೆಲ್‌ನಿಗೆ ಮತ್ತೆ ಬಂಧನ, ಸೈನಿಕರು ತಂದೆ ಮಗ ಇಬ್ಬರನ್ನೂ ಬಂಧಿಸಿ ಹೊರಟರು. ಗೆಸ್ಲರನ ಪರಿವಾರದೊಂದಿಗೆ.

ತುಸು ದೂರ ಹೋದೊಡನೆ ಅವರು ದೊಡ್ಡ ಹೊಳೆಯಲ್ಲಿ ಹೋಗಬೇಕಿತ್ತು. ಅವರಿಗಾಗಿ ದೋಣಿ ಸಿದ್ಧವಿತ್ತು. ದೋಣಿಯಲ್ಲಿ ಅವರು ಮುಂದರಿದರು. ಆದರೆ ಬಹಳ ದೂರ ಹೋಗಲಿಲ್ಲ, ಅಷ್ಟರಲ್ಲಿ ಬೆಟ್ಟದಿಂದ ಭಾರಿ ಹಳ್ಳ ನುಗ್ಗಿ ಬಂದಿತು. ನೀರಿನ ಸೆಳೆತ ರಭಸ ಹುಚ್ಚಾಪಟ್ಟೆ ಹೆಚ್ಚಾಯಿತು. ದೋಣಿ ಮುಂದೆ ಸಾಗಲೊಲ್ಲದು ಅಡ್ಡ ಸೆಳವಿನ ಹುಚ್ಚು ಹುದುಲಲ್ಲಿ ಸಿಕ್ಕಿ ಹೊಯ್ದಾಡಿತು. ಗೆಸ್ಲರನೂ ಸಿಪಾಯಿಗಳೂ ಪೂರ್ತಿ ಕಂಗೆಟ್ಟರು.

ಆಗ ವಿಲಿಯಂ ಟೆಲ್ ಕೂಗಿದನು-

“ಹೆದರಬೇಡಿರಿ, ನನ್ನ ಕೈಕಾಲು ನೇಣು ಬಿಚ್ಚಿರಿ, ನಾನು ದೋಣಿ ಪಾರು ಮಾಡುತ್ತೇನೆ.”

ಸಿಪಾಯಿಗಳು ಗವ್ವರ್ನರನ ಮೋರೆ ನೋಡಿದರು. ಆತ ’ಹೂಂ’ ಅಂದನು. ವಿಲಿಯಂ ದೋಣಿಯ ಚುಕ್ಕಾಣಿ ಹಿಡಿದನು ಪರಮಕೌಶಲ್ಯದಿಂದ ದೋಣಿಯನ್ನು ಅಡ್ಡ ಸೆಳೆತಗಳಿಂದ ಬಿಡಿಸಿ ನಿಧಾನವಾಗಿ ದಂಡೆಗುಂಟ ತರಹತ್ತಿದನು.

ದೋಣಿಯು ಭರದಿಂದ ಮುಂದೆ ನುಗ್ಗಿತು. ದಂಡೆಯಿಂದ ದೊಡ್ಡ ಬಂಡೆಯೊಂದು ಮರಿ ಆನೆಯಂತೆ ನೀರಿಗಿಳಿದಿತ್ತು. ಅದರಗುಂಟ ದೋಣಿ ಸಾಗಹತ್ತಿತು. ಆಗಲೇ ವಿಲಿಯಂ ತನ್ನ ಮಗನನ್ನು ಎತ್ತಿಕೊಂಡು ಮುನ್ನುಗ್ಗುವ ದೋಣಿಯಿಂದ ಬಂಡೆಗೆ ಧುಮುಕಿ ದಂಡೆಯನ್ನು ಸೇರಿ ಜಿಂಕೆಯಂತೆ ಜಿಗಿದು ಬೆಟ್ಟ ತಿಟ್ಟಗಳಲ್ಲಿ ಓಡಿ ಕಣ್ಮರೆಯಾದನು.

ದೋಣಿಯಲ್ಲಿ ಬೊಬ್ಬೆ ಎದ್ದಿತು. ಗೆಸ್ಲರ ರೇಗಾಡಿದ, ಸಿಪಾಯರು ಕೂಗಾಡಿದರು. ಆ ಗದ್ದಲು ಗೊಂದಲಗಳ ನಡುವ ದೋಣಿ ಮತ್ತೆ ದಿಕ್ಕುಗೆಟ್ಟು ಶರವೇಗದಿಂದ ಭೋರ್ಗರೆಯುವ ಹುಚ್ಚು ಹಳ್ಳದ ಸೆಳವಿಗೆ ಸಿಲುಕಿ ಎಲ್ಲಿಗೋ ತೇಲಿ ನಡೆಯಿತು.



ಬಿಳಿಕೊಕ್ಕರೆ ಮತ್ತು ವಿಶ್ವದ ಆಖ್ಯಾಯಿಕೆಗಳು ಕ್ರಮವಾಗಿ ಜಗತ್ತಿನ ಅತ್ಯುತ್ತಮ ಕತೆಗಳು ಮತ್ತು ಜಗತ್ತಿನ ಕ್ಲಾಸಿಕ್ ಎನ್ನಬಹುದಾದ ಆಖ್ಯಾಯಿಕೆಗಳನ್ನು ಒಳಗೊಂಡಿರುವ ಕೃತಿಯಾಗಿದೆ. ಅಮೇರಿಕಾ ಮತ್ತು ಇಂಗ್ಲೆಂಡಿನ ಪ್ರಸಿದ್ಧ ಕತೆಗಾರರು ಮತ್ತು ಗ್ರೀಕ್ ಮತ್ತು ಚೀನಾ. ಅಮೆರಿಕಾದ ಶ್ರೇಷ್ಠ ಲೇಖಕರ ಕೃತಿಗಳಿಂದಾಯ್ದ ಇಪ್ಪತ್ತು ಆಖ್ಯಾಯಿಕೆಗಳು ಮತ್ತು ಆರು ಕಥೆಗಳು ಇಲ್ಲಿವೆ. ಈ ಕತೆಗಳು ಮತ್ತು ಆಖ್ಯಾಯಿಕೆಗಳಲ್ಲಿ ಆತ್ಮಚರಿತ್ರಾತ್ಮಕ ಸ್ವರೂಪದ ಕತೆಗಳಿವೆ. ಆಯಾ ದೇಶಗಳ ಜನಜೀವನದ ಬದುಕಿನ ಸ್ವರೂಪದ ಚಿತ್ರಣವಿದೆ. ಮನುಷ್ಯ-ಮನುಷ್ಯರೊಳಗಿನ ಸಂಘರ್ಷಕ್ಕಿಂತ ನಿಸರ್ಗದಲ್ಲಿರುವ ಹಿಂಸಾತ್ಮಕ ಹೋರಾಟಗಳು ಕಡಿಮೆ ಮಟ್ಟದವು. ಮನುಷ್ಯ ಪ್ರಾಣಿಗಳಿಗಿಂತ ಹೆಚ್ಚು ಹಿಂಸಾಮಯಿ ಎಂಬುದರ ಚಿತ್ರಣವಿದೆ. ಮಾನವ ಮತ್ತು ಪ್ರಕೃತಿ ವಲಯದ ಮನೋಹರವಾದ ಹೋರಾಟವಿದೆ. ದೈವವು ಮಾನವನನ್ನು ಆಡಿಸಿ ಕೊಲ್ಲುವ ವಿಧಿವಿಲಾಸದ ಸ್ವರೂಪದ ವಿವರಗಳಿವೆ.

**ಕೆ.ಮರುಳಸಿದ್ದಪ್ಪ**
ಅಧ್ಯಕ್ಷರು



**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ**
ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ
ಆವರಣದ ಹಿಂಭಾಗ, ಮಲ್ಲತ್ತಹಳ್ಳಿ, ಬೆಂಗಳೂರು ೫೬೦೦೫೬

KUVEMPU BHASHABHARATHI PRADHIKAR
KBBP 0384 PRICE Rs:150/-



ಬಿಳಿಕೊಕ್ಕರೆ ಮತ್ತು ವಿಶ್ವದ ಆಖ್ಯಾಯಿಕೆಗಳು